## ೬

ರಾಗ—ನಾಟಿ ತಾಳ ಆದಿ

೧ವಂದಿಸುವುದಾದಿಯಲಿ ಗಣನಾಥನ ॥ ಪ ॥

ಸಂದೇಹ ಸಲ್ಲ ಶ್ರೀಹರಿಯಾಜ್ಞೆಯಿದಕುಂಟು ॥ ಅ. ಪ ॥

ಹಿಂದೆ ರಾವಣ ತಾನು ವಂದಿಸದೆ ಗಜಮುಖನ ।
ನಿಂದು ತಪವನು ಗೈದು ವರ ಪಡೆಯಲು ॥
ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ ।
ತಂದ ವರಗಳನೆಲ್ಲ ಧರೆಗೆ ಇಳಿಸಿದನು ॥ ೧ ॥

ಅಂದಿನಾ ಬಗೆಯರಿತು ಬಂದು ಹರಿ ಧರ್ಮಜಗೆ ।
ಮುಂದೆ ಗಣಪನ ಪೂಜಿಸೆಂದು ಪೇಳೆ ॥
ಒಂದೆ ಮನದಲಿ ಬಂದು ಪೂಜಿಸಲು ಗಣನಾಥ ॥
ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ॥ ೨ ॥

ಇಂದು ಜಗವೆಲ್ಲ ಉಮೆನಂದನನ ಪೂಜಿಸಲು ॥
ಚೆಂದದಿಂದಲಿ ಸಕಲಸಿದ್ಧಿಗಳನಿತ್ತು ॥
ತಂದೆ ಸಿರಿಪುರಂದರವಿಠಲನ ಸೇವೆಯೊಳು ।
ಬಂದ ವಿಘ್ನವ ಕಳೆದಾನಂದವನು ಕೊಡುವ ॥ ೩ ॥

---

೧) ನಮಗೆ ದೊರೆತ ಹಳೆಯ ಹಸ್ತಪ್ರತಿಯಲ್ಲಿಯೂ ಈ ಪದವು ಸಿಕ್ಕುವುದಿಲ್ಲ

## ೧೦

ರಾಗ—ಸುರಟಿ | ತಾಳ ತ್ರಿವಿಡಿ

ಶರಣು ಶರಣು ವಿನಾಯಕ ||
ಶರಣು ವಿದ್ಯಾಪ್ರದಾಯಕ || ಪ ||

ಶರಣು ಪಾರ್ವತಿತನಯಮೂರುತಿ ।
ಶರಣು ಮೂಷಕವಾಹನ || ಅ. ಪ ||

[೧]ನಿಟಿಲ ನೇತ್ರನ ವರದಸುತನೆ [೨]ನಾಗಯಜ್ಞೋಪವೀತನೆ ।
[೩]ಕಟಿಯ ಸೂತ್ರದ ಕೋಮಲಾಂಗನೆ ಕರ್ಣಕುಂಡಲ-
ಧಾರನೆ || ೧ ||

[೪]ಬಟ್ಟಮುತ್ತಿನ ಪದಕಹಾರನೆ ದಿವ್ಯಬಾಹು[೫]ಚತುಷ್ಕನೆ ।
ಇಟ್ಟ ತುಡುಗೆಯ ಹೇಮಕಂಕಣ ಪಾಶ-ಅಂಕುಶಧಾರನೆ || ೨ ||

ಕುಕ್ಷಿಮಹಲಂಬೋದರನೆ ಇಕ್ಷುಚಾಪನ ಗೆಲಿದನೆ ।
ಪಕ್ಷಿವಾಹನ[೬]ನಾದ ಪುರಂದರವಿಟ್ಠಲನ ನಿಜದಾಸನೆ || ೩ ||

---

೧) ಊ-ಎ-ಇ ನಿಟಿಲನೇತ್ರನ ದೇವಿ (ದೇವ) ಸುತನೆ. ೨) ನಾಗಭೂಷಣ ಪ್ರಿಯನೆ(ಬಹುಮತ). ೩) ಕಟಿತಟಾಂಕಿತ (ಬಹುಮತ) ಓ. ತಟಿಲ್ಲತಾಂಕಿತ ೪) ಎ. ಇ. ಊ. ಬಟ್ಟಮುತ್ತಿನ ಹಾರಪದಕನೆ. ೫) ಬಾಹುಹಸ್ತ ಚತುಷ್ಟನೆ (ಬಹುಮತ). ೬) ಅ. ಆ. ಊ-ನಾರಸಿಂಹನ ದಾಸ ಪುರಂದರವಿಠಲನೆ.

## ೧೧

ರಾಗ—ಧನ್ಯಾಸಿ　　　　　　　　　　　　　　ತಾಳ–ಆದಿ

ಗಜವದನ ಬೇಡುವೆ ಗೌರೀತನಯ　　　　|| ಪ ||

ತ್ರಿಜಗವಂದಿತನೆ ಸುಜನರ ಪೊರೆವನೆ　　　|| ಅ-ಪಲ್ಲ ||

ಪಾಶಾಂಕುಶ[1]ಧರ ಪರಮಪವಿತ್ರ ।
ಮೂಷಕವಾಹನ ಮುನಿಜನ ಪ್ರೇಮ　　　　|| ೧ ||

ಮೋದದಿಂದಲಿ ನಿನ್ನ ಪಾದವ[2]ನಂಬಿದೆ ।
ಸಾಧುವಂದಿತನೆ [3]ಅನಾದರ ಮಾಡದೆ　　　|| ೨ ||

ಸರಸಿಜನಾಭ ಶ್ರೀಪುರಂದರವಿಠಲನ ।
ನಿರುತ ನೆನೆಯುವಂತೆ [4]ವರ ದಯಮಾಡೊ !　　|| ೩ ||

---

೧) ಪಾ. ಮೂಷಕವಾಹ್ನ ಪಸುಧರ　೨) ಇ. ಓ. ತೆರೆದೋ　೩) ಬ. ಅನದ ದಿಂದಲಿ.　೪) ಇ. ಭರದಿ.

## ೧೨
## ಶ್ರೀರುದ್ರದೇವರು

ರಾಗ—ಶಂಕರಾಭರಣ ತಾಳ ಆದಿ

ಚಂದ್ರಚೂಡಶಿವಶಂಕರ ಪಾರ್ವತಿರಮಣಾ
ನಿನಗೆ ನಮೋ ನಮೋ ||ಪ||

ಸುಂದರ ಮೃಗಧರ ಪಿನಾಕಧರಹರ |
ಗಂಗಾಧರ ಗಜಚರ್ಮಾಂಬರಧರ ||ಅ. ಪ||

ನಂದಿವಾಹನಾನಂದದಿಂದ ಮೂಜಗದಿ ಮೆರೆವನು ನೀನೆ |
೧ಕಂದರ್ಪನ ಕ್ರೋಧದಿಂದ ಕಣ್ತೆರೆದು ಕೊಂದ ಉಗ್ರನು ನೀನೆ ||
ಅಂದು ಅಮೃತ ಘಟದಿಂದುದಿಸಿದ ವಿಷತಂದು ಭುಂಜಿಸಿದವನು ನೀನೆ |
ಬಂದು ಚೆಂದದಿ ಇಂದಿರೇಶ ಶ್ರೀರಾಮನ ಪೊಂದಿ ಪೊಗಳುವವ
ನೀನೆ ||೧||

ಬಾಲಮೃಕಂಡನ ಕಾಲನು ಎಳೆವಾಗ ಪಾಲಿಸಿದಾತನು ನೀನೆ |
ನೀಲಕಂಠ ಕಾಲಕೂಟವಿಷವ ಮೆದ್ದ ಶೂಲಪಾಣಿಯು ನೀನೆ |
ವಾಲಾಯುದಿ ಕಪಾಲವ ಪಿಡಿದು ಭಿಕ್ಷೆ೨ಕೇಳುವ ದಿಗಂಬರ ನೀನೆ ||
ಜಾಲಮಾಡುವ ಗೋಪಾಲನೆಂಬ ಪೆಣ್ಣಿಗೆ ಮರುಳಾದವ ನೀನೆ ||೨||

ಧರೆಗೆ ದಕ್ಷಿಣ ಕಾವೇರಿ ತೀರ ಕುಂಭಪುರನಿವಾಸನು ನೀನೆ |
ಕರದಲಿ ವೀಣೆಯು೩ನುಡಿಸುವ ನಮ್ಮ ಉರಗಭೂಷಣನು ನೀನೆ |
ಕೊರಳಲಿ ಭಸ್ಮ ರುದ್ರಾಕ್ಷಿಯ ಧರಿಸಿದ ಪರಮವೈಷ್ಣವನು ನೀನೆ |
ಗರುಡ-ಗಮನ ಶ್ರೀಪುರಂದರವಿಠಲನ ಪ್ರಾಣಪ್ರಿಯನು
ನೀನೆ ||೩||

---

೧) ಕಂದರ್ಪನ ಕ್ರೋಧದಿ ಕೊಂದ ಮಂದಹಾಸನು ನೀನೆ (ಬಹುಮತ)
೨) ಹಾಡುವಾಗ ಕೇಳ್ವ ಎಂದು ಮಾಡಿಕೊಳ್ಳಬಹುದು. ೩) ಇ. ಓ. ಗಾನವ ಮಾಡುವ.

## ೧೩

ರಾಗ—ನಾದನಾಮಕ್ರಿಯ (ಪರಜು) ತಾಳ—ಆದಿ

ಕಂಡೆ ಕರುಣಾನಿಧಿಯ | ಗಂಗೆಯ | ಮಂಡೆಯೊಳಿಟ್ಟ ದೊರೆಯ |
ರುಂಡಮಾಲೆ ಸಿರಿಯ | ನೊಸಲೊಳು | ಕೆಂಡಗಣ್ಣಿನ [೧]ಬಗೆಯ | ಹರನ ||ಪ||

ಗಜಚರ್ಮಾಂಬರನ | ಗೌರೀ | ವರ ಜಗದೀಶ್ವರನ |
[೨]ತ್ರಿಜಗನ್ಮೋಹಕನ | ತ್ರಿಲೋಚನ | ಭುಜಗಕುಂಡಲಧರನ | ಹರನ ||೧||

ಭಸಿತಭೂಷಿತ ಶಿವನ | ಭಕ್ತರ | ವಶದೊಳಗಿರುತಿಹನ |
ಪಶುಪತಿಯೆನಿಸುವನ | ಧರೆಯೊಳು | ಶಶಿಶೇಖರ ಶಿವನ | ಹರನ ||೨||

ಕಪ್ಪುಗೊರಳ ಹರನ | ಕಂ | ದರ್ಪಜಿತನ ಸಖನ |
ಮುಪ್ಪುರ ಗೆಲಿದವನ | ಮುನಿನುತ | ಸರ್ಪಭೂಷಣ ಶಿವನ | ಹರನ ||೩||

ಕಾಮಿತಫಲವೀವನ | ಭಕುತರ | ಪ್ರೇಮದಿಂ ಸಲಹುವನ |
ರಾಮನಾಮಸ್ಮರನ | ರತಿಪತಿ | ಕಾಮನ ಗೆಲಿದವನ | ಶಿವನ ||೪||

ಧರೆಗೆ ದಕ್ಷಿಣಕಾಶೀ | ಎಂದೆನಿಸುವ | ವರ ಪಂಪಾವಾಸಿ |
ತಾರಕ ಉಪದೇಶಿ | ಪುರಂದರವಿಠಲಭಕ್ತರ ಪೋಷೀ | ಹರನ ||೫||

---

(೧) ಪರಿಯ—ಎಂದು ಹೇಳುವ ರೂಢಿಯಿದೆ.

(೨) ತ್ರಿಲೋಚನ ತ್ರಿಪುರಾಂತಕ ಶಿವನ (ಪಾಠಾಂತರ)

# ಶ್ರೀಶೇಷದೇವರು

## ೧೪

ರಾಗ – ಶಂಕರಾಭರಣ ತಾಳ—ತ್ರಿವಿಡಿ

ಶೃಂಗಾರವಾಗಿದೆ ಸಿರಿರಂಗನ ಮಂಚ ।
೧ಅಂಗನೆ ಮಹಲಕುಮಿಯರಸ ಮಲಗುವ ಮಂಚ ॥ ಪ ॥

ಬಡಿಗ ಮುಟ್ಟದ ಮಂಚ । ಮಡುವಿನೊಳಿಹ ಮಂಚ ।
ಮೃಡನ ತೋಳಲಿ ನೆಲಸಿಹ ಮಂಚ ॥
ಹೆಡೆಯುಳ್ಳ ಹೊಸಮಂಚ ಪೊಡವಿ ಹೊತ್ತಿಹ ಮಂಚ ।
ಕಡಲಶಯನ ಶ್ರೀರಂಗನ ಮಂಚ ॥ ೧ ॥

೨ಕಣ್ಣು ಮೂಗಿನ ಮಂಚ ಬೆನ್ನುಬಾಗಿದ ಮಂಚ ।
ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚ ॥
ಬಣ್ಣ ಬಿಳುಪಿನ ಮಂಚ ಹೊನ್ನುಕಾದಿಹ ಮಂಚ ।
ಚೆನ್ನಿಗ ಪರೀಕ್ಷಿತನ ಪ್ರಾಣವ ಕೊಂಡ ಮಂಚ ॥ ೨ ॥

ಕಾಲಿಲ್ಲದೋಡುವ ಮಂಚ ಗಾಳಿನುಂಗುವ ಮಂಚ ।
ನಾಲಗೆಯೆರಡುಳ್ಳ ವಿಷದ ಮಂಚ ॥
ಏಳು ಹೆಡೆಯ ಮಂಚ ಮೂಲೋಕದೊಡೆಯನ ಮಂಚ ।
ಕಾಳಗದಲಿ ಕಿರೀಟಿಯ ಮುಕುಟ ಕೊಂಡ ಮಂಚ ॥ ೩ ॥

ಹಕ್ಕಿಗೆ ಹಗೆಯಾದ ಮಂಚ ರೊಕ್ಕ ಮುಟ್ಟದ ಮಂಚ ।
ರಕ್ಕಸರೆದೆದಲ್ಲಣನ ಮಂಚ ॥
ಸೊಕ್ಕುಪಿಡಿದ ಮಂಚ ಫಕ್ಕನೆ ಪೋಗುವ ಮಂಚ ।
ಲಕ್ಕುಮಿರಮಣ ಶ್ರೀಹರಿಯ ಮಂಚ ॥ ೪ ॥

---

೧) ಅ– ಅಂಗನೆಲಕುಮಿಯರಸ ಶ್ರೀರಂಗನ ಮಂಚ
೨) ಓ– ಕಣ್ಣು ಕಿವಿಯಾದ ಮಂಚ

ಅಂಕುಡೊಂಕಿನ ಮಂಚ ಅಕಲಂಕಮಹಿಮ ಮಂಚ |
ಸಂಕರುಷಣನೆಂಬ ಸುಖದ ಮಂಚ ||
ಶಂಕರನ ಕೊರಳಿಗೆ ಪದಕವಾಗಿಹ ಮಂಚ |
ವೆಂಕಟಪುರಂದರ ವಿಠಲರಾಯನ ಮಂಚ[೧] || ೫ ||

## ಶ್ರೀಭಾರತೀದೇವಿ

### ೧೫

ರಾಗ—ಕಾಂಬೋದಿ ತಾಳ—ಝಂಪೆ

ಏನು ಮರುಳಾದೆಯೋ ಎಲೆ ಭಾರತೀ || ಪ ||
ವಾನರಕುಲದೊಳಗೆ ಶ್ರೇಷ್ಠನಾದವಗೆ || ಅ. ಪ ||

ಕಣ್ಣಿಲ್ಲದವಳ ಗರ್ಭದಲಿ ಜನಿಸಿ ಬಂದು |
ನಿನ್ನ ತೊರೆದು ಬ್ರಹ್ಮಚಾರಿಯಾದ ||
[೨]ಹೆಣ್ಣಾಗಿ ಪೋಗಿ ವನವ ಕಿತ್ತೀಡಾಡಿ |
ಉಣ್ಣ ಕರೆದರೆ [೩]ಎಂಜಲೆಡೆಯನೊಯ್ದವಗೆ || ೧ ||

ಹುಟ್ಟಿದನು ಗುರುತಲ್ಪಗಾಮಿಯಾ ವಂಶದಲಿ |
ನೆಟ್ಟಿರುಳೊಳೊಬ್ಬ ಅಸುರಿಯ ಕೂಡಿದ ||
ಹೊಟ್ಟೆಗೆಂತಲೆ ಹೋಗಿ ಭಿಕ್ಷದನ್ನವನುಂಡು |
ಅಟ್ಟುಹಾಕುವನಾಗಿ ದಿನವ ಕಳೆದವಗೆ || ೨ ||

ಮುಂಡೆ ಜೋಳಾಗಿ ಭೂಮಂಡಲವ ತಿರುಗಿದ |
ಕಂಡವರು ಯಾರು ಈತನ ಗುಣಗಳ ||
ಪುಂಡರೀಕಾಕ್ಷ ಶ್ರೀಪುರಂದರವಿಠಲನ |
ಕೊಂಡಾಡುತಲಿ ಜೋಲೆಮರದ ಕೇಳಗಿದ್ದವಗೆ || ೩ ||

---

೧) ಅ– ಓಂಕಾರ ಪ್ರತಿಪಾದ್ಯಗನಂತಕಾಲದ ಮಂಚ (ಹೆಚ್ಚಿನ ಚರಣ)
೨) ಹೆಣ್ಣಾಗಿ (ಒಸುಮತ) ೩) ಅ– ಎಂಜಲಕೊಂಡು ಓಡಿದವಗೆ

## ಶ್ರೀಶಾರದಾದೇವಿ

### ೧೬

ರಾಗ—ತೋಡಿ (ಕಾಂಬೋದಿ) ತಾಳ– ಅಟತಾಳ

ಒಂದೆ ಮನದಲಿ ಭಜಿಸು ವಾಗ್ದೇವಿಯ |
ಇಂದು ಮತಿಕೊಡುವಳು ಶ್ರೀಹರಿಯ ಧ್ಯಾನದೊಳು ‖ ಪ ‖

ಹಿಂದೆ ಪ್ರಹ್ಲಾದನು ಕಮಲಜನ ಸತಿಗೆರಗಿ |
ಬಂದು ಆರಂಭಿಸಲು ಹರಿವಿಶ್ವಮಯನೆಂದು ‖
ಬಂದ ವಿಪ್ಲವ ಕಳೆದು ಭಾವಶುದ್ಧಿಯನಿತ್ತು |
ಪೊಂದಿಸಿದಳು ಶ್ರೀಹರಿಯ ಚರಣವನು ‖ ೧ ‖

ಅಂದು ದಶಮುಖನನುಜ ವಂದಿಸದೆ ವಾಣಿಯನು |
ಬಂದು ತಪವನು ಗೈಯೆ ಬಹುಕಾಲಕೆ ‖
ಅಂದದಿಂದ ಮೆಚ್ಚಿ ವರವಧಿಕ ಬೇಡೆನಲು |
ಬಂದು ಜಿಹ್ವೆಯಲಿ ನಿದ್ರೆಯನು ಬೇಡಿಸಿದಳು ‖ ೨ ‖

ಅರಿತು ಭಜಿಸಲು ಬಿಡದೆ ಅಜನರಸಿಯ ನಿತ್ಯ |
ಉರುತರವಾದ ವಾಕ್‌ಶುದ್ಧಿಯನಿತ್ತು ‖
ನಿರುತ ಶ್ರೀಪುರಂದರವಿಠಲನ ಸೇವೆಯೊಳು |
ಪರತತ್ತ್ವದ ಕಥಾಮೃತವನುಣಿಸುವಳು ‖ ೩ ‖

---

೧) ನಮಗೆ ದೊರೆತ ಹಸ್ತಪ್ರತಿಗಳಲ್ಲಿ ಇದು ಸಿಗಲಿಲ್ಲ

## ೧೭

ರಾಗ—ಮುಖಾರಿ ತಾಳ—ಆದಿ

ಪಾಲಿಸೆಮ್ಮ ಮುದ್ದು ಶಾರದೆ–ಎನ್ನ–ನಾಲಗೆಯಲಿ [೧]ನಿಲ್ಲಬಾರದೆ ‖ಪ‖
ಲೋಲಲೋಚನೆ ತಾಯೆ । ನಿರುತ ನಂಬಿದೆ ನಿನ್ನ ‖ಅ. ಪ‖

ಅಕ್ಷರಕ್ಷರ ವಿವೇಕವ—ನಿಮ್ಮ—ಕುಕ್ಷಿಯೊಳೀರೇಳು ಲೋಕವ ।
ಸಾಕ್ಷಾದ್ರೂಪದಿಂದ ಒಲಿದು ರಕ್ಷಿಸು ತಾಯೆ ‖ ೧ ‖

ಶೃಂಗಾರಪುರನೆಲೆವಾಸಿನಿ— ದೇವಿ—। ಸಂಗೀತಗಾನವಿಲಾಸಿನಿ ।
[೨]ಭೃಂಗಕುಂತಳೆ ತಾಯೆ । ಭಳಿರೇ ಬ್ರಹ್ಮನ ರಾಣಿ ‖ ೨ ‖

ಸರ್ವಾಲಂಕಾರಮಯಮೂರುತಿ—ನಿನ್ನ ಚರಣವ ಸ್ತುತಿಸುವೆ ಕೀರುತಿ
[೩]ವರದಪುರಂದರ ವಿಠಲನ ಸ್ತುತಿಸುತ ‖ ೩ ‖

## ೧೮

ರಾಗ—ವಸಂತ ತಾಳ—ಆದಿ

*ಕೊಡುಬೇಗ ದಿವ್ಯಮತಿ–ಸರಸ್ವತಿ–
ಕೊಡುಬೇಗ ದಿವ್ಯಮತಿ ‖ಪ. ‖

ಮೃಡ-ಹರಿಹಯಮುಖರೊಡೆಯಳೆ ನಿನ್ನಯ ।
ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ ‖ ಅ. ಪ. ‖

ಇಂದಿರಾರಮಣನ ಹಿರಿಯಸೊಸೆಯು ನೀನು ।
ಬಂದೆನ್ನ ವದನದಿ ನಿಂದು ನಾಮವ ನುಡಿಸೆ ‖ ೧ ‖

ಅಖಿಳವಿದ್ಯಾಭಿಮಾನಿ ಅಜನ ಪಟ್ಟದ ರಾಣಿ ।
ಸುಖವಿತ್ತು ಪಾಲಿಸೆ ಸುಜನಶಿರೋಮಣಿ ‖ ೨ ‖

ಪತಿತಪಾವನೆಯೆ ನೀ ಗತಿಯೆಂದು ನಂಬಿದ ।
ವಿತತಪುರಂದರ ವಿಠಲನ ತೋರೆ ‖ ೩ ‖

---

೧) ಟಿ. ಎ. ತಪ್ಪು ಬಾರದೆ ೨) ಎ. ಓ. ನಾಗಗಳಗಾತ್ರೆ ತಾಯೆ (ಪಾತ್ರಳೆ)
೩) ಎ. ಓ. ಗುರುಮೂರ್ತಿ *) ನಮಗೆ ದೊರೆತ ಹಸ್ತಪ್ರತಿಗಳಲ್ಲಿ ಇದು ಸಿಕ್ಕಿಲ್ಲ.

## ೧೯

ರಾಗ—ಮುಖಾರಿ ತಾಳ ಆದಿ

ನಲಿದಾಡೆ ಎನ್ನ ನಾಲಗೆ ಮೇಲೆ—ಸರಸ್ವತಿದೇವಿ ! ॥ ಪ. ॥

ಕುಣಿದಾಡೆ ಎನ್ನ ನಾಲಗೆಮೇಲೆ ॥ ಅ.ಪ. ॥

ಸಲಿಲಜೋದ್ಭವನ ವದನನಿಲಯಳೇ
ಇಳೆಯೊಳಪ್ರತಿಮ ಗುಣಾಂಬುಧಿ ತಾಯೇ ॥ ಅ. ಪ. ॥

ಘಿಲುಘಿಲು ಘಿಲ್ಲು ಗೆಜ್ಜೆಯ ನಾದ । ಭಳಿಭಳಿರೆಂಬಂದುಗೆ ।
ಹೊಳೆವ[೧] ಬೆರಳುಂಗುರ ಕಿಣಿಕಿಣಿನಾದ। ಎಳೆಯಮಾವಿನ ।
ತಳಿರ ಪೋಲುವ ದಿವ್ಯಪಾದ । ಚೆಲ್ವಪೆಂಡೆಯ ಭೇದ ॥
ನಲಿವ ಯುಗಳಜಂಘೆ । ಜಲಗುಳ್ಳೆಯಂತೆ ಜಾನು ।
ಥಳಥಳಿಸುವ ತೊಡೆ ಹೊಳೆವ ಸುಗುಣೆಯೆ ॥ ೧ ॥

ದಿನಕರಕೋಟಿತೇಜದಿ ಹೊಳೆವ । ಅನುಪಮವಾದ
ಕನಕವಸನದಿಂದಲಿ ಎಸೆವ । ಘನವಾದ ಜಘನಗ-
ಗನದಂದದಿ ಕಟಿಯಲ್ಲಿ ಮೆರೆವ । ಮಣಿದಾಮವಿಭವ ॥
ತನುಜಠರವು ಜಾಹ್ನವಿ ಸುಳಿನಾಭಿಯು ।
ಘನಸ್ತನಯುಗಳ ಚಂದನಲೇಪಿತಳೆ ॥ ೨ ॥

ದುಂಡಮುತ್ತಿನ ಕೊರಳಹಾರ । ಉದ್ದಂಡಮಣಿಪ್ರ- ।
ಚಂಡ ಮಿಣಿಮಿಣಿಸುವ ಹೊನ್ನಿನ ಸರ । ಕರಿರಾಜಪೋತನ ।
ಸೊಂಡಿಲಿನಂತೆ ಭುಜದ ಭಾರ । ನಡೆವ ಒಯ್ಯಾರ ॥
ಮಂಡಿತವಾದ ಕಂಕಣ ತೋಳ್ಬಳೆಗಳು ।
ದುಂಡುಹವಳ ಕೈಕಟ್ಟುಳ್ಳವಳೆ ॥ ೩ ॥

---

೧) ಇ. ಕಾಲುಂಗರಪಿಲ್ಲಿಯ ನಾದ

ನಸುನಗುಮುಖವು ನಾಸಾಭರಣ । ಎಸೆವ ಕಪೋಲ ।
ಹೊಸಕುಂಡಲ ಚಳತುಂಬುಳ್ಳ ಶ್ರವಣ । ಬಿಸಜದಳದಂತೆ
ಎಸೆವ ಕರ್ಣಾಂತವಾದ ನಯನ । ತಿಲಕದ ಹಸನ ॥
ಶಶಿಸೂರ್ಯರ ಆಭರಣ ಸುಶೋಭಿತೆ ।
ಕುಸುಮ ಮುಡಿದ ಮೂರ್ಧಜವುಳ್ಳವಳೇ ॥ ೪ ॥

ಸಿಂಗಾರವಾದ ಜಡೆಬಂಗಾರ । ಹೊಂಗೇದಗೆ ಮುಡಿದ ।
ಬಂಗಾರದ ಹೆರಳಿನ ರಾಗುಟಿವರ । ಭೃಂಗಾದ ಸ್ವರ ।
ಹಿಂಗದೆ ಭಕ್ತರ ಸಲಹುವ ಭಾರ । ಕಂಗಳ ಮನೋಹರ ॥
ರಂಗಪುರಂದರವಿಟ್ಠಲರಾಯನ ।
ಮಂಗಳ ಮೂರ್ತಿಯ ತೋರೆ ಶುಭಾಂಗಿ ॥ ೫ ॥

## ೨೦

ರಾಗ—ನಾಟಿ

ವರವೇದ ಪುರಾಣ ವಿವಿಧಶಾಸ್ತ್ರಂಗಳಿಗೆ ।
ಸರಸಿಜೋದ್ಭವನರಸಿ ಸರಸ್ವತಿದೇವಿಯು ।
ಪರಮ ಮುಖ್ಯಾಭಿಮಾನಿಯೆಂದು ತಿಳಿದು ।
ನಿರುತ ಭಜಿಸುವ ಜನಕೆ ನಿಜಗತಿಯ ಸಲಿಸುವ
ಸಿರಿಯರಸ ಪುರಂದರವಿಠಲ ತಾನೊಲಿವ ॥ ೧ ॥

## ಶ್ರೀವಾಯುದೇವರು

### ೨೧

ರಾಗ—ಕಾಂಬೋದಿ ತಾಳ-ರೂಪಕ

[೧]ಮುಖ್ಯಪ್ರಾಣಾ ಎನ್ನ ಗುರುವೇ ॥ ಪ ॥
ರಕ್ಕಸಾಂತಕ ಶ್ರೀರಾಮನ ನಿಜದಾಸ ॥ ಅ ಪ ॥

ತಂದೆ ನೀನೆ ಎನಗೆ ತಾಯಿ ನೀನೆ। ಬಂಧು ನೀನೆ ಎನಗೆ ಬಳಗ ನೀನೇ।
ಎಂದೆಂದಿಗೂ ನಮ್ಮೆಲ್ಲರ ರಕ್ಷಿಪನು ನೀನೇ ॥ ೧ ॥

ತಾತ ನೀನೇ ಎನಗೆ ಕರ್ತ ನೀನೇ । ವಿತ್ತನೀನೆ ಎನಗೆ ವಿಭವ ನೀನೇ ॥
ಸತ್ಯನೀನೇ ಸದಾಚಾರವು ನೀನೇ ॥ ೨ ॥

ಸುಖವು ನೀನೇ ಎನಗೆ ಸುಲಭ ನೀನೇ ।
ಏಕಾಂತ ಶ್ರೀಪುರಂದರ ವಿಠಲನ ಭಕುತ ನಿಜವು ನೀನೇ ॥ ೩ ॥

### ೨೨

ಸುಳಾದಿ

ರಾಗ—ಸಾವೇರಿ ಧ್ರುವತಾಳ

ಹನುಮಂತನ ಬಲಗೊಂಡರೆ ಹರಿಪದಸೇವೆ ದೊರೆಕೊಂಬುದು ।
ಹನುಮಂತನ ಬಲಗೊಂಡರೆ ನವವಿಧ ಭಕುತಿಯು ದೊರಕೊಂಬುದು ।
ಹನುಮಂತನ ಬಲಗೊಂಡರೆ ತಾರತಮ್ಯ-ಪಂಚಭೇದಜ್ಞಾನ
ದೊರೆಕೊಂಬುದು ।
ಹನುಮಂತನ ಬಲಗೊಂಡರೆ ದಯದಿಂದ ಪುರಂದರವಿಠಲ ತಾ
ಕೈಪಿಡಿವ ॥ ೧ ॥

ಮಟ್ಟೆತಾಳ

ಹನುಮಂತನ ಕಾಣದೆ ವಾಲಿ ಬಳಲಿದ ।
ಹನುಮಂತನ ಕಂಡು ಸುಗ್ರೀವ ಬದುಕಿದ ।
ಹನುಮಂತನ ಪ್ರಿಯ ಪುರಂದರವಿಠಲ ॥ ೨ ॥

---

೧) ಹಸ್ತಪ್ರತಿಗಳಲ್ಲಿಲ್ಲ.

ಝಂಪೆತಾಳ

ಎಂದೆಂದೂ ತನ್ನ ಮನವಗಲದೆ ಇರು ಎಂದು ।
ಅಂದೇ ಇತ್ತನು ಬೊಮ್ಮಪದವಿ ಹನುಮಂತಗೆ ।
ತಂದೆ ಶ್ರೀರಾಮಚಂದ್ರ ಪುರಂದರವಿಠಲ ।
ಅಂದೆ ಇತ್ತನು ಬೊಮ್ಮಪದವಿ ಹನುಮಂತಗೆ ॥ ೩ ॥

ಅಟ್ಟತಾಳ

ಹಬ್ಬಿದರ್ಜುನನ ಧ್ವಜಾಗ್ರಕ್ಕೆ ।
ಬೊಬ್ಬಿಟ್ಟು ಬಾಹ ಪರಬಲ ಬರಿದು ಮಾಡಿದ ।
ಸಬ್ಬಲಿ ಸೂರೆಗೊಂಡನು ಹನುಮಂತ ।
ಪುರಂದರವಿಠಲನ ಬಂಟ ಹನುಮಂತ ॥ ೪ ॥

ಆದಿತಾಳ

ರೋಮಕೋಟಿಲಿಂಗ ಹೇಮಕುಂಡಲಧರ ।
ಭೀಮ ಬೆಳೆದನು ಬ್ರಹ್ಮಾಂಡಕ್ಕೆ ।
ಸ್ವಾಮಿ ಪುರಂದರವಿಟ್ಠಲರೇಯನ ಬಲುಬಂಟ ಹನುಮಂತ ॥ ೫ ॥

ಜತೆ

ವಿಜಯೀಭವ ಹನುಮಂತ ವಿಜಯೀಭವ ಗುಣವಂತ ।
ವಿಜಯೀಭವ ಪುರಂದರವಿಠಲನ ಬಲುಬಂಟ ಹನುಮಂತ ॥

## ೨೬

ರಾಗ—ಕಲ್ಯಾಣಿ ತಾಳ—ಅಟ

*ಗೆದ್ದೆಯೊ ಹನುಮಂತಾ—ಅಸುರರ—
ಒದ್ದೆಯೊ ಬಲವಂತಾ ॥ ಪ ॥

ಬದ್ಧಾಂಜಲಿಯಿಂದ ರಘುಪತಿ ಪಾದವ
ಹೃದ್ಯದಿ ಧ್ಯಾನಮಾಡುವ ಬುದ್ಧಿವಂತ ॥ ಅ. ಪ ॥

* ಇದು ಶಿ—ಪ್ರತಿಯಲ್ಲಿ ಮಾತ್ರ ಸಿಕ್ಕುತ್ತದೆ.

ಅಂಜನಿಸುತನೀತ–ಲಂಕಾಪುರದಿ–ಅಕ್ಷಯನ ಕೊಂದಾತ ||
ಕಂಜಾಕ್ಷಿ ಸೀತೆಯ ಕಂಡು ಮುದ್ರಿಕೆಯಿತ್ತು |
ಮಂಜುಳವಾರ್ತೆಯ ತಂದ ರಾಮನ ದೂತ || ೧ ||

ಈರೇಳು ಜಗದೊಳಗೆ–ಇನ್ನುಮತ್ತೆ–ಯಾರು ಸರಿಯೊ ನಿನಗೆ ||
ವೀರ ಮಹಾಬಲ ಶೂರಪರಾಕ್ರಮ |
ಧೀರಸಮಿಾರ ಉದಾರ ಗಂಭೀರ || ೨ ||

ವಾಂಛಿತ ಫಲವೀವ–ನಾದ ಮುಖ್ಯ–ಪ್ರಾಣಮಹಾನುಭಾವ ||
ಕಿಂಚಿತ್ತು ಕಷ್ಟವ ಪಡಲೀಸ ಭಕ್ತರ್ಗೆ |
ಪಾಂಚಜನ್ಯ ಪುರಂದರವಿಠಲದಾಸ || ೩ ||

## ೨೪

ರಾಗ—ಸೌರಾಷ್ಟ್ರ ತಾಳ—ಝಂಪೆ

*ಹನುಮಂತದೇವ ನಮೋ || ಪ ||

ವನಧಿಯನು ದಾಟಿ ೧ರಾವಣನ ದಂಡಿಸಿದೆ || ಅ ಪ ||

ಅಂಜನೆಯ ಆತ್ಮದಿಂದುದಿಸಿ ನೀ ಮೆರೆದೆಯೋ |
ಕಂಜಸಖಮಂಡಲಕೆ ಕೈದುಡುಕಿದೆ ||
ಭುಂಜಿಸೀರೇಳು ಜಗಂಗಳನು ಉಳುಹಿದೆ ಪ್ರ-
ಭಂಜನಾತ್ಮಜ ಗುರುವೆ ಸರಿಗಾಣೆ ನಿನಗೆ || ೧ ||

ಹೇಮಕುಂಡಲ ಹೇಮಯಜ್ಞೋಪವೀತಖಿಳ
ಹೇಮಕಟಿಸೂತ್ರ ಕೌಪೀನಧಾರೀ ||
ರೋಮಕೋಟಿಲಿಂಗ ಸರ್ವಶ್ಯಾಮಲವರ್ಣ
ರಾಮಭೃತ್ಯನೆ ನಿನಗೆ ಸರಿಗಾಣೆ ಗುರುವೆ || ೨ ||

---

೧) ಓ–ದಾನವರ
*ಅಚ್ಚಾದ ಪ್ರತಿಗಳಲ್ಲಿಯೆ ಈ ಹಾಡು ತುಂಬ ವಿಕಾರಗೊಂಡಿದೆ.

ರಾಮ-ಲಕ್ಷ್ಮಣರ ಕಂಡಾಳಾಗಿ ನೀ ಮೆರೆದೆ
ಭೂಮಿಜೆಗೆ ಮುದ್ರೆಯುಂಗುರವನಿತ್ತೆ ॥
ಆ ಮಹಾಲಂಕಾನಗರವೆಲ್ಲವನು ಸುಟ್ಟು
ಧೂಮಧಾಮವ ಮಾಡಿ ಅಳಿದೆಯೊ ಮಹಾತ್ಮ ॥ ೩ ॥

ಅಕ್ಷಯಕುಮಾರಕನ ನಿಟ್ಟೊರಸಿ ಬಿಸುಟು ನೀ
ರಾಕ್ಷಸಾಧಿಪ ರಾವಣನು ರಣದಲಿ ॥
ವಕ್ಷಸ್ಥಳದಲ್ಲಿ ಶಿಕ್ಷಿಸಲು ಮೂರ್ಛೆಯ ಬಗೆಯ
ರಕ್ಷಿಸಿದೆ ರಕ್ಷಿಸಿದೆ ರಾಯಬಲವಂತ ॥ ೪ ॥

ಶ್ರೀಮದಾಚಾರ್ಯ ಕುಲದವನೆಂದೆನಿಸಿದೆಯ್ಯೊ
ಶ್ರೀಮಹಾಲಕುಮಿನಾರಾಯಣಾಖ್ಯ ॥
ಶ್ರೀಮನೋಹರ ಪುರಂದರ ವಿಠಲರಾಯನ
ಸೌಮ್ಯಮನದಾಳು ಹನುಮಂತ ಬಲವಂತ ॥ ೫ ॥

## ೨೫

ರಾಗ—ಕಾಪಿ (ಕಾನಡಾ) ತಾಳ—ಛಾಪೆ

ಕರವಮುಗಿದ-ಮುಖ್ಯಪ್ರಾಣ-ಕರವ ಮುಗಿದ ॥ ಪ ॥
ಕರವ ಮುಗಿದ ಶ್ರೀಹರಿಗೆ ತಾನೆದುರಾಗಿ
ಮರುಳರ (೧)ಗಸದೆದು ನೀ ಶರಣರ ಪೊರೆಯೆಂದು ॥ ಅ ಪ ॥

ಜೀವೇಶರೈಕ್ಯವು ಜಗತು ಮಿಥ್ಯವೆಂದು
ಈ ವಿಧ ಪೇಳುವ ಮಾಯಿಗಳನಳಿಯೆಂದು ॥ ೧ ॥

ಇಷ್ಟೆ ಮಾತ್ರ ಭೇದ ಅಷ್ಟೆ ಒಂದೇಯೆಂಬ
ಕ್ಷುದ್ರಕರನು ಹಿಡಿದು ಹಲ್ಗಳ ಮುರಿಯೆಂದು ॥ ೨ ॥

(೧) ಪಾ. ಗ. ಜರಿದು

ತಾರತಮ್ಯ ಪಂಚಭೇದ ಸತ್ಯವೆಂದು
[೨]ಮಾರುತಮತ ಪೊಂದಿದವರನು ಪೊರೆಯೆಂದು ॥ ೩ ॥

[೩]ಪರಿಪರಿ ಭಕ್ತರು ಹೃದಯಕಮಲದೊಳು
ನಿರುತ ಮಾಡುವ ಪೂಜೆ ನಿನಗರ್ಪಿತವೆಂದು ॥ ೪ ॥

ಹರಿಯ ಮನೋಗತವರಿತು ಮಾಡುವೆನೆಂದು
ಪುರಂದರವಿಠಲನ ಚರಣದ ಬಳಿಯಲ್ಲಿ ॥ ೫ ॥

## ೨೬

ರಾಗ – ತೋಡಿ ತಾಳ – ಆಟ

ಸೇವಕತನದ ರುಚಿಯೋ[೪]ನಳಿದೆಯೋ ।
ದೇವ ಹನುಮರಾಯ ನೀ ವೈರಾಗ್ಯ ಬೇಡಿ ॥ ಪ ॥

ಉದಧಿಯ ದಾಟಿ ಸೀತೆಯ ಕಂಡು ಬಂದಾಗ
ಮದುವೆಯ ಮಾಡೆನ್ನಬಾರದಿತ್ತೆ ॥
ಪದದಿ ಪಾಷಾಣವ ಪೆಣ್ಣಮಾಡಿದನಿಗೆ
ಇದು ಏನಾಶ್ಚರ್ಯವೊ ನೀ ಬಯಸಲೊಲ್ಲದೆ ॥ ೧ ॥

ಕ್ಷಣದೊಳು ಸಂಜೀವನಗಿರಿ ತಂದಾಗ
[೫]ಧನವನು ಬೇಡಲು ಕೊಡದಿಹನೇ ॥
[೬]ವಿನಯದ ವಿಭೀಷಣಗೆ ರಾಜ್ಯಪದವನಿತ್ತ-
ವನಿಗೆನಾಶ್ಚರ್ಯವೊ ಹನುಮ ನೀನೊಲ್ಲದೆ ॥ ೨ ॥

---

೨) ಓ–ಸಾರಮಧ್ವಮತೋದ್ಧಾರಮಾಡೆನುತಲಿ
೩) ಓ–ಪರಿಪರಿಭಕ್ತರ ಹೃದಯದಲ್ಲಿ ನಿಂದು । ನಿರುತ ಮಾಡುವ ಕರ್ಮ (ಸೇವೆ) ಹರಿಗರ್ಪಿತವೆಂದು. ೪) ಎ–ಏನರಿಯೆಯೋ ೫) ಏ–ಓ. ಹಣವೊನ್ನು
೬) ಓ–ವನಜಾಕ್ಷಿ ಸಿರಿದೇವಿ ಅರಸು ಉದಾರನಿಗೆ । ಘನವಾಗಿಹುದು ಏನು ನೀ ಬಯಸಲೊಲ್ಲದೆ ॥

ಸಾರ್ವಭೌಮನು ತಾನೆ ಮೆಚ್ಚಿ ಬಂದಾಗಲೆ
ಉರ್ವಿಯ ಬೇಡಲು ಕೊಡದಿಹನೇ ॥
ಸರ್ವವ ತೊರೆದು ಶ್ರೀಪುರಂದರವಿಠಲನ
ನಿರ್ವ್ಯಾಜಭಕುತಿಯ [1]ಬೇಡಿಕೊಂಡೆಯಲ್ಲದೆ ॥ ೩ ॥

## ೨೭

ರಾಗ—ನಾದನಾಮಕ್ರಿಯಾ    ತಾಳ—ಆದಿ

[2]ಫಟಿಕಾಚಲದಿ ನಿಂತ–ಶ್ರೀಹನುಮಂತ– ॥ ಪ ॥

ಫಟಿಕಾಚಲದಿ ನಿಂತ–ಪಟುಹನುಮಂತ ತನ್ನ
ಪಠನೆಯ ಮಾಡಲುತ್ಕಟದಿ ಪೊರೆವೆನೆಂದು ॥ ಅ ಪ ॥

ಚತುರಯುಗದಿ ತಾನು–ಮುಖ್ಯಪ್ರಾಣ–ಚತುರ ಮುಖನಯ್ಯನ ।
ಚತುರಮೂರ್ತಿಗಳನು ಚತುರತನದಿ ಭಜಿಸಿ ।
ಚತುರ್ಮುಖವಾಣಿ ಜಗಕೆ ಚತುರ್ವಿಧ ಫಲವ ಕೊಡುತ ॥ ೧ ॥

ಸರಸಿಜಭವಗೋಸುಗ–ಕರ್ಮಠದೂರ–ವರ ಚಕ್ರತೀರ್ಥಸರ ।
ಮೆರೆವ ಜಲದಿ ನಿತ್ಯ ನರಹರಿಗೆದುರಾಗಿ ।
ಸ್ಥಿರಯೋಗಾಸನದಲಿ ಕರೆದು ವರಗಳ ಕೊಡುತ ॥ ೨ ॥

ಶಂಖಚಕ್ರವ ಧರಿಸಿ–ಭಕ್ತರ ಮನಃ–ಪಂಕವ ಪರಿಹರಿಸಿ ।
ಪಂಕಜನಾಭ ಶ್ರೀಪುರಂದರವಿಠಲನ ।
ಬಿಂಕದ ಸೇವಕ ಸಂಕಟ ಕಳೆಯುತ ॥ ೩ ॥

---

೧) ಇ. ಬೇಡಿಬಯಸಿದ.
೨) ಎ. ಓ. ಪ್ರತಿಗಳಲ್ಲಿ ಸಿಕ್ಕುತ್ತದೆ.

## ೨೮

ರಾಗ—ಮೋಹನ ತಾಳ—ಅಟ

[೧]ಮೂಮುರ್ಖು ಭಾಪುರೆ ಭಳಿರೆ ಹನುಮಂತ
ರಾಮಪದ ಸೇವಿಪ ವೀರ ಹನುಮಂತ ‖ ಪ ‖

ಹುಟ್ಟುತಲೆ ಹೊನ್ನ ಕಚ್ಚುಟವ ಕುಂಡಲವೆರಸಿ
ನಿಷ್ಠೆಯಲಿ ರಘುಪತಿಯ ಪಾದವನೆ ಕಂಡು ‖
ದಿಟ್ಟಿ ಹರಿದಾಡಿ ಮನಮುಟ್ಟಿ ಪೂಜಿಸಲಜನ
ಪಟ್ಟಕನುವಾದ ಸಿರಿವಂತ ಹನುಮಂತ ‖ ೧ ‖

ಅಂಬರಕೆ ಪುಟನೆಗೆದು ಅಂಬುಧಿಯ ನೆರೆ ದಾಟಿ
ಕುಂಭಿನಿಯ ಮಗಳಿಗುಂಗುರವನಿತ್ತು ‖
ಬೆಂಬಿಡದೆ ಲಂಕೆಯನು ಸಂಭ್ರಮದಿ ಸಖಿಗಿತ್ತೆ
ಗಂಭೀರ ವೀರಾಧಿವೀರ ಹನುಮಂತ ‖ ೨ ‖

ಅತಿದುರುಳ ರಕ್ಕಸನು ರಥದ ಮೇಲಿರಲು ರಘು-
ಪತಿಯು ಪದಚರಿಯಾಗಿ ನಿಂತಿರಲು ನೋಡಿ ‖
ಪೃಥಿವಿ–ಗಗನಕೆ ಬೆಳೆದು ರಥವಾದೆ ಒಡೆಯನಿಗೆ
ಅತಿಭಯಂಕರ ಸತ್ತ್ವವಂತ ಹನುಮಂತ ‖ ೩ ‖

ಒಡೆಯ ಉಣಕರೆಯಲಂದಡಿಗಡಿಗೆ ಕೈಮುಗಿದು
ದೃಢಭಕ್ತಿಯಿಂದ ಮೌನದಿ ಕುಳಿತು ‖
ಎಡೆಯಕೊಂಡೆದ್ದೋಡಿ ಗಗನದಿ ಸುರರಿಗೆ
ಕೊಡುತ ಸವಿದುಂಡ ಗುಣವಂತ ಹನುಮಂತ ‖ ೪ ‖

ಪ್ರಥಮದಲಿ ಹನುಮಂತ ದ್ವಿತೀಯದಲಿ ಕಲಿಭೀಮ
ತೃತೀಯದಲಿ ಗುರುಮಧ್ವಮುನಿಯೆನಿಸೀ ‖
ಪ್ರತಿಯಿಲ್ಲದಲೆ ಮೆರೆದೆ ಪುರಂದರ ವಿಠಲನ
ಸುತ್ತ ನಿನಗಾರು ಸರಿ–ವಿಜಯಹನುಮಂತ ‖ ೫ ‖

---

೧) ಹಸ್ತಪ್ರತಿಗಳಲ್ಲಿಲ್ಲ.

## ೨೯

ರಾಗ—ಶಂಕರಾಭರಣ ಅಟತಾಳ

*ಆ ರಣಾಗ್ರದಿ ಭೀಮಗಡ್ಡಯಿಪರಾರು ? ।
ವಾರಿಧಿ ಮೇರೆದಪ್ಪಲು ನಿಲ್ಲಿಸುವರಾರು ? ॥ ಪ. ॥

ನಾನಾದೇಶದ ಭೂನಾಯಕರಿದ್ದರಲ್ಲವೆ
ತಾನು ದುಶ್ಯಾಸನನ ತತ್ತರಿವಾಗ ॥
ಮೌನಗೊಂಡರಲ್ಲದೆ ಮುಂಕೊಂಡು ಬಿಡಿಸಿದರೆ
ಆನೆಯ ಕೈಯ ಕಬ್ಬಿಗೆ ಅಂಗಯಿಸುವರಾರು ? ॥ ೧ ॥

ಘುಡುಘುಡಿಸುತ ರಾಯ ಕುರುಪತಿಯನು ಕೆಡಹಿ
ತೊಡೆಗಳನು ಗದೆಯಿಂದ ತುಂಡಿಸುವಾಗ ॥
ಕಡುಕೋಪದವ ಹಲಧರನೇನ ಮಾಡಿದ ?
ಬಡವನ ಕೋಪ ದವಡಿಗೆ ಮೃತ್ಯುವಲ್ಲವೆ ? ॥ ೨ ॥

ಸಂದಿಗೆ ಸಾವಿರ ಸಿಂಹಸತ್ತ್ವದ ಕೀಚಕನ
ಕೊಂದು ಬಿಸುಡುವಾಗ ಮುಂಕೊಂಡರುಂಟೆ ? ॥
ಚೆಂದದಿ ಪುರಂದರವಿಠಲದಾಸರು ಮನ-
ದಂದಕೆ ಬಂದಂತೆ ನಡೆದುದೆ ಮಾರ್ಗ ॥ ೩ ॥

*ಬ—ಹಸ್ತಪ್ರತಿಯಲ್ಲಿ ಮಾತ್ರ ಈ ಹಾಡು ಇದೆ.

## ೩೦

ರಾಗ—ಶಹನ ತಾಳ—ಆದಿ

ಎಂಥ ಬಲವಂತನೊ-ಕುಂತಿಯ ಸುಜಾತನೋ |
ಭಾರತಿಗೆ ಕಾಂತನೊ-ನಿತ್ಯ ಶ್ರೀಮಂತನೋ ॥ ಪ ॥

ರಾಮಚಂದ್ರನ ಪ್ರಾಣನೊ-ಅಸುರಹೃದಯ ಬಾಣನೊ |
ಖಳರ ಗಂಟಲ ಗಾಣನೊ-ಜಗದೊಳಗೆ ಪ್ರವೀಣನೊ ॥ ೧ ॥

ಬಂಡಿಯನ್ನವನುಂಡನೊ-ಬಕನ ಪ್ರಾಣವ ಕೊಂಡನೊ |
ಭೀಮಪ್ರಚಂಡನೊ-ದ್ರೌಪದಿಗೆ ಗಂಡನೋ ॥ ೨ ॥

ಕುಂತಿಯ ಕಂದನೊ-ಸೌಗಂಧಿಕವ ತಂದನೋ |
ಕುರುಕ್ಷೇತ್ರಕೆ ಬಂದನೊ-ಕೌರವರ ಕೊಂದನೋ ॥ ೩ ॥

ವೈಷ್ಣವಾಗ್ರಗಣ್ಯನೋ-ಸಂಚಿತಾಗ್ರಪುಣ್ಯನೋ |
ದೇವವರೇಣ್ಯನೊ-ದೇವಶರಣ್ಯನೋ ॥ ೪ ॥

ಮಧ್ವಶಾಸ್ತ್ರವ ರಚಿಸಿದನೊ-[೧]ಸದ್ವೈಷ್ಣವರ ಸಲಹಿದನೊ |
ಉಡುಪಿ ಕೃಷ್ಣನ ನಿಲಿಸಿದನೊ-ಪುರಂದರವಿಠಲನ
[೨]ಒಲಿಸಿದನೊ ॥ ೫ ॥

೧) ಅ-ಅದ್ವೈತವ ಮಥಿಸಿದನೊ ೨) ದಾಸನೋ (ಬಹುಮತ)

## ೩೧

ರಾಗ—ಸಾವೇರಿ                ತಾಳ—ಅಟ

ಶ್ರೀಮಧ್ವರಾಯರ ಸೇವೆ ದೊರಕುವುದು
ಜನುಮ ಸಫಲ ಕಾಣಿರೋ || ಪ ||

ಶ್ರೀಮದಾನಂದತೀರ್ಥರ ಪಾದವ ನೆನೆವರು
ಸಾಮಾನ್ಯ ಸುರರು ಕಾಣೆ–ಬೊಮ್ಮನ ಆಣೆ || ಅ. ಪ ||

ಜಗತು ಸತ್ಯವು ಅಲ್ಲ ಜಡ-ಜೀವ ಭೇದವಲ್ಲ
ಅಗುಣನು ಪರಬೊಮ್ಮನು- ||
ಹೀಗೆ ನುಡಿವ ಜನರ ನಿಗಮಶಾಸ್ತ್ರದಿ ಗೆದ್ದು
ಜಗ ಸತ್ಯ ಸಗುಣ ಬ್ರಹ್ಮ ಎಂದು ಪೇಳುವ || ೧ ||

ಹರಿಸರ್ವೋತ್ತಮ ನಿತ್ಯ ತರುವಾಯ ರಮಾದೇವಿ
ತರುವಾಯ ವಿಧಿಪ್ರಾಣರು ||
ಸರಸ್ವತಿ ಭಾರತಿ ಗರುಡ ಅನಂತ ರುದ್ರ
ತರುವಾಯ ಆರು ದೇವಿಗಳು || ೨ ||

ಸೌಪರ್ಣಿ ವಾರುಣಿದೇವಿ ಅಪರ್ಣಾದೇವಿಯರು ಸಮರು !
ದ್ವಿಪದಿ ಮುನ್ವಾದಿಗಳು ||
ಈಪರಿ ತಾರತಮ್ಯ ಜಪ-ಧ್ಯಾನಾರ್ಚನೆಯಿಂದ
ಅಪವರ್ಗದನ ಸೇವೆಯ ಮಾಡಿರೊ ಎಂಬ || ೩ ||

ಒಂದೊಂದು ಯುಗದಲಿ ಅನಂತಸೇವೆಯ ಮಾಡಿ
ಚೆಂದದಿಂದಲಿ ಲಾಲಿಸಿ ||
ಇಂದಿರಾರಮಣ ಗೋವಿಂದನೇ ದೈವವೆಂದು ।
ಸಂದೇಹವಿಲ್ಲದೆ ಸಾಧಿಸಿ–ಮಾಯೀ ಸೋಲಿಸಿ || ೪ ||

ಹಿಮಗಿರಿಯಿಂದ ಸೇತುವೆಯ ಪರ್ಯಂತರ
ಭ್ರಮಿಸುತ ಸುಜನರಿಗೆ ||
ಕ್ರಮತತ್ತ್ವ ಬೋಧಿಸಿ ಕಮಲನಾಭನ ಮೂರ್ತಿ
ಕ್ರಮವಾಗಿ ಸ್ಥಾಪಿಸಿ ಪೂಜಿಸಿರುವ || ೫ ||

ಭೂತಳದೊಳು ರೌಪ್ಯಪುರದಿ ನೆಲಸಿ ಗೆದ್ದು
ಧಾತ್ರೀಮುದ್ರೆಯ ತೋರಿಸಿ ॥
ಈತನೇ ಹನುಮಂತ ಈತನೇ ಭೀಮಸೇನ।
ಈತನೇ ಭವಿಷ್ಯದ ಬ್ರಹ್ಮ ಜೀವೋತ್ತಮ ॥ ೬ ॥

ಶ್ರೀಮದನಂತನೆ ಅನಂತಕಾಲಕೆಯೆಂದು ।
ಯಮಕ ಭಾರತತೋರಿಸಿ ॥
ಸ್ವಾಮಿಸರ್ವಾಂತರ್ಯಾಮಿ । ಸರ್ವಗುಣಪೂರ್ಣನೆಂದು
ಪ್ರೇಮಿಪುರಂದರ ವಿಠಲನ ದಾಸನಾದ ॥ ೭ ॥

## ೩೨

ರಾಗ—ಭೂಪಾಳಿ ತಾಳ—ಆದಿ

ಮಧ್ವರಾಯರ ನೆನೆದು ಶುದ್ಧರಾಗಿರೊ ।
ಹೊದ್ದಿ ವೈಷ್ಣವಮತ ಭವಾಬ್ಧಿ ದಾಟಿರೊ ॥ ಪ ॥

ಉದಯದಲ್ಲಿ ಏಳುವಾಗ [೧]ನದಿಯ ಸ್ನಾನಮಾಡುವಾಗ
ಒದಗಿ ನಿತ್ಯ ಕರ್ಮಗಳನು ನಡೆಸುವಾಗ ॥
ಹೃದಯದಲ್ಲಿ [೨]ಬೀಜಾಕ್ಷರ ಮಂತ್ರಗಳನು ಜಪಿಸುವಾಗ
ಸದಮಲಾನಂದ ಹನುಮನನ್ನು ನೆನೆಯಿರೊ ॥ ೧ ॥

ಕಾಮವಿಲ್ಲದ ಹರಿಯಪೂಜೆ ವೈಶ್ವದೇವಮಾಡುವಾಗ
ಪ್ರೇಮದಿಂದ ವೈಷ್ಣವರ ಅರ್ಚಿಸುವಾಗ ॥
ಆ ಮಹಾ ಭಕ್ಷ್ಯಭೋಜ್ಯ ಆರೋಗಣೆ ಮಾಡುವಾಗ
ನೇಮದಿಂದ ಕೌರವಾಂತಕ ಭೀಮಸೇನನ ನೆನೆಯಿರೊ ॥ ೨ ॥

ಕರಗಳನ್ನು ತೊಳೆದು ತೀರ್ಥ ತುಳಸೀದಳವ [೩]ಮೆಲ್ಲುವಾಗ
ಪರಿಪರಿಯ ಪುಷ್ಪವೀಳ್ಯ ಅರ್ಪಿಸುವಾಗ ||
ಸರುವಾಂತರ್ಯಾಮಿ ಗುರುಮಧ್ವರಂತರಾತ್ಮಕ
ಪುರಂದರವಿಠಲಗೆ ಸಮರ್ಪಣೆ ಮಾಡಿರೊ ॥ ೩ ॥

---

೧) ಮುದದಿ (ಬಹುಮತ) ೨) ಅ. ಬೀಜಮಂತ್ರ
೩) ಈಯುವಾಗ (ಬಹುಮತ)

## ೩೩

ರಾಗ—ಸೌರಾಷ್ಟ್ರ ತಾಳ—ಅಟ

೧ನೆನೆವೆನು ಅನುದಿನ ನಿಮ್ಮ ಮಹಿಮೆಯನು-ಮಧ್ವರಾಯಾ ।
ಸನಕಾದಿ ಮುನಿವೃಂದಸೇವಿತ ಪಾದಾಬ್ಜ–ಮಧ್ವರಾಯಾ ॥ ಪ ॥

ಕಲಿಮಲದಿಂ ಜ್ಞಾನ ಕಲುಷಿತವಾಗಲು–ಮಧ್ವರಾಯಾ ।
ನಳಿನಾಕ್ಷನಾಜ್ಞೆಯಿಂದಿಳೆಯೊಳಗುದಿಸಿದೆ–ಮಧ್ವರಾಯಾ ॥ ೧ ॥

ಗೋವಿತ್ತ ವಿಪ್ರಗೆ ನಿರುತ ಮೋಕ್ಷವನಿತ್ತ–ಮಧ್ವರಾಯಾ ।
ಜೀವೇಶರೊಂದೆಂಬ ಮತವ ಭೇದಿಸಿದೆ–ಮಧ್ವರಾಯಾ ॥ ೨ ॥

ಸೂತ್ರಾರ್ಥಂಗಳನೆಲ್ಲ ವೇತೃಗಳಿಗೆ ತಿಳಿಸಿ–ಮಧ್ವರಾಯಾ ।
ಶಾಸ್ತ್ರದ ತಾತ್ಪರ್ಯ ಪ್ರಕರಣ ರಚಿಸಿದೆ–ಮಧ್ವರಾಯಾ ॥ ೩ ॥

ಸುಜನರ ಹೃದಯದಿ ಸೇರಿದ್ದ ತಮಸಿಗೆ–ಮಧ್ವರಾಯಾ ।
ನಿಜಜ್ಞಾನ ರವಿಯಂತೆ ಕಿರಣವ ಹರಡಿದೆ–ಮಧ್ವರಾಯಾ ॥ ೪ ॥

ವ್ಯಾಸದೇವರಿಗಭಿವಂದಿಸಿ ಬದರಿಯಲಿ–ಮಧ್ವರಾಯ ।
ಶ್ರೀಶಪುರಂದರವಿಠಲದಾಸನಾದೆ–ಮಧ್ವರಾಯಾ ॥ ೫ ॥

## ೩೪

ರಾಗ—ಆನಂದಭೈರವಿ ತಾಳ—ಏಕ

ಇದಿರಾರೊ–ಗುರುವೆ–ಸಮರಾರೊ ॥ ಪ ॥

ಮದನಜನಕಪ್ರಿಯ ಗುರುಮಧ್ವರಾಯ ॥ ಅ ಪ ॥

ಸನ್ನುತಮಹಿಮ ಪ್ರಸನ್ನವದನ ನಿನ-
ಗನ್ಯನಲ್ಲವೊ ನೀನೆನ್ನ ರಕ್ಷಿಸಬೇಕೋ ॥
ನಿನ್ನ ನೋಡಿದವರ್ಧನ್ಯರಾಗುವರು
ನಿನ್ನ ದಯಾಮೂರ್ತಿ ಮನ್ನಿಸಿ ನೋಡೋ ॥ ೧ ॥

---

೧) ಒ. ಪ್ರತಿಯಲ್ಲಿ ಅಷ್ಟೇ ನಿಶ್ಚಿತ್ತದೆ.

ದುರ್ಜನರನು ಗರ್ಜನೆಯಿಂದ ಓಡಿಸಿ
ಸಜ್ಜನರನು ಸಂರಕ್ಷಿಸಿದಾತನೆ ।
ಈ ಜಗದಲಿ ಮಧ್ಯಗೇಹರ ಪತ್ನಿಯು
ಪೂಜ್ಯ ಜಠರದಲಿ ಜನಿಸಿದ ಧೀರ ॥ ೨ ॥

ವೇದಶಾಸ್ತ್ರಗಳಿಂದ ಮಾಯಿಗಳ ಖಂಡಿಸಿ
ಸಾಧಿಸಿ ಹರಿಯೆ ಸರ್ವೋತ್ತಮನೆಂದು ॥
ಮೋದಭರಿತವಾದ ದಿವ್ಯಶಾಸ್ತ್ರವ ಗೈದ
ಮೋದತೀರ್ಥ—ಪುರಂದರವಿಠಲದಾಸ ॥ ೩ ॥

## ೩೫

ರಾಗ—ನಾದನಾಮಕ್ರಿಯ ತಾಳ—ಏಕ

ಕೂಸನು [೧]ಕಂಡಿರಾ— ಮುಖ್ಯಪ್ರಾಣನ ಕಂಡಿರಾ[೨] ॥ ಪ ॥

ಅಂಜನೆಯುದರದಲಿ [೩]ಹುಟ್ಟಿತು ಕೂಸು
ರಾಮರ ಪಾದಕ್ಕೆರಗಿತು ಕೂಸು ॥
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು ॥ ೧ ॥

[೪]ಬಂಡಿಯನ್ನವನುಂಡಿತು ಕೂಸು ।
ಬಕನ ಪ್ರಾಣವ ಕೊಂಡಿತು ಕೂಸು ।
ವಿಷದ ಲಡ್ಡುಗೆಯ ಮೆದ್ದಿತು ಕೂಸು ।
ಮಡದಿಗೆ ಪುಷ್ಪವ ತಂದಿತು ಕೂಸು ॥ ೨ ॥

---

೧) ಗ. ಕಾಣಿರೆ
೨) ಎ–ಬಾಲಕನ ಕಂಡೀರಾ ಬಲವಂತನ ಕಂಡೀರಾ ॥ (ಅ ಪ)
೩) ಜನಿಸಿತು (ರೂಢಿ) ೪) ಗ–ಮೀಸಲನ್ನವನುಂಡಿತು ಕೂಸು.

[೧]ಮಾಯಾವಾದಿಗಳ ಗೆದ್ದಿತು ಕೂಸು
ಮಧ್ವಮತವನ್ನುದ್ಧರಿಸಿತು ಕೂಸು |
ಮುದ್ದು ಶ್ರೀಪುರಂದರ ವಿಠಲನ ದಯದಿಂದ
ಉಡುಪಿಯಲ್ಲಿ ಬಂದು ನಿಂತಿತು ಕೂಸು ‖ ೩ ‖

### ೩೬

ರಾಗ—ಮಧ್ಯಮಾವತಿ ತಾಳ—ಆದಿ

[೨]ಸ್ವಾಮಿ ಮುಖ್ಯಪ್ರಾಣ– ನೀ–ಮಲೆವರ ಗಂಟಲಗಾಣ ‖ ಪ ‖
ಸಕಲವಿದ್ಯಾ ಪ್ರವೀಣ–ನೀ–ಹಿಡಿದೆಯೊ ರಾಮರ ಚರಣ ‖ ಅ ಪ ‖

ಏಕಾದಶೀಯ ರುದ್ರ–ನೀ–ಹಿಡಿದೆಯೊ ರಾಮರ ಮುದ್ರಾ |
ಸೇತುವೆಗಟ್ಟಿ ಸಮುದ್ರ –ನೀ–ಹಾರಿದೆಯೋ ಬಲಭದ್ರ ‖ ೧ ‖

ಸಂಜೀವಿನಿ ಪರ್ವತವನ್ನು–ಅಂಜದೆ ತಂದೆಯೊ ನೀನು |
ಅಂಜನೆ ತನುಸಂಭವನು– ನಿನ್ನ–ಬೇಡಿಕೊಂಬೆನೋ ನಾನು ‖ ೨ ‖

ವೈಕುಂಠಸ್ಥಳದಿಂದ ಬಂದು–ಪಂಪಾಕ್ಷೇತ್ರದಿ ನಿಂದು |
ಯಂತ್ರೋದ್ಧಾರಕನೆಂದು-ಪುರಂ–ದರ ವಿಠಲನೆ ಸಲಹೆಂದು ‖ ೩ ‖

---

೧) ಒಂದು ಎರಡು ಚರಣಗಳ ಕ್ರಮ ತಪ್ಪಿದೆ (ಬಹುಮತ)
೨) ಓ–ತಪ್ಪುತಪ್ಪಾಗಿ ಅಚ್ಚಾಗಿದೆ.

೩೭

ರಾಗ— ದ್ವಿಜಾವಂತಿ ತಾಳ—ಆದಿ

ನೆನೆಯಿರೊ ಭಕುತ ಜನರು—ಅನುದಿನವೂ
ನೆನೆಯಿರೊ ಭಕುತ ಜನರುಗಳು || ಪ ||

ಘನಮಹಿಮನ ಸೇವೆಯ ಮಾಡಿದರಾ
ಮನದಲಿ ನೆನೆದ ಅಭೀಷ್ಟವೀವ ಹನುಮಂತ || ಅ ಪ ||

ಒಂದು ಯುಗದಿ ಹನುಮಂತಾವತಾರನಾಗಿ
ಬಂದು ನೆರೆದಯೋಧ್ಯಾಪುರಕಾಗಿ ||
ಬಂದ ಧೀರನ ನೋಡಿ—ಸುಜನರೆಲ್ಲ—ನಂದದಿಂದಲಿ ಪಾಡಿ || ೧ ||

ವಾಯುಕುಮಾರಕ ದ್ವಾಪರದಲಿ ಭೀಮ-
ರಾಯನೆಂದೆನಿಸಿದ ಕೌರವ ಬಲದಿ ||
ನಾಯಕನಾಗಿ ಬಂದ—ದುಃಶಾಸನ—ಕಾಯವಳಿದು ನಿಂದ || ೨ ||

ಕಾಯಜಪಿತನ ಮುಂದೆ ಕೌರವರ ತರಿದು ರಾಜ-
ಸೂಯ ಯಾಗವ ಮಾಡಿದ ಬಲವಂತ ||
ರಾಯರಾಯರ ಧೀರ—ಹನುಮಂತ—ಪ್ರೀಯಜನ-
ಮಂದಾರ || ೩ ||

ಗುರುಮಧ್ವಮುನಿಯಾಗಿ ಹರಿಗತಿಪ್ರಿಯನಾಗಿ-
ಕರುಣಾಕರನಾಗಿ ಶರಣರ ಪೊರೆವ ||
ಮೆರೆವ ಶ್ರೀಹನುಮಂತನ—ದೇವನ—ಸ್ಮರಿಸಿರೊ
ಗುಣವಂತನ || ೪ ||

ಲಂಕಾಪಟ್ಟಣದ ಸಮೀಪ ಸಮುದ್ರ ದಾಟಿ
ಪಂಕಜನಾಭ ಶ್ರೀಪುರಂದರವಿಠಲನ ||
ಲೆಂಕ ರಾವಣನ ಗೆದ್ದ—ಈ ಹನುಮಂತ—ಪಂಕಜ
ಮುಖಿಯ ಕಂಡ || ೫ ||

## ೩೮

ರಾಗ– ಕಲ್ಯಾಣಿ ತಾಳ— ಆಟ

ಅಂಜಿಕಿನ್ನೇತಕಯ್ಯ–ಸಜ್ಜನರಿಗೆ
ಅಂಜಿಕಿನ್ನೇತಕಯ್ಯ ॥ ಪ ॥
ಸಂಜೀವರಾಯರ ಸ್ಮರಣೆ [೧]ಮಾಡಿದ ಮೇಲೆ ॥ ಅ ಪ ॥

ಕನಸಿನೊಳ್ ಮನಸಿನೊಳ್ ಕಳವಳ[೨]ವೇತಕೆ ।
ಹನುಮನ ನೆನೆದರೆ ಹಾರಿ[೩]ಹೋಹುದು ಪಾಪ ॥ ೧ ॥

ರೋಮರೋಮಕೆ ಕೋಟಿ ಲಿಂಗವುದುರಿಸಿದ ।
ಭೀಮನ ನೆನೆದರೆ ಬಿಟ್ಟು ಹೋಹುದು ಪಾಪ ॥ ೨ ॥

ಪುರಂದರ ವಿಠಲನ [೪]ಪೂಜೆಯ ಮಾಡುವ ।
ಗುರುಮಧ್ವರಾಯರ ಸ್ಮರಣೆ ಮಾಡಿದ ಮೇಲೆ ॥ ೩ ॥

## ೩೯

ರಾಗ—ಕಲ್ಯಾಣಿ ತಾಳ— ಅಟ

ಗುರುರಾಯರ ನಂಬಿರೊ–ಮಾರುತಿಯೆಂಬ– ॥ ಪ ॥
ಗುರುರಾಯರ ನಂಬಿ ಬಿಡದೆ ಯಾವಾಗಲು ।
ದುರಿತವ ಕಳೆದು ಸದ್ಗತಿಯ ಪಡೆವರೆಲ್ಲ ॥ ಅ ಪ ॥

ವನಧಿಯ ಮನೋವೇಗದಿಂದ ಲಂಘಿಸಿ ಮಹಿ-
ತನುಜೆಯ ಶೋಕತಾಪವ ಕಳೆದು ॥
ವನವ ಜೀರೊಡನೆ ಕಿತ್ತೀಡಾಡಿ ಎದುರಾದ
ದನುಜರ ಸದೆದು ಲಂಕೆಯ ತನ್ನ ಸಖಗಿತ್ತ ॥ ೧ ॥

---

೧) ಗ. ಮಾಡುವರಿಗೆ
೨) ಎ–ಓ. ಕಳವಳವಾದರೆ ಅ) ಕಳವಳಿಕಾದರೆ
೩) ಎ–ಓ. ಹಾರಿಹೋಗದೆ ಪಾಪ
೪) ಅ ಪಾದಪೂಜೆಯ ಮಾಳ್ಪ

ಕೌರವ ಬಕಹಿಡಿಂಬಕ ಕೀಚಕರೆಂಬ-
ಕ್ರೂರ ಸಂತತಿಯೆಲ್ಲ ನುಗ್ಗಲೊತ್ತಿ ||
ಘೋರಪಾತಕಿ ದುಶ್ಶಾಸನ ರಕುತವ |
ಹೀರಿ ಮುದದಿ ಮುರವೈರಿಯ ಭಜಿಸಿದ || ೨ |

ಜೀವೇಶರೊಂದೆಂಬ ದುರ್ವಾದಿಗಳ ಕು-
ಭಾವಶಾಸ್ತ್ರಗಳೆಲ್ಲ ತರಿದೋಡಿಸಿ ||
ಕೋವಿದರಿಗೆ ಸದ್ಭಾಷ್ಯಸುಧೆಯನಿತ್ತು
ದೇವ ಪುರಂದರವಿಠಲ ಸೇವಕನಾದ ||೩ |

## ೪೦

ರಾಗ—ಶಂಕರಾಭರಣ ತಾಳ—ರೂಪಕ

‡ಶ್ರೀಮದಾನಂದ ತೀರ್ಥ ಹನುಮ | ಭೀಮ ನಿನ್ನ ಸಮಾನ ಪುರುಷರು
ಈ ಮೂಜಗದೊಳಿಲ್ಲವೆಂದು ಶ್ರೀ– | ರಾಮ ಸಹಭೋಜನವ-
ನೀಯನೆ ? || ಪ ||

ಹರಿ-ವಿರಿಂಚಿಸಹಾಯದಿಂದ | ಹರನು ತ್ರಿಪುರವನಳಿಯಲಾಗ
ಬರಿದೆ ಕೊಂಡಾಡಿದರು ಸರ್ವರು | ಅರಿಯದೆಯೆ ನಿನ್ನ ಸಾಹಸ ||
ಶರಧಿ ಲಂಘಿಸಿ ದಾನವರನು | ತರೆದು ಸೀತೆಗೆ ಉಂಗುರವಿತ್ತು
ಪುರವನುರುಹಿ ಹರಿಯಡಿಗೆ ಆ | ಕುರುಹ ತಂದು ಮುಟ್ಟಿಸಿದೆಯೊ || ೧ ||

ಸಾಸಿರದ ತನ್ನ ಪೆಡೆಯ ನಡುವೆ | ಈಸು ಸಚರಾಚರವನೆಲ್ಲ |
ಸಾಸಿವೆಯಂದದಲಿ ಇಟ್ಟಾ | ಶೇಷನ–ಮೂಲರೂಪದ ||
ಆ ಶಕುತಿಯನು ತೋರಿಸಲು ದ–| ಶಾಸ್ಯನೆಳೆಯುವ ಸೌಮಿತ್ರಿಯನು
ದಾಶರಥಿಯ–ಬಳಿಗೆ ತಂದು– | ನೀ ಸಲಹಿದೆ ಜಗವರಿಯಲು || ೨ ||

---

‡ ಇ–ಪ್ರತಿಯಲ್ಲಿ ಮಾತ್ರ ಈ ಹಾಡು ದೊರೆಯುವುದು.

ತನ್ನ ಜನನಿಯೊಬ್ಬಳಿಗೆ ಸು- | ಪರ್ಣ ಬಳಲಿ ಸುಧೆಯ ತರಲು
ಇನ್ನು ಪೊಗಳುತಿಹುದು ಲೋಕ | ನಿನ್ನಂತೆ ದೂರದಲಿಹ ||
ಉನ್ನತದ ಶತಯೋಜನಗಲದ | ಅನ್ಯರು ತರಲಾರದ ಸಂಜೀ-
ವನ್ನ ಗಿರಿಯ ತಂದು ಕಪಿಗ- | ಳನ್ನು ಕಾಯ್ದೆ ತವಕದಿಂದ || ೩ ||

ಸಕಲ ಪ್ಲವಗನಿಕರ ರಾಮನ | ತ್ರಿಕರಣ ಸೇವೆಯನು ಮಾಡಿ
ಮುಕುತಿ ಬೇಡಲಿತ್ತು ನಿನಗೇನು | ಬೇಕೆಂದು ಕೇಳಲು ನೀನು ನಾ- ||
ಲುಕು ಪುರುಷಾರ್ಥಗಳ ಜರಿದು | ಭಕುತಿಯ ಕೊಡು ಎನಲು ನವಕ-
ನಕವ ಮಾಲೆ ಕೊರಳಿಗಿಟ್ಟು ಜಾ- | ನಕಿರಮಣನು ನಿನ್ನ ಪೊಗಳಿದ || ೪ ||

ಶರಧಿಯ ಮಥನದೊಳುದಿಸಿದ | ಗರಳ ಜಗತ್ತನು ಅಂಜಿಸೆ
ಸಿರಿಯರಸನ ಪೆರ್ಮೆಯಿಂದ | ಸುರಿದು ಅದನು ಜೀರ್ಣಿಸಿಕೊಂಡ ||
ಮಾರುತನವತಾರ ವೃಕೋ- | ದರನೆ ನೀನು ಎಂದರಿಯದೆ
ಮರುಳ ಕೌರವರಿಕ್ಕಿದ ವಿಷವ | ಭರದಿ ಉಂಡು ತೇಗಿದುದರಿದೆ ? || ೫ ||

ಅವನಿಭಾರಕೆ ಮುಖ್ಯರಾದ | ಕವುರವ-ಕೀಚಕಾದಿಗಳನು |
ಬವರ ಮುಖದಿ ನಗುತ ಗೆಲಿದು | ದವಿಯ ಕೃಷ್ಣನಿಗರುಹಿಸಿ ||
ದಿವಿಜರೆದುರುಗೊಳಲು ಅವರ- | ನವರ ತಾರತಮ್ಯದಿ ಮನ್ನಿಸಿ
ಪವನಲೋಕದೊಳು ಮೆರೆದೆ | ದ್ರುಪದಸುತೆಯು ಸಹಿತನಾಗಿ || ೬ ||

ಸುರಾಸುರರ ಸಂಗ್ರಾಮದಲಿ | ಅರಿ ವಿಪ್ರಚಿತ್ತಿಯು ನೀನು ಕೊಲ್ಲಲು
ವಿರಿಂಚಿ-ದನರ ವರದಿಂದವನೆ | ಜರಾಸಂಧನಾಗಿ ಇಳೆಯೊಳು ||
ಅರಸುಗಳನು ಕಾದಬಡಿಸ | ನರನೆ ಸೀಳಿ ಪಶುವಿನಂತೆ |
ಹರಿಗೆ ಅರ್ಪಿಸಲವನು ಸಕಲಾ- | ಧ್ವರಕಿಂತಲು ತೃಪ್ತನಾದ || ೭ ||

ನಡುಮನೆಯೆಂಬ ಸಾಧುದ್ವಿಜನ | ಮಡದಿಯ ಬಸಿರಿನಲಿ ಉದಿಸಿ
ಕಡು ದುರ್ಮತದ ಮಾಯಿಗಳನು | ಅಡಿಗಡಿಗೇ ಸಚ್ಛಾಸ್ತ್ರದಿ ||
ತಡೆದು ಅನಂತ ಶುಭಗುಣಗಳ | ಕಡಲು ಹರಿಸರ್ವೋತ್ತಮನೆಂದು
[illegible] | ಪೊಡವಿಯೊಳಗೆ ಸ್ಥಾಪಿಸಿದೆಯೊ ನೀ || ೮ ||

ಮರುತ ನಿನ್ನವತಾರ ತ್ರಯುವ- | ನರಿತು ಭಜಿಪಗೆ ಶ್ವೇತದ್ವೀಪ
ದರುಶನವನೆ ಮಾಡಿಸಿ ಶ್ರೀ | ಪುರಂದರ ವಿಠಲೇಶನ ||
ಕರುಣಕಟಾಕ್ಷದಿಂದ ವೈಕುಂಠ | ಪುರದಿ ಅನಂತಾಸನದಲಿ
ಪರಮಾನಂದವ ಪಡೆಸಿ ಹೊರೆವೆ | ಪರಿಪರಿಯ ಭೋಗಗಳನಿತ್ತು* || ೯ ||

೪೧

ರಾಗ—ಕಾಂಬೋದಿ ತಾಳ—ಅಟ

‡ಹನುಮಂತ ನೀ ಬಲು ಜಯವಂತನಯ್ಯ |
ಅನುಮಾನವಿಲ್ಲ ಆನಂದತೀರ್ಥರಾಯ || ಪ ||

ರಾಮಸೇವಕನಾಗಿ ರಾವಣನ ಪುರವ ನಿರ್-
ಧೂಮವ ಮಾಡಿದೆ ನಿಮಿಷದೊಳಗೆ ||
ಭೂಮಿಯ ಪುತ್ರಿಗೆ ಮುದ್ರೆಯುಂಗುರವಿತ್ತು
ಕ್ಷೇಮ-ಕುಶಲವ ಶ್ರೀರಾಮಪಾದಕರ್ಪಿಸಿದೆ || ೧ ||

ಕೃಷ್ಣಾವತಾರದಿ ಭೀಮನಾಗಿ ಬಂದು
ದುಷ್ಟ ದೈತ್ಯರನೆಲ್ಲ ಸಂಹರಿಸಿದೆ ||
ದೃಷ್ಟಿಹೀನ ಧೃತರಾಷ್ಟ್ರನ ವಂಶವನು
ಕಷ್ಟವಿಲ್ಲದೆ ಕೊಂದು ಶ್ರೀಕೃಷ್ಣಪಾದಕರ್ಪಿಸಿದೆ || ೨ ||

ಪತಿತ ಸಂಕರ ಹುಟ್ಟಿ ಮತವೆಲ್ಲ ಕೆಡಿಸಲು
ಮತಿಹೀನರಾದ ಸಜ್ಜನರಿಗೆಲ್ಲ ||
ಅತಿ ಬೇಗದಲಿ ಮಧ್ವಯತಿರೂಪ ಧರಿಸಿ ಸದ್-
ಗತಿ ಪಾಲಿಸಿದೆ ಪುರಂದರ ವಿಠಲನ ದಾಸ || ೩ ||

---

* ಇದರಲ್ಲಿ ಛಂದೋಗತಿ ಶಿಥಿಲವಾಗಿದೆ.

‡ ಇ. ಹಸ್ತಪ್ರತಿಯಲ್ಲಿ ಮಾತ್ರ ಈ ಹಾಡು ಇದೆ.

## ೪೭

ರಾಗ – ಮೋಹನ ತಾಳ—ಆದಿ

ಹನುಮ-ಭೀಮ-ಮಧ್ವಮುನಿಯ ನೆನೆದು ಬದುಕಿರೊ
ಅನುಮಾನಂಗಳಿಲ್ಲದಲೆ ಮನವಭೀಷ್ಟಂಗಳನೀವ || ಪ ||

ಪ್ರಾಣಿಗಳ ಪ್ರಾಣೋದ್ಧಾರ ಪ್ರಾಣರಲ್ಲುತ್ತಮ ಮತ್ತೆ
ಪ್ರಾಣಾಪಾನ ವ್ಯಾನೋದಾನ ಸಮಾನರೊಳುತ್ಕೃಷ್ಟ ||
[1]ಕಾಣಿರೇನೋ ಕಾಯಕರ್ಮ ಚಕ್ಷುರಿಂದ್ರಿಯಗಳಿಗೆ
ತ್ರಾಣಕೊಟ್ಟು ಸಲಹುವ ಜಾಣಗುರು ಮುಖ್ಯಪ್ರಾಣ || ೧ ||

ಕಾಮಧೇನು ಚಿಂತಾಮಣಿ ಕಲ್ಪವೃಕ್ಷನಾದ ಸ್ವಾಮಿ
ಪ್ರೇಮದಿಂದ ನೆನೆಯುವವರ ಭಾಗ್ಯಕ್ಕೆಣೆಯುಂಟೇ? ||
ಸಾಮಾನ್ಯವಲ್ಲವೊ ಈಗ ಮೋಕ್ಷಾದಿ ಸಂಪದದಾತ
ಆ ಮಹಾಪರೋಕ್ಷಜ್ಞಾನ ದಾರ್ಢ್ಯ ಭಕುತಿ ಕೊಡುವ || ೨ ||

ಅವತಾರತ್ರಯಗಳಿಂದ ಶ್ರೀಹರಿಯ ಸೇವಿಸುವ
ತವಕದಿ ಪೂಜಿಪ ಮಹಾಮಹಿಮೆಯುಳ್ಳವನು ||
ಕವಿತೆವಾಕ್ಯವಲ್ಲಿದು–ಅವಿವೇಕವೆಂದೆನಿಸಬೇಡಿ
ಭವಬಂಧನ ಕಳೆದು ಕಾವ ಪುರಂದರ ವಿಠಲನ ದಾಸ || ೩ ||

---

೧) ಪಾ. ಕ್ಷೋಣಿಗೆ ವೈಷ್ಣವರನ್ನು ತೀವಿ ಪಾಲಿಸಿ ಸಜ್ಜನರನ್ನು ।
ತ್ರಾಣದಿಂದಲಿ ಪೊರೆವ ಬಲು ಜಾಣ ಗುರುಮುಖ್ಯಪ್ರಾಣ ||

೪೩

ರಾಗ—ಮೋಹನ ತಾಳ—ಅಟ

*ಹನುಮ ನಮ್ಮ ತಾಯಿತಂದೆ-ಭೀಮ ನಮ್ಮ ಬಂಧುಬಳಗ ।
ಆನಂದ ತೀರ್ಥರೆಮಗೆ ಗತಿಗೋತ್ರವಯ್ಯ ॥ ಪ ॥

ತಾಯಿತಂದೆ ಹಸುಳೆಗಾಗಿ ಸಾಯುಮಾಡಿ ಸಾಕುವಂತೆ
ಆಯಾಸವಿಲ್ಲದೆ ಸಂಜೀವನ ತಂದೆ ॥
ಗಾಯಗೊಂಡ ಕಪಿಗಳನ್ನು ಸಾಯದಂತೆ ಪೊರೆದೆ ರಘು-
ರಾಯನಂಘ್ರಿಗಳೆ ಸಾಕ್ಷಿ ತ್ರೇತಾಯುಗದಲ್ಲಿ ॥ ೧ ॥

ಬಂಧುಬಳಗದಂತೆ ಆಪದ್ಬಂಧುವಾಗಿ ಪಾರ್ಥನಿಗೆ
ಬಂದದುರಿತಂಗಳ ಪರಿಹರಿಸಿ ॥
ಅಂಧಕಜಾತರ ಕೊಂದು ನಂದನಂದನಿಗರ್ಪಿಸಿದ ಗೋ
ವಿಂದನಂಘ್ರಿಗಳೆ ಸಾಕ್ಷಿ ದ್ವಾಪರಯುಗದಿ ॥ ೨ ॥

ಗತಿಗೋತ್ರರಂತೆ ೧ಸಾಧುಮತಿಗಳಿಂಗೆ ಗತಿಯನಿತ್ತು
ಮತಿಗೆಟ್ಟ ಇಪ್ಪತ್ತೊಂದು ಮತವ ಖಂಡಿಸಿ ।
ಮತಗೆಟ್ಟ ವೈಷ್ಣವರಿಗೆ ಗತಿಯ ತೋರಿದೆ ಪರಮಾತ್ಮ
ಗತಿ ಪುರಂದರ ವಿಠಲ ಸಾಕ್ಷಿ ಕಲಿಯುಗದಲ್ಲಿ ॥ ೩ ॥

---

* 'ಪ್ರಸನ್ನ ವೆಂಕಟ' ಅಂಕಿತದಿಂದಲೂ ಇದನ್ನು ಕೆಲವರು ಹೇಳುವರು.
೧) ಸಾಧುತತಿಗಳಿಗೆ ಮತಿಯ ತೋರಿ (ಬಹುಮತ)

## ೪೪

ರಾಗ—ಪಂತುವರಾಳಿ ತಾಳ - ಆದಿ

ಮಧ್ವಮುನಿಯೆ-ಗುರು-ಮಧ್ವಮುನಿಯೆ ॥ ಪ ॥
ಮಧ್ವಮುನಿ ನಮ್ಮೆಲ್ಲರ | ಉದ್ಧರಿಸುವ ಕಾಣಿರೋ ॥ ಅ. ಪ ॥

ಅಂದು ಹನುಮಂತನಾಗಿ | ಬಂದ ರಾಮಪದಾರ-
ವಿಂದದಿ ನೆರೆದು ತುಂಬಿ | ಯಂದದಿ ಶೋಭಿಸಿದ ॥ ೧ ॥

ವಿಷಾಂಕವಂಶದಿ ಪುಟ್ಟಿ | ಕ್ಷೋಣೀಪಾಲಕ ಶಿರೋ-
ಮಾಣಿಕ್ಯವಾಗಿ ಹರಿಗೆ | ಪ್ರಾಣನೆಂದೆನಿಸಿಕೊಂಬ ॥ ೨ ॥

ಕಟ್ಟಿ ಕಪಿಯಲ್ಲಿ ಯೋಗ | ದಿಟ್ಟನಾಗಿ ಪುರಂದರ |
ವಿಠ್ಠಲಗಾವಾಸವಾದ | ಪೆಟ್ಟಿಗೆಯೊಳೊಪ್ಪುವಂಥ ॥ ೩ ॥

## ೪೫

ರಾಗ - ಶಂಕರಾಭರಣ ತಾಳ—ಏಕ

ಮಧ್ವರಾಯಾ-ಗುರು-ಮಧ್ವರಾಯಾ
ಮಧ್ವರಾಯಾ-ಗುರು-ಮಧ್ವರಾಯಾ ॥ ಪ ॥

ರಾಮಾವತಾರದೊಳೊಮ್ಮೆ ಮಧ್ವರಾಯಾ
ಆ ಮಹಾ ಹನುಮನಾದೆ ಮಧ್ವರಾಯಾ ॥
ಪಾಮಪಾಬ್ಧಿಲಿ ರಾವಣನ ಗೆಲಿದೆ ಮಧ್ವರಾಯಾ
ಕಾಮಿತಾರ್ಥ ಸುರರಿಗಿತ್ತೆ ಮಧ್ವರಾಯಾ ॥ ೧ ॥

ಕೃಷ್ಣಾವತಾರದೊಳೊಮ್ಮೆ ಮಧ್ವರಾಯಾ
ದುಷ್ಟ ಕುಲಕೆ ಭೀಮನಾದೆ ಮಧ್ವರಾಯಾ ॥
ಕುಟ್ಟಿದೆ ಕೌರವರೆಲ್ಲ ಮಧ್ವರಾಯಾ-ಶ್ರೀ-
ಕೃಷ್ಣನ ಪ್ರೀತಿಯ ಪಡೆದೆಯೊ ಮಧ್ವರಾಯಾ ॥ ೨ ॥

ಗಶುದ್ಧರೂಪ ದೊರಕುವುದಿಲ್ಲ.

ಧರೆಯೊಳು ಯತಿಯಾಗಿ ಜನಿಸಿದೆ ಮಧ್ವರಾಯಾ
ಗುರುವ್ಯಾಸರ ಹಿತವ ಪಡೆದೆ ಮಧ್ವರಾಯಾ ||
ದುರುಳಮಾಯಿಮತವ ಮುರಿದೆ ಮಧ್ವರಾಯಾ
ಪುರಂದರವಿಠಲನ ದಾಸನಾದೆ ಮಧ್ವರಾಯಾ || ೩ ||

೪೬

ರಾಗ—ಅಠಾಣ ತಾಳ—ಆದಿ

*ರಾಯನ ನೋಡಿರೋ–ಮಧ್ವ–ರಾಯನ ಪಾಡಿರೊ || ಪ ||

ಅಂಜನೆಯಲಿ ಹುಟ್ಟಿ ಅಂಬರಕಡರಿದ
ಹರಿಯೋ–ಸಿಂಹದ—ಮರಿಯೋ |
ಕಂಜಾಕ್ಷಿಯ ಸುದ್ದಿಗೆ ಶರಧಿಯ ಲಂ-
ಘಿಸಿದ–ಪುರ–ಸಂಧಿಸಿದ |
ಅಂಜದೆ ವನವನು ಕಿತ್ತಿದ ಪುರವನು
ಸುಟ್ಟ–ತಾ ಬಲು–ದಿಟ್ಟಾ |
ಸಂಜೀವನ ಗಿರಿ ತಂದು ವಾನರರ
ಪೊರೆದಾ–ರಾಮನ–ಬೆರೆದಾ || ೧ ||

ಕುಂತಿಕುಮಾರನು ಭೀಮೆಗೆ ಹರುಷದಿ
ಬೆಳೆದ–ಖಳರನು–ತುಳಿದ |
ಅಂತ ಕೌರವ-ದುಶ್ಶ್ಯಾಸನರಾ ಶಿರ
ತರೆದಾ–ಚಲವನು–ಮೆರೆದ |
ಸಂತಾಪವ ಪಡಿಸಿದ ಕುಜನಕೆ ಭೀಮ-
ನಾದ–ಸನ್ನುತ–ನಾದ |
ಕಂತುಜನಕ ಶ್ರೀಕೃಷ್ಣನ ಪಾದದಿ
ಬಿದ್ದ–ಮದಗಜ–ಗೆದ್ದ || ೨ ||

* ಇ. ಹಸ್ತಪ್ರತಿಯ ಹೊರತು ಇನ್ನೆಲ್ಲಿಯೂ ಈ ಹಾಡು ಇಲ್ಲ.

ಮುನಿಕುಲದಲಿ ಉದಿಸಿದ ಗುರುಮಧ್ವ ತಾ-
ನಾದ-ಧರೆಯಲಿ-ಮೆರೆದ ।
ಅನಿಮಿಷರೊಡೆಯ ಶ್ರೀವೇದವ್ಯಾಸರ
ಚರಣ-ಅನುದಿನ-ಸ್ಮರಣ ।
ಕನಸೊಳು ಕಾಣದ ಅದ್ವೈತಂಗಳ
ಮುರಿದ-ತತ್ತ್ವವ-ತೋರಿದ ।
ಘನಮಹಿಮ ಶ್ರೀಪುರಂದರ ವಿಠಲನ
ದಾಸ-ಪಡೆದ-ಸಂನ್ಯಾಸ ॥ ೩ ॥

೪೭

## ನವರತ್ನ ಮಾಲಿಕಾ

ರಾಗ—ಭೂಪಾಳಿ ತಾಳ—ಝಂಪೆ

ಶ್ರೀತತ್ತ್ವವಾದ ಮತವ ॥ ಪ ॥

ಶ್ರೀತತ್ತ್ವವಾದ ಮತವಾರ್ಧಿ ಶುಭಚಂದ್ರಮನ ।
ಭೂತಲದೊಳಪ್ರತಿಮನೆನಿಪ ಶ್ರೀಯತಿವರನ ।
ಪ್ರೀತಿಯಿಂ ಭಜಿಸೆ ಇಷ್ಟಾರ್ಥಗಳ ಸಲಿಸುವ
ವಾತಜಾತನ ಸ್ಮರಿಸಿರೈ ॥ ಅ. ಪ ॥

ಶ್ರೀಮಾರುತನು ತ್ರೇತೆಯಲಿ ಹನುಮನೆಂದೆನಿಸಿ ।
ತಾ ಮುದದಿ ಅಂಜನಾದೇವಿಗರ್ಭದಿ ಜನಿಸಿ ।
ರಾಮಪಾದಾಂಬುರುಹ ಭಜಿಸಿ ಸದ್ಭಕ್ತಿಯಲಿ
ಸ್ವಾಮಿಯಾಜ್ಞೆಯನೆ ಕೊಂಡು ।
ನೇಮದಿಂ ಸಾಗರವ ದಾಟಿ ಲಂಕೆಯ ಪೊಕ್ಕು ।
ಪ್ರೇಮದಿಂದೊಯ್ದು ಮುದ್ರೆಯ ಜಾನಕಿಗೆ ಕೊಟ್ಟು ।
ಆ ಮಹದ್ವನದ ದನುಜರೆಲ್ಲವಳಿದ-ನಿಸ್ಸೀಮ-
ಹನುಮನ ಭಜಿಸಿರೈ ॥ ೧ ॥

ದ್ವಾಪರದಿ ಮಾರುತನು ಕುಂತಿದಾರಕನೆನಿಸಿ |
ದ್ವಾಪರನ ಯುಕ್ತಿಯಿಂದುತ್ಕೃಷ್ಟರಾಗಿದ್ದ |
ಪಾಪಿಗಳನಳಿದು ಕೀಚಕ-ಜರಾಸಂಧಾದಿ
ಭೂಪಾಲಕರನು ತರಿದು ||
ದ್ರೌಪದಿಗೆ ಸೌಗಂಧಿ ಕುಸುಮವನು ತರಪೋಗ- |
ಲಾಪಥದೊಳಸುರ ಮಣಿಮಂತ ಕದನವ ಮಾಡೆ |
ಕೋಪದಿಂದವನ ಮರ್ದಿಸಿದನತಿ ಬಲವಂತ-
ನಾ ಪುರುಷನಂ ಭಜಿಸಿರೈ || ೨ ||

ಕಲಿಯುಗವು ಪ್ರಾಪ್ತವಾಗಲು ಮಧ್ವನಾಮದಿಂ |
ದಿಳೆಯೊಳವತರಿಸಿ ಸೋಹಂ ಎಂಬ ಶಂಕರನ |
ಹುಲುಮತಂಗಳ ಜರಿದು ಮಾಯಿಗಳ ಗೆಲಿದು ಮೋ- ||
ಹನಶಾಸ್ತ್ರಬಲೆಯನರಿದು ||
ಮಲೆತ ದರುಶನವೈದ ನುಂಗಿ ಜೀರ್ಣಿಸಿಕೊಂಡು |
ಪ್ರಲಯಭೈರವನೆಂಬ ಬಿರುದ ಅವನಿಯ ಮೇಲೆ
ನೆಲೆಗೊಳಿಸಿ ವಿಷ್ಣು ಪರದೈವವೆಂದರುಹಿದಾ
ಅಲವಬೋಧರ ಭಜಿಸಿರೈ || ೩ ||

ಪ್ರತಿವಾದಿಗಿದಿರಾಗಿ ತಲೆಯೆತ್ತದಂತೆ ಸಂ- |
ತತ ಧರೆಯೊಳದ್ವೈತವಂಕುರಿಸದಂತೆ ದು- |
ರ್ಮತದ ಮೋಹನಶಾಸ್ತ್ರ ಪಲ್ಲವಿಸದಂತೆ ಮಾ-
ಯಿಗಳ ಮತಗಳ ಮತ ಹೆಚ್ಚದಂತೆ ||
ಕ್ಷಿತಿಯೊಳಗೆ ಶ್ರೀ ತತ್ತ್ವವಾದ ನೆಲಸಿಪ್ಪಂತೆ |
[1]ಶ್ರುತಿಶಾಸ್ತ್ರವದ್ವೈತವಂ ಬಿಟ್ಟು ಸೆಳೆವಂತೆ
ಪ್ರತಿಪಾದಿಸುವ ಖಳರ ದುರ್ಭಾಷ್ಯಗಳ ಜರಿದ
ಯತಿರಾಯರಂ ಭಜಿಸಿರೈ || ೪ ||

---

೧ ಪಾ-ಷ-ಶ್ರುತಿಶಾಸ್ತ್ರವುಪನಿಷದ್ಗಳು ಸಮ್ಮತಿಪ್ಪಂತೆ
ಮತವ ಸ್ಥಾಪಿಸಿ ಬದರಿಕ್ಷೇತ್ರದಲಿ ನೆಲಸಿಪ್ಪ ಯತಿಶ್ರೇಷ್ಠರಂ ಭಜಿಸಿರೈ ||

ಪರಮವೈಷ್ಣವರ ಮಿಂಚಿಡುವ ರತ್ನದ ಸಾಣೆ |
ಪರವಾದಿಗಳ ಬೆನ್ನ ಮುರಿವ ವಜ್ರದ ಸಾಣೆ |
ಗುರುಮಧ್ವಮುನಿಯ ಬಲುವಿದ್ಯ (ದ್ಯಾ) ಸಾಮರ್ಥ್ಯಕ್ಕೆ
ಸರಿಗಾಣೆ ಲೋಕದೊಳಗೆ ||

ಧರೆಯೊಳಗೆ ಶ್ರೀತತ್ತ್ವವಾಗಿ ನೆಲಸಿಹ ವೀಣೆ |
ಚರಿಸದಂತಿಳೆಯುಲದ್ವೈತಕಿಕ್ಕಿದ ಆಣೆ |
ಪರಮೂರ್ತಿ ಚೈತನ್ಯ ವಂದ್ಯಸುತ್ರಾಮನೇ |
ಪೂರ್ಣಪ್ರಜ್ಞರ ಭಜಿಸಿರೈ || ೫ ||

ಅಕಳಂಕಚರಿತನೆ ಮುಮುಕ್ಷುಮಸ್ತಕದ ಮಣಿ |
ನಿಖಿಳ ಪೌರಾಣಶ್ರುತಿಶಾಸ್ತ್ರದಾಗಮದ ಖಣಿ |
ಸಕಲವಾದಿಗಳ ಜಿಹ್ವೆಯಲಿ ಮೆಟ್ಟಿದ ಆಣಿ
ಭಾಗವತ ಚಿಂತಾಮಣಿ ||

ಯುಕುತಿ ಪರಿಪೂರ್ಣಯತ್ಯಾಶ್ರಮಕೆ ಕಟ್ಟಾಣಿ |
ಪ್ರಕಟಿಕವಿಜನಕಮಲವ್ಯೂಹಕ್ಕೆ ಗಗನಮಣಿ |
ಸಕಲ ಜಗವಂದ್ಯ ಚೈತನ್ಯ ಚಿಂತಾಮಣಿ-
ಮುಖ್ಯಪ್ರಾಣರ ಭಜಿಸಿರೈ || ೬ ||

ಮುಂದೆ ಅಜನಾಗಿ ಪವಮಾನ ಕೃತಯುಗದಲ್ಲಿ |
ಒಂದು ನಿಮಿಷದಲಿ ಸೃಜಿಸುವನು ಸಚರಾಚರವ |
ಸಂದೇಹವಿಲ್ಲ ತಪ್ಪದು ವೇದವಾಕ್ಯವಿದು
ಹಿಂದೆ ಶ್ರೀಹರಿಸೇವೆಯ ||

ಒಂದು ದಿವಸದಲಿ ನಿಷ್ಕಟದ ಭಕ್ತಿಯಲಿ ತಾ- |
ನಂದು ಮಾಡಿದ ಸುಕೃತಫಲದಿಂದ ಬ್ರಹ್ಮತ್ವ |
ಬಂದು ಯುಗ-ಯುಗದೊಳವತರಿಸಿ ದೃಷ್ಟವ ತೋರ್ಪ-
ನಂದಮುನಿವರ ಭಜಿಸಿರೈ || ೭ ||

ಹರಿಗೆ ಸರಿ-ಮಿಗಿಲೆನಿಪರಿಲ್ಲ ದೈವಂಗಳೊಳು ।
ಗುರುಮಧ್ವರಾಯರಿಗೆ ಸರಿಯಿಲ್ಲ ರಾಯರೊಳು ।
ಪರಮ ವೈಷ್ಣವರಿಗೆಣೆಯಿಲ್ಲ ಲೋಕದೊಳೆಂದು
ಬಿಡದೆ ಡಂಗುರವ ಹೊಯಿಸಿ ॥

ಬಿರುದ ಪಸರಿಸಿ ಢಕ್ಕೆಯುವ ನುಡಿಸಿ ಎನ್ನುತಲಿ ।
ಶರಣುಹೊಕ್ಕರ ಪಣೆಯ ದುರ್ಲೇಖವಂ ತೊಡೆದು ।
ಬರೆದು ವೈಷ್ಣವಲಿಪಿಯ ಶುದ್ಧಾತ್ಮರಂ ಮಾಳ್ಪ
ಗುರುರಾಯರನು ಭಜಿಸಿರೈ ॥ ೮ ॥

ಭುವನಪಾವನರಪ್ಪ ಪೂರ್ಣಪ್ರಜ್ಞರ ಸ್ತೋತ್ರ ।
ನವರತ್ನಮಾಲೆಯಿದು ಶ್ರೀವಿಷ್ಣುದಾಸರಿಗೆ ।
ಶ್ರವಣಮಂಗಳವಪ್ಪ ತತ್ತ್ವಾಮೃತದ ಸಾರ
ಜನ್ಮಮೂಲೋತ್ಪಾಟನ ॥

ಜವನ ಗಂಟಲನೊಡೆದು ತನ್ನ ನಿಜದಾಸರಿಗೆ ।
ಧ್ರುವವಾಗಿ ಪರಮಪದವಿಯನಿತ್ತು ರಕ್ಷಿಸುವ ।
ಪವನನಂತರ್ಯಾಮಿ ಪುರಂದರವಿಟ್ಠಲನ
ತವಕದಿಂದಲಿ ಭಜಿಸಿರೈ ॥ ೯ ॥

### ೪೮

ರಾಗ—ಸಾರಂಗ (ಬಿಹಾಗ) ತಾಳ – ಆದಿ

ಹನುಮನ ಮತವೆ ಹರಿಯ ಮತವು ।
ಹರಿಯ ಮತವೇ ಹನುಮನ ಮತವು ॥ ಪ ॥

ಹನುಮನು ಒಲಿದರೆ ಹರಿ ತಾನೊಲಿವನು ।
ಹನುಮನು ಮುನಿದರೆ ಹರಿಮುನಿವ ॥ ಅ. ಪ ॥

[1]ಹನುಮನ ನಂಬಿದ ಸುಗ್ರೀವ ಗೆದ್ದ ।
ಹನುಮನ ನಂಬದ ವಾಲಿಯು ಬಿದ್ದ । ॥ ೧ ॥

ಹನುಮನು ಒಲಿದ ವಿಭೀಷಣ ಗೆದ್ದ
ಹನುಮನು ಮುನಿಯಲು ರಾವಣ ಬಿದ್ದ ॥ ೨ ॥

ಹನುಮನು ಪುರಂದರವಿಠಲನ ದಾಸ ।
ಹನುಮನೊಳ್ ಪುರಂದರವಿಠಲನಾವಾಸ ॥ ೩ ॥

## ೪೯

ರಾಗ – ಆನಂದಭೈರವಿ ತಾಳ — ರೂಪಕ

ವೀರಹನುಮ ಬಹುಪರಾಕ್ರಮ — ಸುಜ್ಞಾನವಿತ್ತು
[2]ಪಾಲಿಸಯ್ಯ ಜೀವರುತ್ತಮ ॥ ಪ ॥

ರಾಮದೂತನೆನಿಸಿಕೊಂಡಿವೀ — ರಾಕ್ಷಸರ
ವನವನೆಲ್ಲ [3]ಜಯಿಸಿ ಬಂದೆ ನೀ ॥
ಜಾನಕಿಗೆ [4]ಉಂಗುರವಿತ್ತು
ಜಗತಿಗೆಲ್ಲ ಹರುಷವಿತ್ತು
[5]ಜಾತಿಮಣಿಯ ರಾಮಗಿತ್ತು
ಲೋಕದಿ ಪ್ರಖ್ಯಾತನಾದೆ ॥ ೧ ॥

೧) ಅ–ಹನುಮನ ವಂದಿಸಿ ಜಾಂಬವ ಗೆದ್ದ
ಹನುಮನ ನಿಂದಿಸಿ ಜರಾಸಂಧ ಬಿದ್ದ ॥ ೧ ॥

ಹನುಮನ ವಂದಿಸಿ ಅಂಗದ ಗೆದ್ದ ।
ಹನುಮನ ನಿಂದಿಸಿ ಕೀಚಕ ಬಿದ್ದ ॥ ೨ ॥

೨) ಶ್ರೀ–ಪಾಲಿಸೆನ್ನ. ೩) ಶ್ರೀ–ಜರಿಸಿ. ೪) ಓ–ಮುದ್ರಿಕೆ. ೫) ಓ–ಚೂಡಾಮಣಿ.

ಗೋಪಿಸುತನ ಪಾದಪೂಜಿಸಿ—ಗದೆಯ ಧರಿಸಿ
೧ಕೌರವರಾ ಬಲವ ಸವರಿಸಿ ||
ದ್ರೌಪದಿಯ ಮೊರೆಯ ಕೇಳಿ
ಕರುಣದಿಂದ-ತ್ವರದಿ ಬಂದು
ಪಾಪಿ ಕೀಚಕನನು ಕೊಂದು
ಭೀಮಸೇನನೆನಿಸಿಕೊಂಡೆ || ೨ ||

ಮಧ್ಯಗೇಹನಲ್ಲಿ ಜನಿಸಿನೀ-ಬಾಲ್ಯದಲ್ಲಿ
ಮಸ್ಕರಿಯ—ರೂಪಗೊಂಡೆ ನೀ ||
ಸತ್ಯವತಿಯ ಸುತನ ಭಜಿಸಿ
ಸಮ್ಮುಖದಲಿ ಭಾಷ್ಯಮಾಡಿ
ಸಜ್ಜನರನು ೨ಪಾಲಿಸಿದ—ಪು
ರಂದರವಿಟ್ಠಲನ ದಾಸ || ೩ ||

---

೧) ಓ-ಬಕಾಸುರನ ಸಂಹರಿಸಿ. ೨) ಓ-ಪೊರೆದ ಮುದ್ದು.

## ೫೦

# ಶ್ರೀರಮಾದೇವಿಯರು

ರಾಗ - ಮಧ್ಯಮಾವತಿ ತಾಳ—ಆದಿ

ಭಾಗ್ಯದ ಲಕ್ಷ್ಮೀ ಬಾರಮ್ಮಾ—ನಮ್ಮಮ್ಮಾ [೧]ನೀ ಸೌ-।—
ಭಾಗ್ಯದ ಲಕ್ಷ್ಮೀ ಬಾರಮ್ಮಾ ॥ ಪ ॥

ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ ।
[೨]ಗೆಜ್ಜೆಯ ಕಾಲಿನ ಧ್ವನಿಯ ಮಾಡುತ ॥
ಸಜ್ಜನ ಸಾಧು ಪೂಜೆಯ ವೇಳೆಗೆ ।
ಮಜ್ಜಿಗೆಯೊಳಗಿನ ಬೆಣ್ಣೆಯಂತೆ ॥ ೧ ॥

ಕನಕವೃಷ್ಟಿಯ ಕರೆಯುತ ಬಾರೆ।
[೩]ಮನಕೆ ಮತಿಯ-ಸಿದ್ಧಿಯ ತೋರೆ ॥
ದಿನಕರಕೋಟಿ ತೇಜದಿ ಹೊಳೆಯುತ ।
ಜನಕರಾಜನ ಕುಮಾರಿ [೪]ಸೀತೆ ॥ ೨ ॥

ಸಂಖ್ಯೆಯಿಲ್ಲದಾ ಭಾಗ್ಯವ ಕೊಟ್ಟು ।
ಕಂಕಣ ಕೈಯಾ ತಿರುವುತ ಬಾರೆ ॥
ಕುಂಕುಮಾಂಕಿತೇ ಪಂಕಜಲೋಚನೆ ।
ವೆಂಕಟರಾಯನ [೫]ಮೋಹದ ರಾಣೀ ॥ ೩ ॥

ಅತ್ತಿತ್ತಗಲದೆ ಭಕ್ತರ ಮನೆಯಲಿ ।
ನಿತ್ಯಮಂಗಲವ ನಿತ್ಯ ಮಹೋತ್ಸವ ॥
ಸತ್ಯವ ತೋರುವ ಸಜ್ಜನರಿಗೆ ನೀ ।
ಚಿತ್ತದಿ ಹೊಳೆಯುವ ಪುತ್ಥಳಿಗೊಂಬೆ ॥ ೪ ॥

೧) ಅ. ನೀ ನನ್ನ ಮನೆಗೆ ೨) ಅ. ಗೆಜ್ಜೆಯ ಕಾಲ ಕುಣಿಸುತ ಬಾರೆ
೩) ಎ-ಮನಕೆ ಮಾನವ ಸಿದ್ಧಿಯ ತೋರೆ ೪) ಬಾಲೆ, ಜೇನ ಮತ್ತು ಸೀನ. ಎಂಬ ಪಾಠಾಂತರಗಳಿವೆ. ೫) ಎ. ಓ. ಮತ್ತು ಕೆಲವು ಪ್ರತಿಗಳಲ್ಲಿ, 'ಟಿಂಕಟರಾಣಿ' ಎಂದಿದೆ.

ಸಕ್ಕರೆ ತುಪ್ಪದ ಕಾಲುವೆ ಹರಿಸಿ |
ಶುಕ್ರವಾರದ ಪೂಜೆಯ ಕೊಂಬೆ ||
೧ಆಕ್ಕರವುಳ್ಳ ಅಳಗಿರಿ ರಂಗನ |
ಶಕ್ತ ಪುರಂದರವಿಠಲನ ರಾಣಿ || ೫ ||

## ೫೧

ರಾಗ—ತೋಡಿ ತಾಳ—ರೂಪಕ

ಏನು ಧನ್ಯಳೋ—ಲಕುಮಿ—ಎಂಥ ಮಾನ್ಯಳೋ ||ಪ||

ಸಾನುರಾಗದಿಂದ ೨ಹರಿಯ ತಾನೆ ಸೇವೆ ಮಾಡುತಿಹಳೊ ||ಅ ಪ||

ಕೋಟಿಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ |
ಸಾಟಿಯಿಲ್ಲದ ೩ಪೂರ್ಣಗುಣಳು ಸರ್ವಕಾಲ ಮಾಡುತಿಹಳು || ೧ ||

ಛತ್ರ ಚಾಮರ ವ್ಯಜನ ಪರ್ಯಂಕ ಪಾತ್ರರೂಪದಲ್ಲಿ ನಿಂತು |
ಚಿತ್ರಚರಿತನಾದ ಹರಿಯ ನಿತ್ಯಸೇವೆ ಮಾಡುತಿಹಳು || ೨ ||

ಸರುವಸ್ಥಳದಿ ವ್ಯಾಪ್ತನಾದ | ಸರುವದೋಷರಹಿತನಾದ |
ಗರುಡಗಮನನಾದ ಪುರಂದರವಿಠಲನ ಸೇವಿಸುವಳೊ || ೩ ||

---

೧) ಆಕ್ರೂರವರದ ಶ್ರೀಪುರಂದರವಿಠಲನ, ಚೊಕ್ಕ ಪುರಂದರವಿಠಲನ (ರೂಢಿಯಲ್ಲಿದೆ).

೨) ಹ. ಪತಿಯ ೩) ರಂ. ಪೂಜೆಗಳನು ಥಾಟಿಯಿಂದ ಮಾಡುತಿಹಳೊ

## ೫೨

ರಾಗ—ಕಲ್ಯಾಣಿ ತಾಳ—ಆದಿ

*ಆರಿಗೆ ವಧುವಾದೆ—ಅಂಬುಜಾಕ್ಷಿ ।
ಕ್ಷೀರಾಬ್ಧಿಕನ್ನಿಕೆ—ಶ್ರೀಮಹಾಲಕುಮೀ ॥ ಪ ॥

ಶರಧಿಬಂಧನ ರಾಮಚಂದ್ರ ಮೂರುತಿಗೊ
ಪರಮಾತ್ಮ ಸಿರಿಯನಂತ ಪದ್ಮನಾಭನಿಗೋ ॥
ಸರಸಿಜನಾಭ ಜನಾರ್ದನಮೂರುತಿಗೊ
ಎರಡು ಹೊಳೆಯ ರಂಗಪಟ್ಟಣವಾಸಗೊ ॥ ೧ ॥

ಚೆಲುವ ಬೇಲೂರ ಚೆನ್ನಿಗರಾಯನಿಗೊ
ಕೆಳದಿ ಹೇಳುಡುಪಿಯ ಕೃಷ್ಣರಾಯನಿಗೊ ॥
ಇಳೆಯೊಳು ಪಂಢರಪುರ ವಿಠಲೇಶಗೊ
ನಳಿನಾಕ್ಷಿ ಹೇಳು ಬದರೀನಾರಾಯಣನಿಗೊ ॥ ೨ ॥

ಮಲಯಜಗಂಧಿ, ಬಿಂದುಮಾಧವರಾಯಗೊ
ಸುಲಭದೇವ ಪುರುಷೋತ್ತಮಗೊ ॥
ಫಲದಾಯಕ ನಿತ್ಯ ಮಂಗಳನಾಯಕಗೊ
ಚೆಲುವೆ ನಾಚದೆ ಪೇಳು ಶ್ರೀವೆಂಕಟೇಶಗೊ ॥ ೩ ॥

ವಾಸವಾರ್ಚಿತ ಕಂಚೀವರದರಾಜಮೂರುತಿಗೊ
ಆ ಸುರವಂದ್ಯ ಶ್ರೀಮುಷ್ಣದಾದಿವರಹನಿಗೊ ॥
ಶೇಷಶಾಯಿಯಾದ ಶ್ರೀರಂಗನಾಯಕಗೊ
ಸಾಸಿರ ನಾಮದೊಡೆಯ ಅಳಗಿರಿಯೀಶಗೊ ॥ ೪ ॥

ಶರಣಾಗತರನು ಪೊರೆವ ಶಾರ್ಙಪಾಣಿಗೊ
ವರಗಳೀವ ಶ್ರೀನಿವಾಸ ಮೂರುತಿಗೊ ॥
ಕುರುಕುಲಾಂತಕ ರಾಜಗೋಪಾಲ ಮೂರುತಿಗೊ
ಸ್ಥಿರವಾದ ಪುರಂದರವಿಠಲರಾಯನಿಗೊ ॥ ೫ ॥

*ಓ. ಪ್ರತಿಯ ಹೊರತು ಬೇರೆ ಎಲ್ಲಿಯೂ ದೊರೆತಿಲ್ಲ.

## ೫೩

ರಾಗ— ಮಧ್ಯಮಾವತಿ ತಾಳ— ಆದಿ

[೧]ಮರುಳು ಮಾಡಿಕೊಂಡೆಯಲ್ಲೇ–ಮಾಯಾದೇವಿಯೆ ॥ ಪ ॥

ಇರುಳು ಹಗಲು ಏಕವಾಗಿ–ಹರಿಯು ನಿನ್ನ ಬಿಡದಿಪ್ಪಂತೆ ॥ ಅ. ಪ ॥

ಜ್ಞಾನಿಗಳು ನಿತ್ಯ ಅನ್ನ–ಪಾನಾದಿಗಳನ್ನು ಬಿಟ್ಟು
ನಾನಾವಿಧ ತಪವಿದ್ದರು–ಧ್ಯಾನಕೆ ಸಿಲುಕದವನ ॥ ೧ ॥

ಸರ್ವಸಂಗವ ಬಿಟ್ಟು ಸಂ–ನ್ಯಾಸಿಯಾದ ಕಾಲಕು
ಸರ್ವದಾ ತನ್ನೆದೆಯ ಮೇಲೆ–ಬಿಡದೆ ನಿನ್ನ ಧರಿಸಿಪ್ಪಂತೆ ॥ ೨ ॥

ಪ್ರಳಯಕಾಲದಲ್ಲಿ ಆಲ–ದೆಲೆಯ ಮೇಲೆ ಮಲಗಿದ್ದಾಗ
[೨]ಹಲವು ಆಭರಣಂಗಳು–ಜಲವು ಆಗಿ ಜಾಣತನದಿ ॥ ೩ ॥

ರಂಗನು ಭೂಲೋಕದಿ–ಭುಜಂಗ ಗಿರಿಯೊಳಾಲಮೇಲು
ಮಂಗಪತಿಯಾಗಿ ನಿನ್ನ–ಅಂಗೀಕರಿಸುವಂತೆ ॥ ೪ ॥

ಮಕ್ಕಳ ಪಡೆದರೆ ನಿನ್ನ–ಚೊಕ್ಕತನವು ಪೋಪುದೆಂದು
ಪೊಕ್ಕುಳೊಳು ಮಕ್ಕಳ ಪಡೆದು–ಕಕ್ಕುಲಾತಿ ಪಡುವಂತೆ ॥ ೫ ॥

ಎಡಕೆ ಭೂಮಿ ಬಲಕೆ ಶ್ರೀಯು–ಎದುರಿನಲ್ಲಿ ದುರ್ಗಾದೇವಿ
ತೊಡೆಯ ಮೇಲೆ ಲಕುಮಿಯಾಗಿ–ಬಿಡದೆ ಮುದ್ದಾಡುವಂತೆ ॥ ೬ ॥

ಎಂದೆಂದಿಗೂ ಮರೆಯ ನಿನ್ನಾ–ನಂದದಿ ಜನರಿಗೆಲ್ಲ
ತಂದು ತೋರೇ ಸ್ವಾಧೀನ ಪು–ರಂದರ ವಿಟ್ಠಲ ಹರಿಯ ॥ ೭ ॥

---

೧, ಅ–' ಮಾಯಾದೇವೀ ಮುದ್ದು ಮಾಯಾದೇವಿ ।
ಮಾಯಾಕಾರಿ ಹರಿಯ ನೀನು ಮರುಳು ಮಾಡಿಕೊಂಡೆಯಲ್ಲೆ ? ॥'
ಎಂದು ಪಲ್ಲವಿಯಿದೆ.

೨, ಅ–' ಹಲವು ಆಭರಣಗಳಾಗಿ ಜಲವು ಆದೆ.......'

೫೪

ರಾಗ—ಪೂರ್ವಿ ತಾಳ—ಆದಿ

*ಮುದ್ದು ಮಾಡಬಾರದೇನೇ—ಮುದ್ದು ಮಾಯಾದೇವಿ ? ||ಪ||
ಮುದ್ದು ಬಾಲಕೃಷ್ಣನಲ್ಲಿ ಮನಸು ನಿಲ್ಲುವ ಹಾಗೆ || ಅ ಪ ||

ಕರಗಳಿಂದ ಹರಿಯ ಮಂ—ದಿರದ ಕಸವ ತೆಗೆಯಲಿಕ್ಕೆ
ನಿರುತದಲ್ಲೂ ಬೇಸರಿಯದೆ—ಹರುಷವು ಪುಟ್ಟುವ ಹಾಗೆ || ೧ ||

ಶ್ರುತಿ-ರಾಮಾಯಣ ಶ್ರೀಭಾಗ—ವತ ಪಂಚರಾತ್ರಾಗಮಾದಿ
ಕಥೆಯ ಕೇಳುವುದಕೆ ಬಹಳ—ರತಿಯು ಪುಟ್ಟುವ ಹಾಗೆ || ೨ ||

ದೇಹವು ಅನಿತ್ಯವೆಂದು—ನೇಹದಿಂದ ಪೋಷಿಸದಲೆ
ಮಹೇಂದ್ರಾವರಜನ ಅಹ—ರಹರವು ಭಜಿಸುವ ಹಾಗೆ || ೩ ||

ನರರ ಸ್ತವನ ಹೇಯವೆಂದು—ಅರಗಳಿಗೆಯು ಆಗಲದಲೆ
ನರಹರಿಯ ಭಕ್ತರಿಗೆ—ಶರಣುಹೋಗುವ ಹಾಗೆ || ೪ ||

ಮನಸು ವಾಕ್ಕಾಯಗಳಿಂದ ಸದ್-ಗುಣಾಧಿ ಪುರಂದರ ವಿಟ್ಠಲನ
ಅನುರಾಗದಿಂ ಬಿಡದೆ ಪಾಡಿ—ಕುಣಿದು ಕುಣಿದು ದಣಿವ ಹಾಗೆ || ೫ ||

೫೫

ರಾಗ—ಮಧ್ಯಮಾವತಿ ತಾಳ—ಆದಿ

‡ಮುದ್ದು ಮಾಡಲರಿಯಾ—ಮುದ್ದು ರಮಾದೇವಿ || ಪ ||
ಮುದ್ದುಕೃಷ್ಣನಲ್ಲಿ ಮನ ಸಿದ್ಧವಾಗಿ ನಿಲ್ಲುವಂತೆ || ಅ. ಪ ||

ದಿನಗಳೆಲ್ಲ ವಾಸುದೇವನ ಕಥೆಯಿಂದು
ರಚನೆ ಮಾಡುವರಲ್ಲಿ ರಕ್ತಿ ನಿಲ್ಲುವ ಹಾಗೆ || ೧ ||

* ಇ. ಕೈಬರಹದ ಪ್ರತಿಯಲ್ಲಿ, ಓ. ಅಜ್ಜಾದ ಪ್ರತಿಯಲ್ಲಿ ಮಾತ್ರ ಈ ಹಾಡು ಇದೆ.
‡ ಇದು ಹಸ್ತಪ್ರತಿಯಲ್ಲಿ ಸಿಗುವುದಿಲ್ಲ.

ಸಂತೆ ನೆರಹಿ ಸತಿ-ಸುತರು ತನ್ನವರೆಂಬ
[೧]ಭ್ರಾಂತಿಬಿಟ್ಟು ನಿಶ್ಚಿಂತನಾಗುವ ಹಾಗೆ ‖ ೨

ಎನ್ನೊಡೆಯ ಸಿರಿ ಪುರಂದರವಿಠಲನ
ಸನ್ಮತಿಯಿಂದೆ ಹಾಡಿ ಪಾಡುವ ಹಾಗೆ ‖ ೩

---

೧) ಇ-ಭ್ರಾಂತಿಬಿಡಿಸಿ.

## ಆವಾಹನ

### ೫೬

ರಾಗ—ಭೈರವಿ | ತಾಳ— ಆದಿ

ಓಡಿ [೧]ಬಾರೈಯ ವೈಕುಂಠಪತಿ ನಿನ್ನ
ನೋಡುವೆ ಮನದಣಿಯೆ ॥ ಪ ॥

ನೋಡಿ ಮುದ್ದಾಡಿ ಮಾತಾಡಿ ಸಂತೋಷದಿ
ಪಾಡಿಪೊಗಳುವೆನು ಪರಮ ಪುರುಷ ಹರಿ ॥ ಅ ಪ ॥

ಕೆಂದಾವರೆಯಂತೆ ಪಾದಂಗಳೆರಡು
ಅಂದುಗೆ ಕಿರುಗೆಜ್ಜೆ ಘುಲುಘುಲುರೆನುತ ॥
ಚೆಂದದಿ ಪೀತಾಂಬರವಲೆದಾಡುತ
ಕುಂದಣದುಡುದಾರ ಝಣ ಝಣ ಝಣಕುತ ॥ ೧ ॥

[೨] ಕೋಟಿಸೂರ್ಯಪ್ರಕಾಶಗಳಿಂದಲಿ ಲ-
ಲಾಟದಲ್ಲಿ ಇಟ್ಟ ಕಸ್ತುರಿತಿಲಕ ॥
ಕೂಟದ ಗೋಪಾಂಗನೆಯರ ಕೂಡೆ
ಆಟ ಸಾಕು ಬಾರೋ ಅರವಿಂದನಯನ ॥ ೨ ॥

ಕಿರುತುರುಬಿನ ಮೇಲೆ ಒಲೆವುತಿರುತಿರೆ
ಮರುಗುಮಲ್ಲಿಗೆ ಜಾಜಿ ಶ್ರೀತುಲಸೀ ॥
ಕರದಲಿ ಪಿಡಿದಾ ಪೊಂಗೊಳಲೂದುತ
ತಿರಿತಿಂದು ಬಾಹೋ ಸಡಗರ ಸಾಕೋ ॥ ೩ ॥

ಎಣ್ಣೋರಿಗೆ ತಿರಸ ಸದಮಲ ದೋಸೆ ಬೆಣ್ಣೆ
ಅಣ್ಣಯ್ಯ ನಿನಗೆ ಕೊಡುವೆನೊ ಬಾರೋ ॥
ಕಣ್ಣುಮುಚ್ಚಿ ಗೋಪಾಂಗನೆಯರ ಕೂಡಿ
ಚಿಣ್ಣರು ಮೊಲ್ಲವರು ಉಚಿತವೆ ಸಾಕೋ ॥ ೪ ॥

---

೧) ಬಾರೋ ಶ್ರೀ (ಬಹುವಚನ) ೨) ಈ ನುಡಿ [illegible] ಪಾಠಾಂತರವಿದೆ.

ಮಂಗಳಾತ್ಮಕ ಮೋಹನಾಕಾರನೆ
ಸಂಗೀತಲೋಲ ಸದ್ಗುಣಶೀಲ ॥
ಮಂಗಳೆ ಲಕುಮಿಯು ಸಹಿತವಾಗಿ ಬಂದು
ಕಂಗಳ ಮುಂದಾಡೊ ಪುರಂದರವಿಠಲ ॥ ೫ ॥

## ೫೭

ರಾಗ—ಜುಲಾವು ತಾಳ—ಆದಿ

ಯಾದವ ನೀ ಬಾ [೧]ಯದುಕುಲನಂದನ
ಮಾಧವ ಮಧುಸೂದನ ಬಾರೋ ॥ ಪ ॥

ಸೋದರಮಾವನ ಮಥುರಿಲಿ ಮಡುಹಿದ ಯ-
ಶೋದೆಯ ನಂದನ ನೀ ಬಾರೋ ॥ ಅ. ಪ ॥

ಕಣಕಾಲಂದುಗೆ ಗಣಗಣಕೆನುತಲಿ
[೨]ತನನನ ವೇಣು–ನಾದದಲಿ ॥
ಚಿಣಿಕೋಲು ಚಂಡು ಬುಗುರಿಯನಾಡುತ
[೩]ಸಣ್ಣಸಣ್ಣ ಗೋವಳರೊಡಗೂಡಿ ॥ ೧ ॥

ಶಂಖ–ಚಕ್ರವು [೪]ತೋಳಲಿ ಹೊಳೆಯುತ
ಬಿಂಕದ ಗೋವಳ ನೀ ಬಾರೋ ಅಕ- ॥
ಳಂಕ ಮಹಿಮನೆ ಆದಿನಾರಾಯಣ
[೫]ಬೇಕೆಂಬ ಭಕ್ತರಿಗೊಲಿಬಾರೋ ॥ ೨ ॥

---

೧) ಅ. ಯದುಪತಿನಂದನ ೨) ಎಲ್ಲ ಪ್ರತಿಗಳಲ್ಲಿಯೂ-ಝುಣುಝುಣು ವೇಣು ನಾದವಲಿ ೩) ಏ– ಓ. ಸಣ್ಣವರೊಡಗೂಡಿ ನೀ ಬಾರೋ ೪) ಏ– ಓ. ಕೈಯಲಿ ೫) ಕಿಂಕರರಿಗೆ ನೀನೊಲಿಬಾರೋ ಎಂದೂ ಹಾಡುತ್ತಾರೆ

ಖಗವಾಹನನೆ [1]ಬಗೆಬಗೆ ರೂಪನೆ
ನಗೆಮೊಗದರಸನೆ ನೀ ಬಾರೋ ॥
ಜಗದೊಳು ನಿನ್ನಯ ಮಹಿಮೆಯ ಪೊಗಳುವೆ
ಪುರಂದರವಿಠ್ಠಲ ನೀ ಬಾರೋ ॥ ೩ ॥

## ೫೮

ರಾಗ—ಕಮಾಚು ತಾಳ—ಅಟ

ಮೂರುತಿಯನೆ ನಿಲ್ಲಿಸೋ
ಮಾಧವ ನಿನ್ನ ॥ ಪ ॥

ಎಳತುಳಸಿಯ ವನಮಾಲೆಯು ಕೊರಳೊಳು
ಹೊಳೆವ ಪೀತಾಂಬರದುಡೆಯುಲೊಪ್ಪುವ ನಿನ್ನ ॥ ೧ ॥

ಮುತ್ತಿನ ಹಾರ ನವರತ್ನದುಂಗುರ ಬೆರಳ
ಮತ್ತೆ ಶ್ರೀ ಲಕುಮಿಯು [2]ಉರದಲೊಪ್ಪುವ ನಿನ್ನ ॥ ೨ ॥

ಭಕ್ತರ ಕಾಮಧೇನು ಕಲ್ಪತರುವೆಂಬ
[3]ಭಕ್ತವತ್ಸಲ ಪುರಂದರವಿಠಲನೆ ನಿನ್ನ ॥ ೩ ॥

## ೫೯

ರಾಗ—ಪಿಲ್ಲು ತಾಳ—ಅಟ

[4]ಎಂದೆಂದಿಗೂ ನಿನ್ನ ಪಾದವೇ ಗತಿಯೋ ಗೋ-
ವಿಂದ ಬಾರೈ ಎನ್ನ ಹೃದಯಮಂದಿರಕೆ ॥ ಪ ॥

---

೧) ಬಗೆಬಗೆಯಿಂದಲಿ (ಎಲ್ಲ ಪ್ರತಿಗಳಲ್ಲಿದೆ).
೨) ಆ. ಉದರದಲೊಪ್ಪುವ ೩) ಏ– ಓ. ಮುಕ್ತಿದಾಯಕ.
೪) ಅಚ್ಚಾದ ಪ್ರತಿಗಳಲ್ಲಿ ಬಾರಯ್ಯ ರಂಗಬಾರಯ್ಯ ।
ಸ್ವಾಮೀ ಬಾರಯ್ಯ ॥ ಪ ॥
ವಾರಣಜಯ ನಿವಾರಣವನು ಮಾಡಿದೆ ಕೃಷ್ಣಾ ॥ ಅ ಪ ॥
ಈ ಪಲ್ಲವಿಯನ್ನು ಇಟ್ಟು, ಮುಂದಿನ ಎಲ್ಲ ನುಡಿಗಳನ್ನೂ ಇರಿಸಲಾಗಿದೆ. ಅಲ್ಲದೆ ಈ ಪಲ್ಲವಿಯನ್ನು ಹಿಡಿಕೊಂಡ ಪದವೂ ಒಂದು ಇದೆ.

ಮೊದಲಿಲ್ಲಿ ಬರಬಾರದು ನಾ ಬಂದೆ
ತುದಿಮೊದಲಿಲ್ಲದ ಭವದಿಂದ ನೊಂದೆ ||
ಇದರಿಂದ ಗೆದ್ದು ಹೋಗುವುದೆಂತು ಮುಂದೆ
ಪದುಮನಾಭನೆ ತಪ್ಪು ಕ್ಷಮೆ ಮಾಡು ತಂದೆ || ೧ ||

ಹೆಣ್ಣು ಹೊನ್ನು ಮಣ್ಣಿನಾಶೆಗೆ ಬಿದ್ದು
ಪುಣ್ಯಪಾಪಂಗಳ ನಾನರಿತಿದ್ದು ||
ಅನ್ಯಾಯವಾಯಿತು ಇದಕೇನು ಮದ್ದು
ನಿನ್ನ ಧ್ಯಾನವ ಕೊಡು ಹೃದಯದೊಳಿದ್ದು || ೨ ||

ಹಿಂದೆ ನಾ ಮಾಡಿದ ಪಾಪವ ಕಳೆದು
ಮುಂದೆನ್ನ ಜನ್ಮಸಫಲ ಮಾಡಿ ಪೊರೆದು ||
ತಂದೆ ಶ್ರೀಪುರಂದರ ವಿಠಲ ನೀನಿಂದು
ಬಂದು ಸಲಹೊ ನನ್ನ ಹೃದಯದಿ ನಿಂದು || ೩ ||

## ೬೦

ರಾಗ—ಶಂಕರಾಭರಣ ತಾಳ—ಆದಿ

*ರಂಗಾ ಬಾರೋ ಪಾಂಡುರಂಗ ಬಾರೋ ಶ್ರೀ-
ರಂಗಾ ಬಾರೋ ನರಸಿಂಗ ಬಾರೋ || ಪ ||

ಕಂದ ಬಾರೋ ಎನ್ನ ತಂದೆ ಬಾರೋ
ಇಂದಿರಾರಮಣ ಮುಕುಂದ ಬಾರೋ || ೧ ||

ಅಪ್ಪ ಬಾರೋ ತಿಮ್ಮಪ್ಪ ಬಾರೋ-ಕಂ-
ದರ್ಪನ್ಪಯ್ಯನೇ ಕಂಚಿವರದ ಬಾರೋ || ೨ ||

ವಿಷ್ಣು ಬಾರೋ ಉಡುಪಿಕೃಷ್ಣ ಬಾರೋ-ಎ-
ನ್ನಿಷ್ಟ ಮೂರುತಿ ಪುರಂದರವಿಠಲ ಬಾರೋ[೧] || ೩ ||

---

* ಇದರಲ್ಲಿಯ ಒಂದು ನುಡಿಯನ್ನು ದಾಸರದಲ್ಲವೆಂಬ ಅಭಿಪ್ರಾಯದಿಂದ ಬಿಡಲಾಗಿದೆ. ಸಂ—

೧) ಎ. ಓ. ಪ್ರತಿಯಲ್ಲಿ ಮಾತ್ರ ಹಾಡಿದೆ

೬೧

ರಾಗ— ಶಂಕರಾಭರಣ ತಾಳ— ಆದಿ

*ಲಕ್ಷ್ಮೀಕಾಂತ ಬಾರೋ-ಶುಭ—ಲಕ್ಷಣವಂತ ಬಾರೋ ‖ ಪ ‖
ಪಕ್ಷಿವಾಹನಾ ಬಾರೋ ಪಾವನಮೂರ್ತಿ ಬಾರೋ ‖ ಅ ಪ ‖

ಆದಿಮೂಲವಿಗ್ರಹ ವಿನೋದಿ ನೀನೆ ಬಾರೋ
ಸಾಧುಸಜ್ಜನಸತ್ಯಯೋನಿ–ದಾನಿ ನೀನೆ ಬಾರೋ ‖ ೧ ‖

ಗಾಡಿಕಾರ ಕೃಷ್ಣ ನಿನ್ನ ಬೇಡಿಕೊಂಬೆ ಬಾರೋ
ರೂಢಿಮಾತನಾಡಿ ಸರ್ವ-ರೂಢಿಗೊಡೆಯ ಬಾರೋ ‖ ೨ ‖

ನಿನ್ನ ಪಾದಂಗಳ ನಾನು ಬಣ್ಣಿಸಿ ಕರೆವೆನು ಬಾರೊ
ಪನ್ನಂಗಶಯನ ಸಿರಿ-ಪುರಂದರವಿಟ್ಠಲ ಬಾರೋ ‖ ೩ ‖

೬೨

ರಾಗ—ಮಧ್ಯಮಾವತಿ ತಾಳ—ಆದಿ

ಬಾರೋ ಬ್ರಹ್ಮಾದಿವಂದ್ಯಾ
ಬಾರೋ ವಸುದೇವ ಕಂದ ‖ ಪ ‖

ಧಿಗಿಧಿಗಿ ನೀ ಕುಣಿದಾಡುತ ಬಾರೋ
ದೀನರಕ್ಷಕನೇ
ಜಗದೀಶಾ ಕುಣಿದಾಡುತ ಬಾರೋ
ಚೆನ್ನಕೇಶವನೇ ‖ ೧ ‖

ಗೊಲ್ಲರ ಮನೆಗೆ ಪೋಗಲು ಬೇಡ
ಗೋವಿಂದಾ ಕೇಳೋ
ಹಾಲು ಬೆಣ್ಣೆ ಮೊಸರಿಕ್ಕುವೆ
ನೀನುಣ್ಣ ಬಾರೋ ‖ ೨ ‖

* ಎ–ಓ. ಪ್ರತಿಗಳೆರಡರಲ್ಲಿದೆ.

ದೊಡ್ಡ ದೊಡ್ಡ ಮುತ್ತಿನ ಹಾರವ ಹಾಕಿ
ನೋಡುವೆ ಬಾರೋ
ದೊಡ್ಡಪುರದ ದ್ವಾರಕಿವಾಸ ।
ಪುರಂದರವಿಟ್ಠಲ ॥ ೩ ॥

೬೩

ರಾಗ—ಮೋಹನ ತಾಳ—ಆದಿ

[೧]ಬಾರೋ ನೀ ಎನ್ನ ಮನಮಂದಿರಕೆ—ತಡಮಾಡುವುದೇಕೆ ।
ಮಾರಜನಕ ಹರಿ ನಿನ್ನಗ್ಗಳಿಕೆ–ಸ್ಮರಿಸುವೆ ಕ್ಷಣಕ್ಷಣಕೆ ॥ ಪ ॥

ಬಾರೊ ಬಾರೊ ಮಥುರಾಪುರಿ ಬಿಟ್ಟು
ಸೇರಿಕೊಳ್ಳದಿರು ವರಕರಿಪುರವ ॥ ಅ ಪ ॥

ಕುಂತೀ ಮಕ್ಕಳ ಮನೆಗೆ ಹೋದೇನೆಂದಿ, ಅವರೈದು ಮಂದಿ
ಸಂತೋಷಪಡಿಸುವರೆಂದು ತಿಳಿದಿ—ಎಂಜಲ ಬಳಿದಿ ॥
ಕಂತುಪಿತ ಕೇಳೊ ಮುಂದೆ ನೀ ಮುದದಿ—ಬಂಡಿಯ ಹೊಡೆದಿ
ಇಂತು ಪರಿಯು ನಾನೆಂತು ಪೇಳಲೋ
ಕಾಂತ ಎನ್ನ ಮನದಂತರ್ಯಾಮಿ ॥ ೧ ॥

ಗೋಕುಲದಲ್ಲಿರೆ ನಂದಗೋಪ–ನಿನ್ನ ಕೈಯಿಂದ
ಆಕಳ ಕಾಯ್ಸುವನು ಅವ ಪಾಪ-ಅದು ಅಲ್ಲದಲೆ ॥
ನೀ ಕೇಳ್ವೆ ಗೋಪಿಯರ ಅಪಲಾಪ—ಲಾಲಿಸು ನೀ ಭೂಪ
ಈ ಕರೆಕರೆಯೊಳು ನೀ ಕೂಡಿರುವುದು
ಏಕೆಲೊ ಕಾಂತನೆ ಮಮ ಹೃತ್ಕಮಲಕೆ ॥ ೨ ॥

ದುಷ್ಟಮಾವನ ಮನೆಗೆ ಹೋಗಲು ಬೇಡ–ಪಟ್ಟದಾನೆಗಳಿಂದ
ಗಟ್ಟಿಯಾಗಿ ಮೆಲ್ಲುತ್ತಿಳಿಸುವನವ ಮೂಢ–ಮಲ್ಲರ ಕೈಯಿಂದ ॥
ಕುಟ್ಟಿ ಕೆಡಹುವನು ಪ್ರಚಂಡ—ತಿಳುಹಿದೆನುದ್ದಂಡ
ಇಷ್ಟು ಪರಿಯಲಿ—ಕಷ್ಟವೇತಕೆಲೊ
ದಿಟ್ಟ ಪುರಂದರವಿಟ್ಠಲ ಕೃಷ್ಣ ॥ ೩ ॥

---

೧) ಎ–ಓ. ಈ ಎರಡೆ ಪ್ರತಿಗಳಲ್ಲಿದೆ.

## ೬೪

ರಾಗ—ಶಂಕರಾಭರಣ ತಾಳ—ಅಟ

೧ಬಾರೈಯ ವೆಂಕಟರಮಣ ॥ ಪ ॥

ಬಾರೈಯ ವೆಂಕಟರಮಣನೆ ನೀನೆನಗೆ
ಧಾರಿಣಿಯೊಳು ನಿನ್ನ ಮೂರುತಿ ತೋರುತ ॥ ಅ ಪ ॥

ಮನವೆಂಬ ಮಂಟಪ ನಿನಗೆ ಹಾಕಿ ಎನ್ನ
ತನುವನೊಪ್ಪಿಸಿ ಕೈಯಮುಗಿವೆನಯ್ಯ ॥
ವನಜಜ-ಭವ-ಸುರಮುನಿಗಳು ಭಜಿಸುವ
ಘನಮಹಿಮನೆ ಪಾದಕೆರಗಲೆನ್ನ ಶಿರ ॥ ೧ ॥

ಲಿಂಗದೇಹವೆಂಬ ಪವಳಿ ಶೃಂಗರಿಸಿ
ಅಂಗವ ನಿನಗೆ ಕಾಣಿಕೆಯ ನೀಡುವೆ ॥
ಮಂಗಳಮೂರುತಿ ಅಂಗನೆಸಹಿತ ಭು-
ಜಂಗಶಯನ ಎನ್ನ ಕಂಗಳುತ್ಸವವೀಯೋ ॥ ೨ ॥

ಕಡಗ ಕಿರುಗೆಜ್ಜೆ ಪೆಂಡೆಗಳಿಂದಲೊಪ್ಪುವ
ಉಡುಗೆ ಪೀತಾಂಬರ ತರಳಕೌಸ್ತುಭ ॥
ಪಿಡಿದ ಶಂಖ ಚಕ್ರ ಕರ್ಣಕುಂಡಲದಿಂದ
ಕಡಲಶಯನ ಎನ್ನ ಹೃದಯದೊಳಗೆ ನಿಲ್ಲೊ ॥ ೩ ॥

ಒಡೆಯ ನೀನೆನಗೆ ಅನಾದಿ ಕಾಲದಿಂದ
ಬಿಡವನು ನಾನಿನ್ನ ದಾಸನಯ್ಯ ॥
೨ಕಡುಕರುಣದಿಂದ ದಾಸತ್ವ ನೀಡು-ಗ-
ರುಡಗಮನನೆ ವೆಂಕಟೇಶ ಎನ್ನ ಮನಕೆ ॥ ೪ ॥

೧) ಇ. ಇದರಲ್ಲಿ ಮೂರೇ ನುಡಿಗಳಿವೆ.

೨) ಅ. ಕಡುಕರುಣವ ಮಾಡಿ ಕೃಪೆಯಿಂದ ಸಲಹು–ಗ ।

ಒರಿಮನೆಯಲ್ಲವು ಪರಿವಾರವು ಉಂಟು
ಪರಮಪುರುಷ ನಿನ್ನ ರೂಪಗಳುಂಟು ||
ಸಿರಿದೇವಿ ಸಹಿತದಿ ಪುರಂದರವಿಠಲನೆ
ಕರುಣದಿಂದಲಿ ಮನ್ಮಂದಿರದೊಳಗೆ || ೫ ||

**೬೫**

ರಾಗ—ಸಾವೇರಿ ತಾಳ—

ಬಾರಯ್ಯ ವೆಂಕಟರಮಣ-[1]ಭಕ್ತರ ನಿಧಿಯೆ
ಬಾರೋ ವಿಶ್ವಂಭರಣ || ಪ ||

ತೋರೋ ನಿನ್ನಯ ದಯೆ ತೋಯಜಾಂಬಕನೆ || ಅ ಪ ||

ವೇದಗೋಚರ ಬಾರೋ [2]ಆದಿಕಚ್ಛಪ ಬಾರೋ
ಮೋದಸೂಕರ ಬಾರೋ ಸದಯ ನರಸಿಂಹ ಬಾರೋ || ೧ ||

ವಾಮನ ಭಾರ್ಗವ ಬಾರೋ ರಾಮ-ಕೃಷ್ಣನೆ ಬಾರೋ
ಪ್ರೇಮದ ಬುದ್ಧನೆ ಬಾರೋ ಸ್ವಾಮಿ ಕಲ್ಕಿಯೆ ಬಾರೋ || ೨ ||

ಅರವಿಂದನಾಭ ಬಾರೋ ಸುರರ ಪ್ರಭುವೆ ಬಾರೋ
ಪುರುಹೂತವಂದ್ಯ ಬಾರೋ ಪುರಂದರವಿಠಲ ಬಾರೋ || ೩ ||

**೬೬**

ರಾಗ—ನಾಟಕುರಂಜಿ ತಾಳ—ಮಟ್ಟ

ನಡೆದು ಬಾ ನಾಲ್ವರಿದ್ದೆಡೆಗೆ ಎನ್ನಯ್ಯ ನಿನ್ನ
ತೊಡರ ನಿರ್ಣಯಿಸಿಕೊಂಬೆನು ತೋಯಜಾಕ್ಷ || ಪ ||

ಆದಿಯಲ್ಲಿ ಎನ್ನ [3]ತಾತ-ಮುತ್ತಾತರು
ಪಾದಸೇವೆಯ ಮಾಡಿ [4]ಹಲವು ಕಾಲ ||
ಸಾಧಿಸಿದರ್ಥವ ಸಲೆ ಎನ್ನ ಜೀವಕ್ಕೆ
ಆಧಾರವಾದುದನು ಏಕೆ ಕೊಡಲೊಲ್ಲೆ || ೧ ||

---

೧) ಏ. ಭಾಗ್ಯದ ನಿಧಿಯೆ   ೨) ಏ. ಮುದ್ದು ಕೂರ್ಮನೆ
೩) ಝ. ಅಯ್ಯ-ಮುತ್ತಯ್ಯರು   ೪) ಝ. ಬಹುಕಾಲದಿ

ಸಾಲವ ಕೇಳಲು ಸಟೆ ಟೌಳಿಯನಾಡಿ
ಕಾಲವ ಕಳೆವೆ ನೀ ಕಪಟದಿಂದ ॥
ಮೇಲಿನ ವಿಬುಧರು ಮೆಚ್ಚುವಂತೆ ನಿನ್ನ
ಕಾಲಿಗೆ ಎನ್ನ ಕೊರಳ ಕಟ್ಟಿಕೊಳ್ಳುವೆ ॥ ೨ ॥

ಸನಕಾದಿ ಮುನಿಗಳ ಸಾಕ್ಷಿಯಿಂದಲಿ ಎನ್ನ
ಮನಕೆ ೧ಬಪ್ಪಂತೆ ನೀ ಘನ ಸಂಬುಗೆಯಿತ್ತೆ
೨ಅನುಮಾನವೇಕಿನ್ನು ದಯೆಪಾಲಿಸೈ ಈಗ
ವನಜಾಕ್ಷ ತಂದೆ ಶ್ರೀಪುರಂದರವಿಠಲ ॥ ೩ ॥

೧) ಪಾ. ಬಾಪಂತೆ ನಿನ್ನ ನಾಮವನ್ನು . ೨) ಪಾ. ಅನುದಿನ ಇಪ್ಪಂತೆ ನನಗೆ ಸಂಬುಗೆಕೊಟ್ಟೆ.

## ಧ್ಯಾನದರ್ಶನ

### ೬೭

ರಾಗ — ಕಾಂಬೋದಿ ತಾಳ — ಆದಿ

[೧]ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿರೆ ॥ ಪ ॥

ಮಸ್ತಕದಲಿ ಮಾಣಿಕದ ಕಿರೀಟ
ಕಸ್ತೂರಿ ತಿಲಕವು ಹೊಳೆವ ಲಲಾಟ ॥
ಹಸ್ತದಿ ಕೊಳಲನೂದುವ-[೨]ನರೆನೋಟ
ಕೌಸ್ತುಭದೆಡಬಲದೊಳು ಲೋಲಾಟ ॥ ೧ ॥

ಮಘಮಘಿಸುವ ಸೊಬಗಿನ ಸುಳಿಗುರುಳು
ಚಿಗುರು ತುಳಸಿವನ ಮಾಲೆಯಿಟ್ಟ ಕೊರಳು ॥
ಉಗುರಿಗೆ ಹೊನ್ನ ಮುದ್ರಿಕೆಯಿಟ್ಟ ಬೆರಳು
ಸೊಗಸಿನ ನಾಭಿಯು ತಾವರೆ ಅರಳು ॥ ೨ ॥

ಉಡುದಾರ ಒಡ್ಯಾಣ ಸಕಲಾಭರಣ
ಬೆಡಗಿನ ಪೀತಾಂಬರ ರವಿಕಿರಣ ॥
[೩]ಕಡಗ ಗಗ್ಗರ ಗೆಜ್ಜೆ ಇಕ್ಕಿದ ಚರಣ
ಒಡೆಯ ಶ್ರೀಪುರಂದರವಿಠಲನ ಕರುಣ ॥ ೩ ॥

### ೬೮

ರಾಗ — ಭೈರವಿ (ಶಂಕರಾಭರಣ) ತಾಳ — ಅಟ

[೪]ಕಂಡೆನಾ ಕನಸಿನಲಿ ಗೋವಿಂದನ ॥ ಪ ॥

ಕಂಡೆನಾ ಕನಸಿನಲಿ ಕನಕರತ್ನದ ಮಣಿಯ ।
ನಂದನ ಕಂದ ಮುಕುಂದನ ಚರಣವ ॥ ಅ ॥ ಪ ॥

---

೧) ಊ. ಇಂಥ  ೨) ಓರೆನೋಟ (ಬಹುಮತ)
೩) ಕಡಗಕಂಕಣ (ಬಹುಮತ); ಛ. ಕಡಗಕಾಲಂದುಗೆ : ಓ. ಕಡಗನೂಪುರ
೪) ಹಸ್ತಪ್ರತಿಗಳಲ್ಲಿಲ್ಲ.

ಅಂದುಗೆ ಕಿರುಗೆಜ್ಜೆ ಫಲಿರೆಂಬ ನಾದದಿ
ಬಂದು ಕಾಳಿಂಗನ ಹೆಡೆಯನೇರಿ ||
ಧಿಂಧಿಮಿ ಧಿಮಿಕೆಂದು ತಾಳಗಳಿಂದಾ-
ನಂದದಿ ಕುಣಿವ ಮುಕುಂದನ ಚರಣವ ||೧||

ಉಟ್ಟ ಪಿತಾಂಬರ ಉಡಿಯ ಕಾಂಚಿಯ ದಾಮ
ತೊಟ್ಟ ಮುತ್ತಿನಹಾರ ಕೌಸ್ತುಭವು ||
ಕಟ್ಟಿದ ವೈಜಯಂತಿ ತುಲಸಿಯ ವನಮಾಲೆ
ಇಟ್ಟ ದ್ವಾದಶನಾಮ ನಿಗಮಗೋಚರನ ||೨||

ಕಿರುಬೆರಳಿನ ಮುದ್ರೆಯುಂಗುರ ಮುಂಗಡೆ
ಕರದಲಿ ಕಂಕಣ ನಳಿತೋಳುಗಳ ||
ವರಚತುರ್ಭುಜ ಶಂಖಚಕ್ರದಿ ಮೆರೆವನ
ನಿರುತದಿ ಒಪ್ಪುವ ಕರುಣಾಮೂರುತಿಯ ||೩||

ಬಣ್ಣದ ತುಟಿ ಭಾವರಚನೆಯ ಸುಲಿಪಲ್ಲ
ಸಣ್ಣ ನಗೆಯ ನುಡಿ ಸವಿಮಾತಿನ ||
ಪುಣ್ಯಚರಿತ್ರನ ಪೊಳೆವ ಕಿರೀಟನ
ಕಣ್ಣುಮನ ತಣಿಯದ ಕಂಸಾರಿ ಕೃಷ್ಣನ ||೪||

ಮಂಗಳ ವರತುಂಗಭದ್ರದಿ ಮೆರೆವನ
ಅಂಗಜಪಿತ ಶ್ರೀಲಕ್ಷ್ಮೀಪತಿಯ ||
ಶೃಂಗಾರ ಮೂರುತಿ ಪುರಂದರವಿಠಲನ
ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ||೫||

## ಆಗಮನ

### ೬೯

ರಾಗ—ಶಂಕರಾಭರಣ ತಾಳ—ಆದಿ

*ದೇವ ಬಂದ ನಮ್ಮ ಸ್ವಾಮಿ ಬಂದನೋ
ದೇವರ ದೇವ ¹ಶಿಖಾಮಣಿ ಬಂದನೋ ॥ ಪ ॥

ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ ॥ ೧ ॥

ಮಂದರೋದ್ಧಾರ ಬಂದ ²ಮಾಮನೋಹರ ಬಂದ
ವೃಂದಾವನಪತಿ ಗೋವಿಂದ ಬಂದ ॥ ೨ ॥

ನಕ್ರಹರನು ಬಂದ ಚಕ್ರಧರನು ಬಂದ
ಅಕ್ರೂರಗೊಲಿದ ತ್ರಿವಿಕ್ರಮ ಬಂದ ॥ ೩ ॥

ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ
ಅಕ್ಷಯ ಫಲದ ಶ್ರೀಲಕ್ಷ್ಮೀರಮಣ ಬಂದ ॥ ೪ ॥

ನಿಗಮಗೋಚರ ಬಂದ ನಿತ್ಯತೃಪ್ತನು ಬಂದ
³ನಗೆಮುಖ ಪುರಂದರವಿಠಲ ಬಂದನೋ ॥ ೫ ॥

---

* ಈ ಹಾಡಿನಲ್ಲಿ ದಶಾವತಾರಗಳ ವಿವರಣೆಯುಳ್ಳ ಒಳಗೊಂಡ ಇನ್ನೂ ಕೆಲವು ನುಡಿಗಳು ಇವೆ. ಪ್ರಾಚೀನ ಹಸ್ತಪ್ರತಿಗಳಲ್ಲಿ ಇಷ್ಟೇ ನುಡಿಗಳಿವೆ.

೧) ಎ. ಶಿರೋಮಣಿ ೨) ಎ. ಮಹಾಮುನಿ ಹರಿಬಂದ ೩) ಎ. ನಗಧರ

## ೭೦

ರಾಗ—ಮಧ್ಯಮಾವತಿ    ತಾಳ— ಅಟ

ಬಂದು ನಿಂದಿಹ ನೋಡಿ-ಭೂತಳದಿ ವೆಂಕಟ
ಇಂದಿರೆಯನೊಡಗೂಡಿ-ಒಪ್ಪುವ ನಿರಂತರ
ಪೊಂದಿ ಭಜನೆಯ ಮಾಡಿ-ಆನಂದ ೧ಬೇಡಿ ॥ ಪ ॥

ವಂದಿಸುತ ಮನದೊಳಗೆ ಇವನಡಿ-
ದ್ವಂದ್ವ ಭಜಿಸಲು ಬಂದ ಭಯಹರ ।
ಇಂದುಧರ ಸುರವೃಂದನುತ ಗೋ-
ವಿಂದ ಘನ ದಯಾಸಿಂಧು ಶ್ರೀಹರಿ ॥ಅ.ಪ ॥

ದ್ವಾರದೆಡಬಲದಲ್ಲಿ-ಜಯವಿಜಯರಿಬ್ಬರು
ಸೇರಿ ಸೇವಿಪರಲ್ಲಿ-ಸನಕಾದಿನುತ ಶೃಂ-
ಗಾರನಿಧಿ ಅಂಗದಲಿ-ಮುತ್ತಿನಲಿ ಶೋಭಿಪ
ಹಾರ ಹೊಂದಿಹುದಲ್ಲಿ-ವಿಸ್ತಾರವಲ್ಲಿ ॥
ವಾರವಾರಕೆ ಪೂಜೆಗೊಂಬುವ
ಹಾರಮುಕುಟಾಭರಣ ಕುಂಡಲ- ।
ಧಾರಿ ಭುಜಕೀಯೂರಭೂಷಿತ
ಮಾರಪಿತ ಗುಣಮೋಹನಾಂಗ ॥
ಚಾರು ಪೀತಾಂಬರ ಕಟಿಯ ಕರ- ।
ವೀರ ಕಲ್ಹಾರಾದಿ ಹೂವಿನ ।
ಹಾರಕೊರಳೊಳು ಎಸೆಯುತಿರೆ ವದ- ।
ನಾರವಿಂದನು ನಗುತ ನಲಿಯುತ ॥ ೧ ॥

ಎಲ್ಲ ಭಕುತರಭೀಷ್ಟ-ಕೊಡುವುದಕೆ ತಾ ಕೈ-
ವಲ್ಯಸ್ಥಾನವ ಬಿಟ್ಟು-ಶೇಷಾದ್ರಿಮಂದಿರ
ದಲ್ಲಿ ಲೋಲುಪ ದಿಟ್ಟ-ಸೌಭಾಗ್ಯನಿಧಿಗೆದು-
ರಿಲ್ಲ ಭುಜಬಲ ಪುಷ್ಟ-ಕಸ್ತೂರಿಯಿಟ್ಟ ॥

---

೧) ಎ- ಓ. ಗೂಡಿ

ಚೆಲ್ವ ಪಣೆಯಲಿ ಶೋಭಿಸುವ ಸಿರಿ–
ವಲ್ಲಭನ ಗುಣ ಪೊಗಳದಿಹ ಜಗ - ।
ಖುಲ್ಲರೆದೆದಲ್ಲಣ ಪರಾಕ್ರಮ
ಮಲ್ಲಮರ್ದನ [1]ಮಾತುಳಾಂತಕ ॥
ಫಲ್ಗುಣನ ಸಖ ಪ್ರಕಟನಾಗಿಹ
ದುರ್ಲಭನು ಅಘದೂರ ಬಹು ಮಾಂ-
ಗಲ್ಯ ಹೃದಯವ ಮಾಡಿ ಸೃಷ್ಟಿಗೆ
ಉಲ್ಲಾಸ ಕೊಡುತಲಿ ಚೆಂದದಿಂದಲಿ ॥ ೨ ॥

ಪದಕ–ಕೌಸ್ತುಭಧಾರ–ಸರಿಗೆಯ ಸುಕಂಧರ
[2]ಸುದರ್ಶನ-ದರಧಾರ—ಸುಂದರ ಮನೋಹರ
ಪದಯುಗದಿ ನೂಪುರ–ಇಟ್ಟಿಹನು ಸನ್ಮುನಿ–
ಹೃದಯ ಸ್ಥಿತಗಂಭೀರ–ಬಹುದಾನ ಶೂರ ॥
ವಿಧಿ–ಭವಾದ್ಯರ ಪೊರೆವ ದಾತನು
ತುದಿಮೊದಲು ಮಧ್ಯವು ವಿರಹಿತನು ।
ಉದುಭವಾದಿಗಳೀವ ಕರ್ತನು
ತ್ರಿದಶಪೂಜಿತ ತ್ರಿಭುವನೇಶ ॥
ಸದುವಿಲಾಸದಿ ಸ್ವಾಮಿತೀರ್ಥದಿ
ಉದಿಸುತಿರೆ ಸಿರಿಮಹಿಳೆ ಸಹಿತದಿ ।
ಪದುಮನಾಭ ಪುರಂದರವಿಠಲನು
ಮುದದಿ ಬ್ರಹ್ಮೋತ್ಸವದಿ ಮೆರೆಯುತ ॥ ೩ ॥

---

೧) ಎ- ಓ. ಗೂಡಿ ೨) ಎ- ಓ. ಮಾತುಳಾರಿ ೩) ಇ. ಸುದರ್ಶನ ಗದಾಧಾರಿ

## ೭೧

ರಾಗ—ಸಾರಂಗ ತಾಳ—ಏಕ

[೧]ಇಂದು ನಾನೇನು ಸುಕೃತವ ಮಾಡಿದೆನೊ
ಇಂದಿರೆಯರಸು ವೆಂಕಟ ಬಂದ ಮನೆಗೆ ॥ ಪ ॥

ನೊಸಲ ತಿದ್ದಿದ ಬೊಟ್ಟಿನೆಸೆವ ಕಸ್ತೂರಿಯು
ಎಸಳು ಕಂಗಳ ಥಾಳ ಹೊಸ ಪರಿಯ ನೋಟ ॥
ಎಸೆವ ಅಮೃತಸಾರ ರಸಸವಿಮಾತು
ಕುಸುಮದ ಸೊಬಗ ವೆಂಕಟ ಬಂದ ಮನೆಗೆ ॥ ೧ ॥

ಹಾರ ಕೇಯೂರ ಹೊನ್ನುಂಗುರದ ಬೆರಳು
ಹಾರದ ನಡುವೆ ಹಾಕಿದುವೇಳು ಪದಕ ॥
ತೋರಮುತ್ತಿನ ಕಂಠಮಾಲೆ ಮಾಣಿಕ ಕೋ-
ನೇರಿ ಗಿರಿವಾಸ ವೆಂಕಟ ಬಂದ ಮನೆಗೆ ॥ ೨ ॥

ಬಿಗಿದು ಸುತ್ತಿದ ನೀಲ ಬಿಡುಮುತ್ತಿನ ಒಂಟಿ
ಮುಗುಳು ಬಿರಿದಂದದ ನಗೆ ದಂತಪಂಕ್ತಿ ॥
ಝಗಿಪ ಪೀತಾಂಬರ ಉಡೆಯ ಕಠಾರಿ ಪ-
ನ್ನಗಗಿರಿವಾಸ ವೆಂಕಟ ಬಂದ ಮನೆಗೆ ॥ ೩ ॥

ಬಾಲಚಂದ್ರನ ಪೋಲ್ವ ಕಪೋಲ ಕುಂಡಲವು
ನೀಲಮಾಣಿಕ್ಯದಾಭರಣವನಿಟ್ಟು ॥
ಕಾಲ ಪೆಂಡೆಯವು ರತುನದ ಹಾವುಗೆಯು
ಮೇಲುಗಿರಿವಾಸ ವೆಂಕಟ ಬಂದ ಮನೆಗೆ ॥ ೪ ॥

ಕರಯುಗಲದಲಿ ಶಂಖ-ಚಕ್ರವ ಪಿಡಿದು
ಎರಡೇಳು ಭುವನ ತನ್ನುದರದೊಳಿಟ್ಟು ॥
ಗರುಡನ ಹೆಗಲೇರಿ ಜಗವ ಪಾಲಿಸುವ
ಪುರಂದರವಿಠಲ ವೆಂಕಟ ಬಂದ ಮನೆಗೆ ॥ ೫ ॥

೧ ಹಲವು ಪ್ರತಿಗಳಲ್ಲಿ ಈ ಹಾಡು ದೊರಕುತ್ತಿದ್ದರೂ ಬಹಳ ವಿಕಾರಗೊಂಡಿದೆ. ಸುವಿಗಳಲ್ಲಿಯೂ ಒಮ್ಮತವಿಲ್ಲ.

೭೨

ರಾಗ— ಬಿಲಹರಿ ತಾಳ ಅಟ

*ಗರುಡಗಮನ ಬಂದನೋ–ನೋಡಿರೊ ಬೇಗ
ಗರುಡಗಮನ ಬಂದನೊ ॥ ಪ ॥

ಗರುಡಗಮನ ಬಂದ ಧರಣಿಯಿಂದೊಪ್ಪುತ
ಕರೆದು ಬಾರೆನ್ನುತ ವರಗಳ ಬೀರುತ ॥ ಅ.ಪ ॥

ಎನ್ನ ರಕ್ಷಿಪ ದೊರೆ ಇಲ್ಲಿಗೆ ತಾ ಬಂದ
ಚಿನ್ನದೊಲ್ ಪೊಳೆವ ವಿಹಂಗರಥದಲಿ ॥
ಘನ್ನಮಹಿಮ ಬಂದ್ಯಚ್ಛಿನ್ನಮೂರುತಿ ಬಂದ
ಸಣ್ಣ ಕೃಷ್ಣನು ಬಂದ ಬೆಣ್ಣೆಗಳ್ಳನು ಬಂದ ॥ ೧ ॥

ಪಕ್ಷಿವಾಹನ ಬಂದ ಲಕ್ಷ್ಮೀಪತಿಯು ಬಂದ
ಕುಕ್ಷಿಯೊಳೀರೇಳು ಜಗವನಿಟ್ಟವ ಬಂದ ॥
ಸೂಕ್ಷ್ಮ-ಸ್ಥೂಲದೊಳಗಿರುವನು ತಾ ಬಂದ
ಸಾಕ್ಷೀಭೂತನಾದ ಸರ್ವೇಶ್ವರ ಬಂದ ॥ ೨ ॥

ತಂದೆ ಪುರಂದರವಿಠಲರಾಯ ಬಂದ
ಬಂದು ನಿಂದು ನಲಿದಾಡುತಿಹ ॥
ಅಂದು ಸಾಂದೀಪನ ನಂದನನ ತಂದಿತ್ತ
ಸಿಂಧುಶಯನ ಆನಂದ ಮೂರುತಿ ಬಂದ ॥ ೩ ॥

---

* ಓ. ಒಂದೇ ಪ್ರತಿಯಲ್ಲಿ ಈ ಪದ್ಯವು ಇದೆ.

# ದರ್ಶನಸಂಭ್ರಮ

## ೭೩

ರಾಗ—ಪಂತುವರಾಳಿ ತಾಳ – ಆದಿ

ಕಂಡೆ ನಾ ಗೋವಿಂದನ
ಪುಂಡರೀಕಾಕ್ಷ ಪಾಂಡವಪಕ್ಷನ || ಪ ||

ಕೇಶವ ನಾರಾಯಣ ಶ್ರೀಕೃಷ್ಣನ
ವಾಸುದೇವ ಅಚ್ಯುತಾನಂತನ ||
ಸಾಸಿರನಾಮದ ಶ್ರೀಹೃಷೀಕೇಶನ
ಶೇಷಶಯನ ನಮ್ಮ ವಸುದೇವಸುತನ || ೧ ||

ಮಾಧವ ಮಧುಸೂದನ ತ್ರಿವಿಕ್ರಮನ
ಯಾದವ ಕುಲಜನ ಮುನಿವಂದ್ಯನ ||
ವೇದಾಂತವೇದ್ಯ ಶ್ರೀಇಂದಿರೆ ರಮಣನ–
ನಾದಿಮೂರುತಿ ಪ್ರಹ್ಲಾದವರದನ || ೨ ||

ಪುರುಷೋತ್ತಮ ನರಹರಿ ಶ್ರೀಕೃಷ್ಣನ
ಶರಣಾಗತ ವಜ್ರಪಂಜರನ ||
ಕರುಣಾಕರ ನಮ್ಮ ಪುರಂದರವಿಠಲನ
ನೆರೆನಂಬಿದೆನು ಬೇಲೂರ ಚೆನ್ನಿಗನ || ೩ ||

## ೭೪

ರಾಗ – ಭೈರವಿ ತಾಳ—ತ್ರಿವಿಡಿ

ಡೆ ತಿರುಪತಿ ವೆಂಕಟೇಶನ ಕಾರಣಾತ್ಮಕ ಸಾರ್ವಭೌಮನ
ಮಿತಾರ್ಥದಾಯಕ ದೇವನ ಕರುಣಾನಿಧಿಯೆಂದೆನಿಸಿ ¹ಮೆರೆವನ || ಪ ||

೧) ಅ. ಕೊಂಬನ

ಕೋಟಿ ಸೂರ್ಯಪ್ರಕಾಶವೆನಿಪ ಕಿರೀಟವನು ಮಸ್ತಕದಿ ಕಂಡೆನು
ನೋಟಕಚ್ಚರಿಯೆನಿಪ ನಗೆಮೊಗ ನೊಸಲೊಳಗೆ ತಿರುಮಣಿಯ ಕಂಡೆನು ||
ಸಾಟಿಯಿಲ್ಲದ ಶಂಖ-ಚಕ್ರವ ಚತುರ ಹಸ್ತದಲೀಗ ಕಂಡೆನು
ಬೂಟಕದ ಮಾತಲ್ಲ ಕೇಳಿ-ಭೂರಿದೈವದ ಗುಡನಂಘ್ರಿಯ || ೧ ||

ತಪ್ಪುಗಾಣಿಕೆ ಕಪ್ಪಗಳನು ೧ಸಪ್ತಲೋಕಗಳಿಂದ ತರಿಸುವ
ಉಪ್ಪುವೋಗರವನ್ನು ಮಾರಿಸಿ ಉಚಿತದಿಂದಲಿ ಹಣವ ಗಳಿಸುವ ||
ಇಪ್ಪತ್ತುದುಡ್ಡಿಗೆ ಸೇರು ತೀರ್ಥವ ಒಪ್ಪದಿಂದ ಕ್ರಯಮಾಡಿ ಕೊಡಿಸುವ
ಸರ್ಪಶಯನನ ಸಾರ್ವಭೌಮನ ಅಪ್ಪ ವೆಂಕಟರಮಣನಂಘ್ರಿಯ || ೨ ||

ಉರದಿ ಶ್ರೀದೇವಿ ಇರಲು ಕಂಡೆನು ಉನ್ನತದ ಕೌಸ್ತುಭವ ಕಂಡೆನು
ಗರುಡ ಕಿನ್ನರ ನಾರದಾದಿಗಳಿರಲು ಎಡಬಲದಲ್ಲಿ ಕಂಡೆನು ||
ತರತರದಿ ಭಕ್ತರಿಗೆ ವರಗಳ ಕರೆದು ಕೊಡುವುದ ನಾನು ಕಂಡೆನು
ಶರಧಿಶಯನನ ಶೇಷಗಿರಿವರ ಸಿರಿಪುರಂದರವಿಠಲನಂಘ್ರಿಯ || ೩ ||

೭೫

ರಾಗ—ಆನಂದಭೈರವಿ ತಾಳ—ಅಟ

ಕಣ್ಣಾರೆ ಕಂಡೆನಚ್ಯುತನ—ಕಂಚಿ-
ಪುಣ್ಯಕೋಟಿ ಕರಿರಾಜವರದನ || ಪ ||

ವರಮಣಿ ಮುಕುಟಮಸ್ತಕನ—೨ಸುರ-
ವರ ಸನಕಾದಿವಂದಿತ ಪಾದಯುಗನ ||
ತರುಣಿ ಲಕ್ಷ್ಮೀ ಮನೋಹರನ—ಪೀತಾಂ-
ಬರದುಡಿಗೆಯಲಿ ರಂಜಿಸುವ ವಿಗ್ರಹನ || ೧ ||

---

೧) ಅ. ಸಪ್ತದ್ವೀಪ ಛ. ಸಮಸ್ತದೇಶ

೨) ಓ. ಸರ್ವಸುರ

೧ಕಸ್ತೂರಿ ಪೆರೆನೊಸಲವನ—೨ತೋರ-
ಮುತ್ತಿನ ಹಾರ ಪದಕವ ಧರಿಸಿವನ ||
ಎತ್ತಿದಭಯ ಹಸ್ತದವನ—ತನ್ನ-
ಭಕ್ತರ ಸ್ತುತಿಗೆ ಹಾರಯಿಸಿ ಹಿಗ್ಗುವನ || ೨ ||

ನೀಲಮೇಘಶ್ಯಾಮಲನ—ದೇವ-
ಲೋಲ ಮಕರಕುಂಡಲ ಧರಿಸಿಹನ ||
ಮೂಲೋಕದೊಳಗೆ ಚೆನ್ನಿಗನ—ಕಮ-
ಲಾಲಯಾಪತಿ ವೈಕುಂಠವಲ್ಲಭನ || ೩ ||

ಭಾನುಕೋಟಿ ತೇಜದವನ—೩ಭವ-
ಕಾನನ ರಾಶಿಗೆ ಹವ್ಯವಾಹನನ ||
ದಾನವರೆದೆಯ ತಲ್ಲಣನ—ಮುನಿ-
ಮಾನಸ ಹಂಸನೆಂದೆನಿಸಿ ಮೆರೆವನ || ೪ ||

ತುಂಗ ಚತುರ್ಭುಜದವನ—ಶುಭ-
ಮಂಗಳರೇಖೆ ಅಂಗಾಲಲೊಪ್ಪುವನ ||
ಶೃಂಗಾರಹಾರಕಂಧರನ-ದೇವ-
ಗಂಗೆಯ ಪಿತ ಪುರಂದರವಿಟ್ಠಲನ || ೫ ||

೭೬

ರಾಗ—ನಾದನಾಮಕ್ರಿಯಾ ತಾಳ—ಏಕ

೪ಕಂಡೆಕಂಡೆ ಕಂಡೆನಯ್ಯಾ ಕಂಗಳ ದಣಿಯುವ ತನಕ
ಮಂಗಳಮೂರುತಿ ಮನ್ನಾರು ಕೃಷ್ಣನ || ಪ ||

ಉಟ್ಟ ಪೀತಾಂಬರ ಕಂಡೆ ತೊಟ್ಟ ವಜ್ರದಂಗಿ ಕಂಡೆ
ದಕ್ಷಿಣದ ದ್ವಾರಕೆ ಮನ್ನಾರು ಕೃಷ್ಣನ || ೧ ||

೧) ಅ. ಕಸ್ತೂರಿ ತಿಲಕವಿದ್ದವನ. ೨) ಅ. ಕೊರಳ. ಅ. ಹೊಸ
೩) ಅ. ಪಾಪ. ೪) ಓ. ಇಲ್ಲಿ ವಿಕಾರಗೊಂಡಿದೆ.

ಕಡೆವ ಕಡೆಗೋಲ ಕಂಡೆ ನಡುವಿನೊಡ್ಯಾಣ ಕಂಡೆ
ಕಡುಮುದ್ದು ಮನ್ನಾರು ಕೃಷ್ಣನ ಕಂಡೆ ॥ ೨ ॥

ದೇವಕಿ ದೇವಿಯರ ಕಂಡೆ ಗೋಪಿಯರ ಮುದ್ದಾಟ ಕಂಡೆ
ಮಾವಕಂಸನ ಮರ್ದನ ಶ್ರೀಕೃಷ್ಣನ ॥ ೩ ॥

ಆಕಳ ಕಾವುದ ಕಂಡೆ ಗೋಪಾಲಕೃಷ್ಣನ ಕಂಡೆ
ವೈಕುಂಠವಾಸನ ಮನ್ನಾರುಕೃಷ್ಣನ ॥ ೪ ॥

ಶೇಷನ ಹಾಸಿಕೆಯ ಕಂಡೆ ಸಾಸಿರನಾಮನ ಕಂಡೆ
ಶ್ರೀಶ ಪುರಂದರವಿಠಲ ಕೃಷ್ಣರಾಯನ ॥ ೫ ॥

## ೭೭

ರಾಗ—ಕಾವೇರಿ ತಾಳ—ಅಟ

*ದಣಿಯ ನೋಡಿದೆನೋ ವೆಂಕಟನ–ಮನ-
ದಣಿಯೆ ನೋಡಿದೆ ಶಿಖಾಮಣಿಯ ನಿರ್ಮಲನ ॥ ಪಲ್ಲ ॥

ಕೇಸಕ್ಕಿ ಅನ್ನ ಉಂಬುವನ–೧ದುಡ್ಡು
ಕಾಸು ಬಿಡದೆ ಹೊನ್ನುಗಳಿಸಿಕೊಂಬುವನ ॥
ದೋಸೆ ಅನ್ನವ ಮಾರಿಸುವನ
ತನ್ನ ದಾಸರ ಮೇಳದಿ ಕುಣಿದಾಡುತಿಹನ ॥ ೧ ॥

ಗಂಟಿನೊಲ್ಲಿಯ ಹೊದ್ದಿಹನ–ಹೊರ–
ಹೊಂಟು ಹೋಗಿ ಬೇಟೆಯಾಡುತಲಿಹನ ॥
ಗಂಟೆನಾದಕೆ ಒಲಿಯುವನ–ಭೂವೈ–
ಕುಂಠವಿದೆಂದು ಹಸ್ತವ ತೋರಿದವನ ॥ ೨ ॥

---

* ಏ. ಪ್ರತಿಯಲ್ಲಿ ಈ ಹಾಡು ೫ ನುಡಿಗಳಲ್ಲಿದ್ದು ಬಹಳೇ ವಿಕಾರಗೊಂಡಿದೆ.
೧. ಏ. ಬಡ್ಡಿ

ಬೆಟ್ಟದೊಳಗೆ ಇರುತಿಹನ–ಮನ-
ಮುಟ್ಟಿ ಭಜಿಪ ಭಕುತರಿಗೊಲಿದವನ ||
ಕೊಟ್ಟ ವರವ ತಪ್ಪದವನ–ಈ
ಸೃಷ್ಟಿಗಧಿಕ ಪುರಂದರವಿಟ್ಠಲನ || ೩ ||

೭೮

ರಾಗ–ರೇಗುಪ್ತಿ ತಾಳ—ಝಂಪೆ

ನಿನ್ನ ದಿವ್ಯಮೂರುತಿಯ ಕಣ್ಣದಣಿಯಲು ನೋಡಿ
ಧನ್ಯನಾದೆನು ಧರೆಯೊಳು ||
ಇನ್ನು ಈ ಭವಭಯಕೆ ಅಂಜಲೇತಕೆ ದೇವ
ಚೆನ್ನ ಶ್ರೀವೆಂಕಟೇಶಾ—ಈಶಾ || ಪ ||

ಏಸು ಜನುಮದ ಸುಕೃತಫಲವು ಬಂದೊದಗಿತೋ
ಈ ಸ್ವಾಮಿಪುಷ್ಕರಣಿಯೊಳ್
ನಾ ಸ್ನಾನವನು ಮಾಡಿ–ವರಾಹ ದೇವರ ನೋಡಿ
ಶ್ರೀಸ್ವಾಮಿ ಮಹಾದ್ವಾರಕೆ
ಈ ಶರೀರವನು ಈಡಾಡಿ ಪ್ರದಕ್ಷಿಣೆ ಮಾಡಿ
ಲೇಸಿನಿಂದಲಿ ೧ಪೊಗಳುತ
ಆ ಸುವರ್ಣದ ಗರುಡಗಂಬವನು ಸುತ್ತಿ ಸಂ-
ತೋಷದಿಂ ಕೊಂಡಾಡಿದೆ—ಬಿಡದೆ || ೧ ||

ನೆಟ್ಟನೆಯೆ ದ್ವಾರವ ದಾಟಿ ಪೋಗುತಲಿರಲು
ದಟ್ಟಣೆಯ ಮಹಾಜನದೊಳು
ಕೃಷ್ಣಾಜಿನದವರ ಕೈಪೆಟ್ಟು ಕಾಣುತ್ತ ಕಂ-
ಗೆಟ್ಟು ಹರಿಹರಿಯೆನುತಲಿ
ಗಟ್ಟಿ ಮನಸಿನಲಿ ತಲೆಚಿಟ್ಟಿಟ್ಟು ಶೀಘ್ರದಲಿ
ಕಟ್ಟುಂಜನಕೆ ಪೋಗುತ
ಬೆಟ್ಟದಧಿಪತಿ ನಿನ್ನ ದೃಷ್ಟಿಯಿಂದಲಿ ನೋಡೆ
ಸುಟ್ಟಿ ಎನ್ನಯ ದುರಿತವಾ–ದೇವಾ || ೨ ||

೧) ಅ- ಅ. ಪೋಗುತ

ಶಿರವಲ್ಲಿ ರವಿಕೋಟಿ ತೇಜದಿಂದೆಸೆಯುವ
ಕಿರೀಟ-ವರಕುಂಡಲಗಳ
ಕೊರಳಲ್ಲಿ ಸರ ವೈಜಯಂತಿ ವನಮಾಲಿಯನು
ಪರಿಪರಿಯ ಹಾರಗಳನು
ಉರದಿ ಶ್ರೀವತ್ಸವನು ಕರದಿ ಶಂಖ-ಚಕ್ರಗಳ
ವರನಾಭಿಮಾಣಿಕವನು
ನಿರುಪ ಮಣಿಖಚಿತ ಕಟಿಸೂತ್ರ ಪೀತಾಂಬರವ
ಚರಣಯುಗದಂದುಗೆಯನು—ಇನ್ನು ॥ ೭

ಇಕ್ಷುಚಾಪನ ಪಿತನೆ ಪಕ್ಷೀಂದ್ರವಾಹನನೆ
ಲಕ್ಷ್ಮಿಪತಿ ಕಮಲಾಕ್ಷನೆ
ಅಕ್ಷತ್ರಯ ಅಜ ಸುರೇಂದ್ರಾದಿವಂದಿತನೆ
ಸಾಕ್ಷಾಜ್ಜಗನ್ನಾಥನೇ
ರಾಕ್ಷಸಾಂತಕ ಭಕ್ತವತ್ಸಲ ಕೃಪಾಳು ನಿರ-
ಪೇಕ್ಷನಿತ್ಯತೃಪ್ತನೇ
ಕುಕ್ಷಿಯೊಳಗೀರೇಳು ಭುವನವನು ಪಾಲಿಪನೆ
ರಕ್ಷಿಸುವುದೊಳಿತು ದಯದಿ—ಮುದದಿ ॥ ೮

ಉರಗಗಿರಿಯರಸ ನಿನ್ನ ಚರಣ ನೋಡಿದ ಮೇಲೆ
ಉರಗ ಕರಿ ವ್ಯಾಘ್ರ ಸಿಂಹ
ಅರಸು ಚೋರಾಗ್ನಿ ವೃಶ್ಚಿಕ ಕರಡಿ ಮೊದಲಾದ
ಪರಿಪರಿಯ ಭಯಗಳುಂಟೇ
ಪರಮ ವಿಷಯಗಳ ಲಂಪಟದೊಳಗೆ ಸಿಲುಕಿಸದೆ
ಕರುಣಿಸುವುದೊಳಿತು ದಯವಾ
ಸ್ಮರಗಧಿಕ ಲಾವಣ್ಯ ಪುರಂದರವಿಠಲನೇ
ಶರಣಜನಕರುಣಾರ್ಣವಾ—ದೇವಾ ॥ ೯

## ೭೯

ರಾಗ—ನಾದನಾಮಕ್ರಿಯಾ ತಾಳ—ರೂಪಕ

೧ನಿನ್ನ ನೋಡಿ ಧನ್ಯನಾದೆನೊ–ಹೇ ಶ್ರೀನಿವಾಸ ॥ ಪ ॥

ನಿನ್ನ ನೋಡಿ ಧನ್ಯನಾದೆ ಎನ್ನ ಮನದಿ ನಿಂತು ಸುಪ್ರ-
ಸನ್ನ ದಯಮಾಡಿ ನೀನು ಮುನ್ನಿನಂತೆ ಸಲಹಬೇಕೊ ॥ ಅ ಪ ॥

ಲಕ್ಷ್ಮಿರಮಣ ಪಕ್ಷಿವಾಹನ ಲಕ್ಷ್ಮಿ ನಿನ್ನ ವಕ್ಷದಲ್ಲಿ
ರಕ್ಷಣ ಶಿಕ್ಷಣ ದಕ್ಷ ಪಾಂಡವಪಕ್ಷ ಕಮಲಾಕ್ಷ ರಕ್ಷಿಸು ॥ ೧ ॥

ದೇಶದೇಶಗಳನು ತಿರುಗಿ ಆಶಾಬದ್ಧನಾದೆ ಸ್ವಾಮಿ
ದಾಸನೆನಿಸಿ ಎನ್ನ ಜಗದೀಶ ಕಾಯೊ ವಾಸುದೇವ ॥ ೨ ॥

ಕಂತುಜನಕ ಕೊಟ್ಟು ಎನಗೆ ಅಂತರಂಗದ ಸೇವೆಯನ್ನು
ಅಂತರವಿಲ್ಲದೆ ಪಾಲಿಸಯ್ಯ ಹೊಂತಕಾರಿ ಪುರಂದರವಿಠಲ ॥ ೩ ॥

---

೧) ಹಸ್ತಪ್ರತಿಗಳಲ್ಲಿ ಸಿಕ್ಕುವದಿಲ್ಲ.

## ಕರುಣಾಯಾಚನೆ

### ೮೦

ರಾಗ—ಸಾವೇರಿ ತಾಳ—ಆದಿ

ಪರಾಕು ಮಾಡಿದೆ ಪರಾಮರಿಸಿ ಎನ್ನ-
ಪರಾಧಂಗಳ ಕ್ಷಮಿಸೋ ॥ ಪಲ್ಲ ॥

ಧರಾರಮಣ ಫಣಿಧರಾಮರಾರ್ಚಿತ
ಸುರಾಧಿಪತಿ-ವಿಧಿ-ಹರಾದಿವಂದಿತ ॥ ಅ. ಪ ॥

ನರರೊಳಗೆ ಪಾಮರನು ನಾನಿಹ-
ಪರಕೆ ಸಾಧನವರಿಯೆ ಶ್ರೀಹರಿ ॥
ಚರಣಕಮಲಕೆ ಶರಣುಹೊಕ್ಕೆನು
ಕರಣದಿಂದ ನಿನ್ನ ಸ್ಮರಣೆಯೆನಗಿತ್ತು ॥ ೧ ॥

ಜಪವನರಿಯೆನು ತಪವನರಿಯೆನು
ಉಪವಾಸ ವ್ರತಗಳ ನಾನರಿಯೆ ॥
ಕೃಪಾವಲೋಕನದಿಂದ ಆ ಪಾಪಗಳನೆಲ್ಲ
ಅಪಹತವ ಮಾಡೋ ಅಪಾರಮಹಿಮನೇ ॥ ೨ ॥

ಕರಿರಾಜನುದ್ಧರಿಸಿ ದ್ರೌಪದಿಯ
ಮೊರೆಯ ಲಾಲಿಸಿ ತರಳಗೊಲಿದೆ ನೀ ॥
೧ಸಿರಿರಮಣ ನಿನ್ನ ಸರಿಯಾರ ಕಾಣೆ
ಪುರಾರಿನುತ ಸಿರಿ ಪುರಂದರವಿಠಲ ॥ ೩ ॥

---

೧) ಎ. ಪ್ರತಿಯಲ್ಲಿ "ಸಿರಿಯರಸ" ಎಂದಿದೆ.

## ೮೧

ರಾಗ—ಪೂರ್ವಿ ತಾಳ—ಆದಿ

ಕರುಣಿಸೋ—[೧]ರಂಗಾ ಕರುಣಿಸೋ || ಪ ||

[೨]ಇರುಳು ಹಗಲು ನಿನ್ನ ಸ್ಮರಣೆ [೩]ಮರೆಯದಂತೆ || ಅ ಪ ||

ರುಕುಮಾಂಗದನಂತೆ ವ್ರತವನಾನರಿಯೆನು
ಶುಕಮುನಿಯಂತೆ ಸ್ತುತಿಸಲರಿಯೆ ||
[೪]ಬಕವೈರಿಯಂತೆ ಧ್ಯಾನವ ಮಾಡಲರಿಯೆ ದೇ-
ವಕಿಯಂತೆ ಮುದ್ದಿಸಲರಿಯೆನು ರಂಗಾ || ೧ ||

ಗರುಡನಂತೆ ಪೊತ್ತು ತಿರುಗಲರಿಯೆ ನಾನು
ಕರಿರಾಜನಂತೆ ಕರೆಯಲರಿಯೆ ||
ವರಕಪಿಯಂತೆ ಸೇವೆಯ ಮಾಡಲರಿಯೆನು
ಸಿರಿಯಂತೆ ನಿನ್ನ ಮೆಚ್ಚಿಸಲರಿಯೆ ರಂಗಾ || ೨ ||

ಬಲಿಯಂತೆ ದಾನವ ಕೊಡಲರಿಯೆನು ಭಕ್ತಿ-
ಫಲವನರಿಯೆ ಪ್ರಹ್ಲಾದನಂತೆ ||
[೫]ಒಲಿಸಲರಿಯೆ ಅರ್ಜುನನಂತೆ ಸಖನಾಗಿ
ಸಲಹೋ ದೇವರ ದೇವ ಪುರಂದರವಿಠಲ || ೩ ||

---

೧) ಗ—ರಘು. ಕೃಷ್ಣ   ೨) ಗ. ಮರಣಕಾಲಕೆ ನಿನ್ನ ಚರಣದ ಸ್ಮರಣೆಯು ||
೩) ಎ. ಒದಗುವಂತೆ ಅ. ಅಗುವಂತೆ
೪) ಶ್ರೀ. ಬಕದಾಲ್ಭ್ಯ ೫) ಸಲವು ಮುಕ್ತಮಾರ್ಗಗಳೆಲ್ಲವ ತಿಂದಿಸಿ (ಬಹುಮತ)

## ೮೨

ರಾಗ— ಆನಂದಭೈರವಿ ತಾಳ— ಅಟ

[1]ಕರುಣಿಸಿ ಕೇಳು ಕಂದನ ಮಾತನು
ಗರುಡವಾಹನ ಗಂಗಾಜನಕ ಶ್ರೀಹರಿಯೇ ॥ ಪ ॥

ಇತ್ತ ಬಾ ಎಂಬರಿಲ್ಲ ಇರವ ಕೇಳುವರಿಲ್ಲ
ಹತ್ತಿರ ಕುಳ್ಳಿರಿಸಿ ಆದರಿಪರಿಲ್ಲ ॥
ತತ್ತರ ಪಡುತಿಹೆ ತಾವರೆಲೆಯ ನೀರಂತೆ
ಹತ್ತುನೂರು ನಾಮವ ಪೊತ್ತ ಶ್ರೀಹರಿಯೇ ॥ ೧ ॥

ಇಂದಿಗಶನವಿಲ್ಲ ನಿಂದಿರೆ ನೆರಳಿಲ್ಲ
ಒಂದೇ ಸುತ್ತಿಗೆ ತುಂಡು ಅರಿವೆಯಿಲ್ಲ ॥
ಬೆಂದೊಡಲಿಗೆ ಒಬ್ಬರಯ್ಯೋ ಎಂಬುವರಿಲ್ಲ
ಬಿಂದುಮಾತ್ರದ ಸುಖ ಕಾಣೆ ನಾ ಹರಿಯೇ ॥ ೨ ॥

ಎಲ್ಲಿದ್ದರೆನಗೊಂದು ನೆಲೆಯಿಲ್ಲ ಶ್ರೀಹರಿ
ಅಲ್ಲ ತಿಂದಿಲಿಯಂತೆ ಬಳಲುವೆನೊ ॥
ಫುಲ್ಲಲೋಚನ ಪೂರ್ಣ ದಯದಿ ಸಲಹೊ ಎನ್ನ
ಸಲ್ಲದ ನಾಣ್ಯವ ಮಾಡುವರೆ ಹರಿಯೇ ॥ ೩ ॥

ನಖ-ಶಿಖ ಪರ್ಯಂತ ನಾನಾ ಹಿಂಸೆಯ ಪಟ್ಟೆ
ಸುಖವೆಂಬುದನು ಕಾಣೆ ಸ್ವಪ್ನದಲು ॥
ಮುಖವರಿಯದ ರಾಜ್ಯಕ್ಕೆನ್ನನು ಎಳತಂದು
ಕಕಮುಕ ಮಾಡುವುದುಚಿತವೆ ಹರಿಯೇ ॥ ೪ ॥

ಇಷ್ಟು ದಿವಸ ನಿನ್ನ ನೆನೆಯದ ಕಾರಣ
ಕಷ್ಟಪಟ್ಟೆನು ಸ್ವಾಮಿ ಕಾಯೊ ಎನ್ನ ॥
ಮುಟ್ಟಿ ಭಜಿಸಲಿಲ್ಲ ಮುರವೈರಿ ನೀ ದಯ-
ವಿಟ್ಟು ಸಲಹೊ ಶ್ರೀಪುರಂದರವಿಠಲ ॥ ೫ ॥

---

೧) ನಮಗೆ ದೊರೆತ ಮೂರೂ ಪ್ರತಿಗಳಲ್ಲಿ ಇದು ಅನೇಕ ವಿಕೃತಿಗಳಿಂದ ಕೂಡಿದೆ.

## ೮೩

ರಾಗ — ಕಾಂಬೋದಿ ತಾಳ — ಝಂಪೆ

[೧]ಮಂದಮತಿಯೈ ನಾನು ಮದನಜನಕನು ನೀನು
ಕುಂದುಗಳನೆಣಿಸದಲೆ ದಯೆಮಾಡಿ ಸಲಹೋ ‖ ಪ ‖

ಪಾಪಕರ್ತನು ನಾನು ಪಾಪನಾಶಕ ನೀನು
ಕೋಪ-ಮದ-ಮತ್ಸರದಿ ಸುಳಿವೆ ನಾನು ‖
ತಾಪವನು ತರೆದು ನಿರ್ಭಯವ ಮಾಡುವೆ ನೀನು
ರೂಪಭ್ರಾಯಕೆ ಮರುಳುಗೊಂಬೆನ್ನೈ ನಾನು ‖ ೧ ‖

ಶರಣರಕ್ಷಕ ನೀನು ಪರಮಪಾತಕಿ ನಾನು
ದುರಿತಪರ್ವತವ ಪರಿಹರಿಪೆ ನೀನು ‖
ಮರುಳುಗೊಂಬನು ನಾನು ಅರಿತು ರಕ್ಷಿಪೆ ನೀನು
ಗರುವಮತಿಯೈ ನಾನಗವ್ಯ ನೀನು ‖ ೨ ‖

ಮಂದಭಾಗ್ಯನು ನಾನು ಇಂದಿರಾಪತಿ ನೀನು
ಹಿಂದುಮುಂದಿನ ಸುದ್ದಿ ಅರಿಯದವ ನಾನು ‖
ತಂದೆ ಶ್ರೀಪುರಂದರವಿಠಲರಾಯನೆ ದೇವ
ಎಂದೆಂದು ಭಕ್ತರನು ಸಲಹುವೆಯೋ ನೀನು ‖ ೩ ‖

## ೮೪

ರಾಗ—ಕಾನಡಾ ತಾಳ – ಅಟ

ಏಕೆ ನಿರ್ದಯನಾದೆ ಎಲೊ ದೇವನೇ
ಶ್ರೀಕಾಂತ ಎನ್ನ ಮೇಲೆ ಎಳ್ಳಷ್ಟು ದಯವಿಲ್ಲ ‖ ಪ ‖

೧) ಓ. ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

ಕಂಗೆಟ್ಟು ಕಂಬವನು ಒಡೆದು ಬಯಲಿಗೆ ಬಂದು
ಹಿಂಗದೆ ಪ್ರಹ್ಲಾದನಪ್ಪಿಕೊಂಡೆ ||
ಮಂಗಳಪದವಿತ್ತು ಮನ್ನಿಸಿದೆ ಅವ ನಿನಗೆ
ಬಂಗಾರವೆಷ್ಟು ಕೊಟ್ಟಿನು ಪೇಳೋ ಹರಿಯೇ || ೧ ||

ಸಿರಿಗೆ ಪೇಳದೆ ಮುನ್ನ ಸೆರಗ (೧)ಸಂವರಿಸದೆ
ಗರುಡನ ಮೇಲೆ ಗಮನವಾಗದೆ ||
ಭರದಿಂದ ನೀ ಬಂದು ಕರಿಯನುದ್ಧರಿಸಿದೆ
ಕರಿರಾಜನೇನು ಕೊಟ್ಟನು ಹೇಳು ಹರಿಯೇ || ೨ ||

ಅಜಮಿಳನು ಅಣ್ಣನೆ ವಿಭೀಷಣನು ತಮ್ಮನೆ
ನಿಜದಿ ರುಕ್ಮಾಂಗದ ಮೊಮ್ಮಗನೆ ||
ಭಜನೆಗೈವರೆ ಹಿತರೆ ನಾ ನಿನಗನ್ಯನೆ
ತ್ರಿಜಗಪತಿ ಸಲಹೆನ್ನ ಪುರಂದರವಿಠಲ || ೩ ||

**೮೫**

ರಾಗ—ಮುಖಾರಿ ತಾಳ—ಝಂಪೆ

ಏಕೆನ್ನೊಳಿಂತು ಕೃಪೆಯಿಲ್ಲ ಹರಿಯೆ
ಕಾಕುಮಾಡದೆ ಕಾಯೊ ಸಂಗವೊಳು ಬಳಲಿದೆನು || ಪಲ್ಲ ||

ಕಂದರ್ಪಬಾಧೆಯಿಂ ಮಾನಿನಿಯ ವಶನಾಗಿ
ಮಂದಮತಿಯಿಂದ ನಾ ಮರುಳಾದೆನೋ ||
ಸಂದಿತ್ತೆ ಯೌವನವು ಬುದ್ಧಿ ಬಂದಿತು ಈಗ
ಸಂದೇಹಪಡದೆ ನೀ ಕರುಣಿಸೈ ಎನ್ನ || ೧ ||

ಹೆಂಡತಿಯು ಕಡೆಗಣ್ಣಿನಿಂದ ನೋಡುವಳೀಗ
ಹಿಂಡುಮಕ್ಕಳು ಎನ್ನ (೨)ತಿನ್ನುತಿಹರು ||
ಮುಂಡಮೋಚಿದೆ ನಾನು ಇನ್ನಾರು ಗತಿಯೆನಗೆ
ಪುಂಡರೀಕಾಕ್ಷ ನೀ ಪಾಲಿಸೈ ಎನ್ನ || ೨ ||

---

೧) ಗ. ಸೇವರಿಸದೆ ೨) ಏ. ಮತ್ತು ಓ. ಕಾಡುತಿಹರು—ಎಂದಿದೆ.

ಅಟ್ಟಿಮೇಲೊಲೆಯುರಿಯುವಂತೆ ಹರಿ ಎನಗೀಗ
ಕೆಟ್ಟಮೇಲರಿವು ತಾ ಬಂದಿತಯ್ಯಾ ||
ನೆಟ್ಟನೇ ಪುರಂದರವಿಟ್ಠಲನೆ ಕೈಬಿಡದೆ
ದಿಟ್ಟಿಯಲಿ ನೋಡಿ ಪರಿಪಾಲಿಸೈ ಎನ್ನ || ೩ ||

## ೮೬

ರಾಗ—ಆರಭಿ ತಾಳ—ಆದಿ

೧ಮುರಹರ ನಗಧರ ನೀನೆ ಗತಿ
ಧರಣಿ-ಲಕ್ಷ್ಮೀಕಾಂತ ನೀನೆ ಗತಿ || ಪ ||

ಶಕಟಮರ್ದನ ಶರಣಾಗತವತ್ಸಲ
ಮಕರಕುಂಡಲಧರ ನೀನೆ ಗತಿ ||
ಅಕಳಂಕ ಚರಿತನೆ ಆದಿನಾರಾಯಣ
ರುಕುಮಿಣಿಪತಿ ಕೃಷ್ಣ ನೀನೆ ಗತಿ || ೧ ||

ಮನೆಮನೆಗಳ ಪೊಕ್ಕು ಕೆನೆಹಾಲು ಬೆಣ್ಣೆಯ
ದಿನದಿನ ಮೆದ್ದ ಹರಿ ನೀನೆ ಗತಿ ||
ಅನುದಿನ ಭಕುತರ ಬಿಡದೆ ಕಾಯುವ-
ಘನಮಹಿಮನೆ ಕೃಷ್ಣ ನೀನೆ ಗತಿ || ೨ ||

ಪನ್ನಗಶಯನ ಸುಪರ್ಣಗಮನನೇ
ಪೂರ್ಣಚರಿತ ಹರಿ ನೀನೆ ಗತಿ ||
ಹೊನ್ನ ಹೊಳೆಯಲಿಹ ಪುರಂದರವಿಠಲ
ಚೆನ್ನ ಲಕ್ಷ್ಮೀಕಾಂತ ನೀನೆ ಗತಿ || ೩ ||

೧) ಓ. ಪ್ರತಿಯಲ್ಲಿ ಮಾತ್ರ ದೊರಕುತ್ತದೆ.

## ೮೭

ರಾಗ—ಮಧ್ಯಮಾವತಿ ತಾಳ—ಅಟ

ದುರಿತಗಜ ಪಂಚಾನನ–ನರ-
ಹರಿಯೆ ದೇವರ ದೇವ [೧]ಕಾಯಬೇಕೆನ್ನ || ಪ

ಹೆತ್ತ ಮಕ್ಕಳು ಮರುಳಾದರೆ ತಾಯ್ತಂದೆ
ಎತ್ತದೆ [೨]ಇಳಿಸದೆ ಬಿಡುವರೆ ಗೋವಿಂದ || ೧

ಅರಸು ಮುಟ್ಟಲು ದಾಸಿ ರಂಭೆಯು ದೇವ
ಪರಸು ಮುಟ್ಟಲು ಲೋಹ ಹೊನ್ನು ಗೋವಿಂದ || ೨

ಹೆಸರುಳ್ಳ ನದಿಗಳನೊಳಗೊಂಬ ಜಲಧಿಯು
ಬಿಸುಡುವುದೆ ಕಾಲು ಹೊಳೆಗಳ ಗೋವಿಂದ || ೩

ಮುನ್ನಮಾಡಿದ ಕರ್ಮ ಬೆನ್ನಟ್ಟಿ ಬಂದರೆ
ನಿನ್ನನು ಮೊರೆಹೋಗಲೇಕೆ ಗೋವಿಂದ || ೪

ಸ್ಮರಣೆ ಮಾತ್ರದಿ ಅಜಮಿಳಗೆ ಮುಕ್ತಿಯನಿತ್ತೆ
ಪರಸಿ ಪುರಂದರವಿಠಲ ಗೋವಿಂದ

## ೮೮

ರಾಗ—ಮಧ್ಯಮಾವತಿ ತಾಳ—ಅಟ

ದಯಮಾಡೋ ದಯಮಾಡೋ ದಯಮಾಡೋ ರಂಗಾ || ಪ
ದಯಮಾಡೋ ನಾ ನಿನ್ನ ದಾಸನೆಂತೆಂದು || ಅ ಪ

ಹಲವು ಕಾಲವು ನಿನ್ನ ಹಂಬಲವೆನಗೆ |
ಒಲಿದು [೩]ಪಾಲಿಸಬೇಕು ವಾರಿಜನಾಭ || ೧

---

೧) ಆ–ಓ. ಗಿರಿಯಗೋವಿಂದ. ೨) ಓ. ನೆಲಕೆ
೩) ಊ ಮತ್ತು ಓ. ರಕ್ಷಿಸಬೇಕು.

ಇಹಪರದಲಿ ನೀನೆ ಇಂದಿರೆರಮಣ
ಭಯವೇಕೋ ನೀನಿರಲು ಭಕ್ತರಭಿಮಾನಿ ॥ ೨ ॥

ಕರಿರಾಜವರದನೆ [1]ಕಂದರ್ಪನಯ್ಯ
ಪುರಂದರವಿಠಲ ಸದ್ಗುಣ[2] ಸಾರ್ವಭೌಮ ॥ ೩ ॥

## ೮೯

ರಾಗ—ಮುಖಾರಿ ತಾಳ—ಝಂಪೆ

ಆರಿದ್ದರೇನಯ್ಯ ನೀನಲ್ಲದೆನಗಿಲ್ಲ[3]
ಕಾರುಣ್ಯನಿಧಿ ಹರಿಯೆ ಕೈಯ ಬಿಡಬೇಡ ॥ ಪಲ್ಲ ॥

ದುರುಳ ಕೌರವನಂದು ದ್ರುಪದಜೆಯ ಸೀರೆಯನು
ಕರದಿಂದ ಸೆಳೆಯುತಿರೆ ಪತಿಗಳೆಲ್ಲ ॥
ಗರಹೊಯ್ದರಂತಿದ್ದರಲ್ಲದೇ ನರಹರಿಯೆ
ಕರುಣದಿಂ ನೀನಲ್ಲದಾರು ಕಾಯ್ದವರು ॥ ೧ ॥

ಅಂದು ನೆಗಳಿನ ಬಾಧೆಯಿಂದ [4]ಗಜರಾಜನನು
ತಂದೆ ನೀ ವೈಕುಂಠದಿಂದ ಬಂದು ॥
ಇಂದಿರೇಶನೆ ಚಕ್ರದಿಂದ [5]ನೆಗಳಿನ ಬಾಯ
ಸಂಧಿಯನು ಸೀಳಿ [6]ಪೊರೆದೆಯೆಲೊ, ನರಹರಿಯೇ ॥ ೨ ॥

ಅಜಮಿಳನು ಕುಲಗೆಟ್ಟು ಕಾಲದೂತರು ಬರಲು
ನಿಜಸುತನ ಕರೆಯಲವನತಿವೇಗದಿ ॥
ತ್ರಿಜಗದೊಡೆಯನೆ ಪುರಂದರವಿಠಲ ಕರುಣದಲಿ
ನಿಜದೂತರನು ಕಳುಹಿ ಕಾಯ್ದೆ ಗಡ ಹರಿಯೇ ॥ ೩ ॥

---

೧) ಎ. ಮತ್ತು ಏ ಕಂದರ್ಪ ಪಿತನೆ. ಓ–ಕಂದರ್ಪಜನಕ ೨) ಎ. ಮತ್ತು ಓ. ಹರಿ
೩) ಎ. ಪ್ರತಿ "ಎನಗಿಲ್ಲ" ಎಂಬಮಾತು ಇಲ್ಲ. ೪) ಎ. ಗಜಕೂಗಲು
೫) ಅ. "ನಕ್ರನ" ೬) ಎ. "ಕೃಪೆಯಿಂದ ಸಲಹಿದೆಯೋ"

೯೦

ರಾಗ—ಕಲ್ಯಾಣಿ ತಾಳ—ಅಟ

*ಇನ್ನೂ ದಯಬಾರದೇ -ದಾಸನ ಮೇಲೆ–ಇನ್ನೂ ದಯಬಾರದೇ ||ಪ||

ಮುನ್ನ ಮಾಡಿದದುಷ್ಕರ್ಮಗಳೆಲ್ಲವ
ಮನ್ನಿಸಿ ಕಳೆವುದು ಇಂದಿರೆಯ ರಮಣಾ ||ಅ. ಪ||

ನಾನಾ ಜನ್ಮಗಳಲ್ಲಿ ನಾನಾ ಜಾತಿಗಳಲ್ಲಿ
ನಾನಾ ಯೋನಿಗಳಲ್ಲಿ ಜನಿಸಿ ಜನಿಸಿ ದೇವಾ ||
ನಾನು ನನ್ನದು ಎಂದು ನರಕದೊಳಗೆ ಬಿದ್ದು
ನೀನೇ ಗತಿಯೆಂದು ಸ್ಮರಣೆಮಾಡಿದ ಮೇಲೆ ||೧||

ಕಾಮಾದಿಷಡುವರ್ಗ ಗಾಢಾಂಧಕಾರದಿ
ಪಾಮರನಾಗಿ ಇದ್ದಂಥ ಪಾತಕನ ||
೧ರಮಾಮನೋಹರ ಹರಿ ನೀನೇ ಗತಿಯೆಂದು
ನಾಮಾಮೃತವನು ಪಾನಮಾಡಿದ ಮೇಲೆ ||೨||

೨ಏನ ಓದಿದರೇನು ಏನ ಕೇಳಿದರೇನು
ಈ ನಾಮಸ್ಮರಣೆಗೆ ಸರಿಬಾರದು ||
ಜ್ಞಾನಹೀನನ ಮೇಲೆ ದಯವಿಟ್ಟು ಪಾಲಿಸು
ದೀನದಯಾಕರ ಪುರಂದರವಿಠಲನೆ ||೩||

---

* ಏ. ಖ ಪ್ರತಿಗಳಲ್ಲಿಯ ಪಾಠವನ್ನು ಇಲ್ಲಿ ಸ್ವೀಕರಿಸಲಾಗಿದೆ

೧) ಇ. ಶ್ರೀಮನೋಹರ

೨) ಈ– ಏ– ಓ. ಪ್ರತಿಗಳಲ್ಲಿ ಕಡೆಯ ನುಡಿ ತುಂಬಾ ವಿಕಾರಗೊಂಡಿದೆ.

## ೯೧

ರಾಗ—ಮೋಹನ ತಾಳ—ಅಟ

ನಾನೇನ ಮಾಡಿದೆನೊ—ರಂಗಯ್ಯ ರಂಗ
ನೀನೆನ್ನ ಕಾಯಬೇಕೋ || ಪ ||

[೧]ಮಾನಾಭಿಮಾನವು ನಿನ್ನದು ಎನಗೇನು
ದೀನರಕ್ಷಕ ತಿರುಪತಿ ವೆಂಕಟರಮಣ || ಅ, ಪ ||

ರಕ್ಕಸತನುಜನಲ್ಲೇ-ಪ್ರಹ್ಲಾದನು
ಚಿಕ್ಕ ಪ್ರಾಯದ ಧ್ರುವನು ||
[೨]ಸೊಕ್ಕಿನ ಪಾಪಮಾಡಿದಜಾಮಿಳನು ನಿನ್ನ
ಅಕ್ಕನ ಮಗನು ಏನೋ-ರಂಗಯ್ಯ || ೧ ||

ಕರಿರಾಜ ಕರಿಸಿದನೇ—ದ್ರೌಪದಿದೇವಿ
ಬರೆದೋಲೆ ಕಳುಹಿದಳೇ ||
ಕರುಣದಿಂದಲಿ ಋಷಿಪತ್ನಿಯ ಶಾಪವ
ಪರಿಹರಿಸಿದೆಯಲ್ಲವೋ-ರಂಗಯ್ಯ || ೨ ||

ಒಪ್ಪಿಡಿಯವಲಕ್ಕಿಯ—ನಿನಗೆ ತಂದು
ಒಪ್ಪಿಸಿದವಗೊಲಿದೆ ||
ಒಪ್ಪವೆ ನಿನಗೆ ಶ್ರೀಪುರಂದರವಿಠಲಪ-
ರಪ್ಪಂತೆ ಎನ್ನ ಕಾಯೋ-ರಂಗಯ್ಯ || ೩ ||

೧) ಪಾ. ಭೇ. ದಾನವಾಂತಕ ದೀನರಕ್ಷಕ ಭಾನುಕೋಟಿ ಪ್ರಕಾಶ ತೇಜಾ ||ಅ. ಪ||
೨) ಪಾ. ಭೇ. ಉಕ್ಕಿಬರುವ ಕರ್ಮ.

೯೨

ರಾಗ--ಆನಂದಭೈರವಿ ತಾಳ—ಅಟ

ನೀನೇ ದಯಾಳು ನಿರ್ಮಲಚಿತ್ತಗೋವಿಂದ
ನಿಗಮಗೋಚರ ಮುಕುಂದ ‖ ಪ ‖

ಜ್ಞಾನಿಗಳರಸು ನೀನಲ್ಲದೆ [೧]ಜಗಕಿನ್ನು ।
ಮಾನದಿಂದಲಿ ಕಾವ ದೊರೆಗಳ ನಾ ಕಾಣೆ ‖ ಅ ಪ ‖

ಬಗೆಬಗೆಯಲಿ ನಿನ್ನ ಸ್ತುತಿಪೆನೊ ನಗಧರ
ಖಗಪತಿವಾಹನನೆ ‖
ಮಗುವಿನ [೨]ಮಾತೆಂದು ನಗುತ ಕೇಳುತ [೩]ನೀನು ।
ಬೇಗದಿಂದಲಿ ಕಾಯೋ ಸಾಗರಶಯನನೆ ‖ ೧ ‖

ದಾನವಾಂತಕ ದೀನಜನಮಂದಾರನೆ
ಧ್ಯಾನಿಪರ ಮನದೊಳು ಸಂಚರನೆ ‖
ಮೌನನಾದೆನು ನಿನ್ನ ಧ್ಯಾನಾನಂದದಿ ಈಗ
ಸಾನು ರಾಗದಿಕಾಯೊ ಸನಕಾದಿವಂದ್ಯನೆ ‖ ೨ ‖

ಮಂದರೋದ್ಧರ ಅರವಿಂದಲೋಚನ ನಿನ್ನ ।
ಕಂದನೆಂದೆನಿಸೊ ಎನ್ನ ‖
[೪]ಸಂದೇಹವೇತಕೆ ಸ್ವಾಮಿ ಮುಕುಂದನೆ
ಬಂದೆನ್ನ ಕಾಯೊ ಶ್ರೀಪುರಂದರವಿಠಲನೆ ‖ ೩ ‖

---

೧) ಅ. ಎನಗಿನ್ನು  ೨) ಇ. ಮಾತಿಗೆ ಏ. ಮಾತಿದು
೩) ಎ–ಓ. ಬಂದು ೪) ಇ ಮತ್ತು ಊ ಪ್ರತಿಗಳಲ್ಲಿ 'ಸಂದೇಹ ಬೇಡವೊ' ಎಂದಿದೆ.

## ೯೩

ರಾಗ—ಆನಂದಭೈರವಿ ತಾಳ – ಆದಿ

ಶ್ರೀನಿವಾಸಾ ನೀನೇ ಪಾಲಿಸೋ- ಶ್ರಿತಜನಪಾಲಾ
ಗಾನಲೋಲ ಶ್ರೀಮುಕುಂದನೇ ॥ ಪಲ್ಲ ॥

ಧ್ಯಾನಮಾಳ್ಪ ೧ಸಜ್ಜನರ ಮಾನದಿಂ ಪರಿಪಾಲಿಸುವ
ವೇಣುಗೋಪಾಲಾ ಗೋವಿಂದಾ ವೇದವೇದ್ಯ
ನಿತ್ಯಾನಂದಾ ॥ ಅ ॥ಪ ॥

ಎಂದಿಗೆ ನಿನ್ನ ಪದಾಬ್ಜವ—ಪೊಂದುವ ಸುಖ
ಎಂದಿಗೆ ಲಭ್ಯವೋ ಮಾಧವಾ ॥
ಅಂಧಕಾರಣ್ಯದಲ್ಲಿ ನೊಂದು ತತ್ತಳಿಸುತಿಹ
ಅಂದದಿಂದ ೨ಈ ಭವದಿ ೩ನಿಂದು ನೊಂದೆನೋ ಮುಕುಂದ ॥ ೧ ॥

ಎಷ್ಟುದಿನ ಕಷ್ಟಪಡುವುದೋ–ಯಶೋದೆಯ ಕಂದ
ದೃಷ್ಟಿಯಿಂದ ನೋಡಲಾಗದೆ ॥
ಮುಟ್ಟಿ ಭಜಿಸುವನಲ್ಲ ಕೆಟ್ಟ ನರಜನ್ಮದವನು
ದುಷ್ಟಕಾರ್ಯ ೪ಮಾಡಿದರು ಇಷ್ಟನಾಗಿ ಕೈಯ ಪಿಡಿದು ॥ ೨ ॥

೫ಅನುದಿನ ಅನೇಕ ರೋಗಗಳ–ಅನುಭವಿಸಿದೆನೊ
ಘನಮಹಿಮ ನೀನೆ ಬಲ್ಲೆಯಾ ॥
ತನುವಿನಲ್ಲಿ ಬಲವಿಲ್ಲ ನೆನೆದ ಮಾತ್ರ ಸಲಹುವ
೬ಹನುಮದೀಶ ಪುರಂದರವಿಟ್ಠಲ ನೀ ಎನಗೆ ಒಲಿದು ॥ ೩ ॥

---

೧) ಅ. ಇ. ಗ–ಛ. ಸುಜನರ ಎಂದಿದೆ. ೨) ಗ. ಈ–ಭವಾಬ್ಧಿಯೊಳ್
೩) ಬಂದು (ಬಹುಮತ) ೪) ಮಾಡಿದಾಗ್ಯೂ ಎಂದು ಬಹುಮತ
೫) ಆ–ಛ ಪ್ರತಿಗಳಲ್ಲಿ : ಅನುದಿನ ಅನ್ಯಕಾರ್ಯವ। ಅನುಸರಿಸಿದೆನಯ್ಯ.
೬) ಅ. ಪ್ರತಿಯಲ್ಲಿ 'ಅನುಮತೀಶ' ಎಂದಿದೆ.

## ೯೪

ರಾಗ—ನಾದನಾಮಕ್ರಿಯಾ ತಾಳ—ಅಟ

[೧]ನಾನಿನಗೇನ ಬೇಡುವುದಿಲ್ಲ–ಎನ್ನ
ಹೃದಯಕಮಲದೊಳು [೨]ನೆಲಸಿರು ಹರಿಯೆ ॥ ಪ

ಶಿರ ನಿನ್ನ ಚರಣಕೆರಗಲಿ—ಚಕ್ಷು
ಎರಕದಿಂದಲಿ ನಿನ್ನ ನೋಡಲಿ ಹರಿಯೆ ॥
ನಿರುಮಾಲ್ಯ ನಾಸ ಘ್ರಾಣಿಸಲಿ—ಎನ್ನ
[೩]ಕರಣ ಗೀತಂಗಳ ಕೇಳಲಿ ಹರಿಯೆ ॥ ೧

ನಾಲಗೆ ನಿನ್ನ ಕೊಂಡಾಡಲಿ—ಎನ್ನ
ತೋಳು ಕರಂಗಳ ಮುಗಿಯಲಿ ಹರಿಯೆ ॥
ಕಾಲು ತೀರ್ಥಯಾತ್ರೆಗೆ ಪೋಗಲಿ—ಮನ
ಓಲೈಸಿ ನಿನ್ನನು ಸ್ಮರಿಸಲಿ ಹರಿಯೆ ॥ ೨ ॥

ಚಿತ್ತ ನಿನ್ನೊಳು ಮುಳುಗಾಡಲಿ—ನಿನ್ನ
ಭಕ್ತಜನರ ಸಂಗ ದೊರಕಲಿ ಹರಿಯೆ ॥
ತತ್ತ್ವಯೋಗಾಭ್ಯಾಸಕ್ಕಾಗಲಿ—ಉಕ್ತಿ
*ಸತ್ಯಮೂರುತಿ ನಮ್ಮ ಪುರಂದರವಿಠಲ ॥ ೩ ॥

---

೧) ಚ–ನಾನಿನ್ನೊಳನ್ಯ ಬೇಡುವುದಿಲ್ಲ. ೨) ಆ. ಬಂದಿರು; ಓ. ನಿಂದಿರು.
೩) ಕರ್ಣ. (ಬಹುಮತ)
* ವಿ. ಸೂ.— ಚ. ಪ್ರತಿಯಲ್ಲಿ ಇದು ಮೂಲಸ್ವರೂಪದಲ್ಲಿದೆ.

## ೯೫

ರಾಗ—ಕಲ್ಯಾಣಿ ತಾಳ—ಅಟ

ದಾಸನ ಮಾಡಿಕೊ ಎನ್ನ—ಇಷ್ಟ-
ಗಾಸಿ ಮಾಡುವುದೇಕೆ [1]ದಯದಿ ಸಂಪನ್ನ ‖ ಪ ‖

ದುರುಳಬುದ್ಧಿಗಳೆಲ್ಲ ಬಿಡಿಸೋ—ನಿನ್ನ
ಕರುಣಕವಚವೆನ್ನ ಹರಣಕ್ಕೆ ತೊಡಿಸೋ ‖
ಚರಣದ ಸೇವೆಯ ಕೊಡಿಸೋ—ಅಭಯ-
ಕರದ ಮೇಲಿನ ಕುಸುಮ ಶಿರದ ಮೇಲಿರಿಸೋ ‖ ೧ ‖

ದೃಢಭಕ್ತಿಯಿಂದ ನಾ ಬೇಡಿ—ನಿನ್ನ
[2]ಅಡಿಯೊಳೆರಗುವೆನಯ್ಯ ಅನುದಿನ ಪಾಡಿ ‖
ಕಡೆಗಣ್ಣೊಳೇಕೆನ್ನ ನೋಡಿ—ಬಿಡುವೆ
ಕೊಡು ನಿನ್ನ [3]ಪರಭಕ್ತಿ ಮನಮುಡಿ ಮಾಡಿ ‖ ೨ ‖

ಮೊರೆಹೊಕ್ಕವರ ಕಾವ ಬಿರುದು—ನೀನು
ಕರುಣದಿ ರಕ್ಷಣೆಮಾಡೆನ್ನ ಪೊರೆದು ‖
ದುರಿತರಾಶಿಗಳೆಲ್ಲ ತರೆದು—ಒಡೆಯ
ಪುರಂದರವಿಠಲನೆ [4]ಹರುಷದಿ ಕರೆದು ‖ ೩ ‖

## ೯೬ (?)

ರಾಗ—ಕಲ್ಯಾಣಿ ತಾಳ—ಅಟ
(ನಾದನಾಮಕ್ರಿಯೆ)

*ದಾಸನ ಮಾಡಿಕೊ ಎನ್ನ—ದಿವ್ಯ
ಸಾಸಿರನಾಮದ ವೆಂಕಟಭೂಪರನ್ನ ‖ ಪ ‖

---

೧) ಎ. ಸುಗುಣ ೨) ಓ. ಅಡಿಗೆರಗುವೆನಯ್ಯ
೩) ಎ. ಓ. ಧ್ಯಾನವ ೪) ಏ. ಕರುಣದಿ
* ಅ (೩). ಒಂದರಲ್ಲಿಯೆ ಇದೆ.

ಭವಭಯ ದುಃಖವ ಬಿಡಿಸೋ—ನಿನ್ನ
ಕರುಣವಿದ್ಯೆಯನೆನ್ನ ಅಂಗಕ್ಕೆ ತೊಡಿಸೋ ||
ಆವಾಗಲು ನಿನನಾಮ ನುಡಿಸೋ—ನಿನ್ನ
ಚರಣಕಮಲದಲ್ಲಿ ಆರಡಿಯೆನಿಸೋ || ೧

ಗಂಗೆಯ ಪಡೆದಂಥ ಪಾದ–ವರ
ಶೃಂಗಾರಲಕ್ಷ್ಮಿ ಸ್ಮರಿಸುವಂಥ ಪಾದ ||
ಬಂಗಾರರಂಜಿತ ಪಾದ–ಹರಿ
ಮಂಗಳ ಸದ್ಗತಿಗೆ ಚಂದಿರನಾದ || ೨

ಸೆರಗೊಡ್ಡಿ ನಾ ಬೇಡಿಕೊಂಡೆ—ನಿನ್ನ
ಹರಿವಾಣದೆಂಜಲ ನಾನು ಉಂಡೇನೆಂದೆ ||
ಬಿರುದು ನಿನ್ನದು ಹುಸಿಮಾಡದೆ—ನಮ್ಮ
ಪುರಂದರವಿಟ್ಠಲ ದಯಮಾಡೋ ತಂದೆ || ೩

## ೯೭

ರಾಗ—ಕಲ್ಯಾಣಿ ತಾಳ—ಝಂಪೆ

[೧]ನಿನ್ನನಾಶ್ರಯಿಸುವೆ—ನಿಗಮಗೋಚರ ನಿತ್ಯ
ಬೆನ್ನ ಬಿಡದಲೆ ಕಾಯೊ ಮನದಿಷ್ಟವೀಯೋ || ಪ

ಕುಂದಣದ ಆಶ್ರಯವು ನವರತ್ನಗಳಿಗೆಲ್ಲ
ಚಂದಿರನ ಆಶ್ರಯ ಚಕೋರಗಳಿಗೆ ||
ಕಂದರ್ಪನಾಶ್ರಯ ವಸಂತಕಾಲಕ್ಕೆ ಗೋ-
ವಿಂದ ನಿನ್ನಾಶ್ರಯವು ಮರಣಕಾಲದೊಳು || ೧ ||

೧) ಅಚ್ಚಾದ ಪ್ರತಿಗಳಲ್ಲಿ ಮಾತ್ರ ಇದೆ.

ಹಣ್ಣುಳ್ಳ ಮರಗಳು ಪಕ್ಷಿಗಳಿಗಾಶ್ರಯವು
ಪುಣ್ಯನದಿಗಳು ಋಷಿಗಳಿಂಗೆ ಆಶ್ರಯವು ||
ಕಣ್ಣಿಲ್ಲದಾತನಿಗೆ ಕೈಗೋಲಿನಾಶ್ರಯವು
ಎನ್ನಿಷ್ಟ ಪಡೆಯುವರೆ ನಿನ್ನ ಆಶ್ರಯವು || ೨ ||

ಪತಿವ್ರತಾವನಿತೆಗೆ ಪತಿಯೊಂದೆ ಆಶ್ರಯವು
ಯತಿಗಳಿಗನುಶ್ರುತದಿ ಪ್ರಣವದಾಶ್ರಯವು ||
ಮತಿವಂತನಿಗೆ ಹರಿಸ್ಮೃತಿಗಳೇ ಆಶ್ರಯವು
ಹಿತವಹುದು ಪುರಂದರವಿಠಲನಾಶ್ರಯವು || ೩ ||

## ೯೮

ರಾಗ—ಹುಸೇನಿ ತಾಳ—ಆದಿ

೧ಎನ್ನ ರಕ್ಷಿಸೊ ನೀನು-ದೇವರ ದೇವ || ಪ ||
ಎನ್ನ ರಕ್ಷಿಸೊ ನೀನು ಯಾದವ ಕುಲಮಣಿ
ಮುನ್ನ ದ್ರೌಪದಿಯಭಿಮಾನ ಕಾಯ್ದ ಕೃಷ್ಣ || ಅ.ಪ ||

ಬಾಲನ ಮೊರೆಯನು ಕೇಳಿ ಕೃಪೆಯಿಂದ
ಪಾಲಿಸಿದೆಯೊ ನರಸಿಂಹರೂಪದಿಂದ || ೧ ||

ಪಾಷಾಣ ಚರಣದಿ ಯೋಷಿದ್ರೂಪವ ಗೈದೆ
ದೋಷಸಂಹಾರ ನಿರ್ದೋಷಗುಣಪೂರ್ಣನೆ || ೨ ||

ಜನಕಜಾಂಬುಧಿಚಂದ್ರ ಘನಶುಭಗುಣಸಾಂದ್ರ
ಸನಕಾದಿ ಮುನಿವಂದ್ಯ ಪುರಂದರವಿಠಲ || ೩ ||

೧) ಓ. ಶ್ರೀಯುತನ್ನು ಬಿಟ್ಟರೆ ಬೇರೆಲ್ಲಿಯೂ ಸಿಕ್ಕುವುದಿಲ್ಲ.

## ೯೯

ರಾಗ—ಆರಭಿ ತಾಳ—ರೂಪಕ

*ವೆಂಕಟೇಶ ಬೇಡಿಕೊಂಬೆ ಕೃಪೆಯ ಪಾಲಿಸೋ—ಬ್ರಹ್ಮ-
ಶಂಕರಾದಿವಂದ್ಯ ಎನಗೆ ಮುಕ್ತಿ ತೋರಿಸೋ ‖ ಪಲ್ಲ

ಹುಟ್ಟು ಮೊದಲಾದಂಥ ಕಷ್ಟ ಬಿಡಿಸೋ—ನಿನ್ನ
ಪಟ್ಟದ ರಾಣಿಗೆ ಹೇಳಿ ಪದವಿ ಕೊಡಿಸೋ ‖
ಇಷ್ಟಭಕ್ತಜನರೊಳು ಎನ್ನ ಸೇರಿಸೋ—ಈ
ಸೃಷ್ಟಿಯೊಳು ನಿನ್ನ ದಾಸ-ದಾಸನೆನಿಸೋ ‖ ೧

ಅಟ್ಟುಉಂಡು ಮಿಕ್ಕಿದ್ದೆಲ್ಲ ಎನಗೆ ಹಾಕಿಸೊ—ಪೊಂ-
ಬಟ್ಟಲೊಳಗಿನ ಹಾಲು ಎನಗೆ ಹೊಯ್ಯಿಸೊ ‖
ಗಟ್ಟಿಸಕ್ಕರೆ ತುಪ್ಪ ರೊಟ್ಟಿಗಳನು ಉಣ್ಣಿಸೋ—ಮುಂದೆ-
ಹುಟ್ಟಿ ಬಾಹ ಜನ್ಮಂಗಳ ಎನಗೆ ಬಿಡಿಸೋ ‖ ೨

ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೋ—ಉ-
ತ್ಕೃಷ್ಟ ಬಂಗಾರದೊಳು ಎನ್ನ ಕೂಡಿಸೊ ‖
ಬೊಟ್ಟಿಗೆ ಉಂಗುರವ ಮಾಡಿ ಎನ್ನ ಸೇರಿಸೋ—ಎನಗೆ
ದಿಟ್ಟ ಪುರಂದರವಿಠಲನೆಂಬುದನೆ ಪಾಲಿಸೋ ‖ ೩

## ೧೦೦

ರಾಗ—ಕಾಫಿ ತಾಳ—ಏಕ

[1]ವೆಂಕಟಾಚಲನಿಲಯಂ ವೈಕುಂಠಪುರವಾಸಂ ‖ ಪ
ಪಂಕಜನೇತ್ರಂ ಪರಮಪವಿತ್ರಂ
ಶಂಖಚಕ್ರಧರ ಚಿನ್ಮಯರೂಪಂ ‖ ಅ.ಪ

---

* ಅನೇಕ ಹಸ್ತಪ್ರತಿಗಳಲ್ಲಿ ಭಿನ್ನ ಭಿನ್ನ ಪಾಠಾಂತರಗಳಿವೆ. ಉಚಿತಪಾಠಗಳನ್ನೇ ಇಲ್ಲಿ ಆಯ್ದುಕೊಳ್ಳಲಾಗಿದೆ.

೧) ೧೭೫೨ ರ ತಾಳೆಗರಿಯಲ್ಲಿಯಂತೆ ಇದನ್ನು ಬರೆದಿದೆ.

ಅಂಬುಜಭವವಿನುತಂ ಅಗಣಿತಗುಣನಾಮಂ
ತುಂಬುರುನಾರದಗಾನವಿನೋದಂ
ಅಂಬುಧಿಶಯನಂ ಅಗಣಿತನಾಮಂ ॥ ೧ ॥

ಪಾಹಿ ಪಾಂಡವಪಾಲಂ ಕೌರವಹರಣಂ
ಬಾಹುಪರಾಕ್ರಮ ಫಣಿಪತಿಶಯನಂ
ಅಹಲ್ಯಾಶಾಪವಿಮೋಚನಚರಣಂ ॥ ೨ ॥

ಸಕಲವೇದವಿಚಾರಂ ಸರ್ವಜೀವಿನೇತಾರಂ
ಮಕರಕುಂಡಲಧರ ಮದನಗೋಪಾಲಂ
ಭಕ್ತಪೋಷಣ ಪುರಂದರವಿಠಲಂ ॥ ೩ ॥

## ೧೦೧

ರಾಗ—ರೇಗುಪ್ತಿ ತಾಳ—ಆಟ

ಇನ್ನು ಪುಟ್ಟಿಸದಿರಯ್ಯ, ಪುಟ್ಟಿಸಿದಕೆ ಪಾಲಿಸಯ್ಯ
ಎನ್ನ ದಯದಿ ಪಾಲಿಸಯ್ಯ ॥ ಪ ॥

ನಿನ್ನ ಚರಣಾಂಬುಜವ ನಂಬಿದೆನೊ [1]ಶ್ರೀಹರಿಯೆ
ಬೆನ್ನಬಿದ್ದೆನು ಭವಬಂಧನವ ಬಿಡಿಸಯ್ಯ ॥ ಅ.ಪ ॥

ಅಮರೇಂದ್ರವಂದಿತನೆ, ಅನಂತಮಹಿಮನೆ
ಕಮಲಸಖಾನಂತಕರನೆ ॥
[2]ಕಮಲಾಯತಾಂಬಕನೆ [3]ಕಾಮಿತದಾಯಕನೆ
ವಿಮಲಗುಣ ವಿಭೀಷಣಗೆ ಒಲಿದ ದಯದಿಂದಲೆನ್ನ ॥ ೧ ॥

೧) ರಘುಪತಿಯೇ (ಬಹುಮತ)

೨) ಅ-ಶ್ರೀ. ಕಮಲಾಲಯಸುಪಿತನೆ. ಘ. ಕಮಲಾನನಸೋದರನೆ

೩) ಶ್ರೀ. ಕಾಮಿತವಿರಹಿತನೆ

ಅಜಮಿಳ ಅಂಬರೀಷ ಅಕ್ರೂರ ವಿದುರಗೆ
ಗಜರಾಜ ಗಿರಿಜೇಶಗೆ ||
ನಿಜಭಕ್ತ ಪ್ರಹ್ಲಾದ ಅಜ ಧ್ರುವ ಅರ್ಜುನಗೆ
ದ್ವಿಜ ಸುತರುಕ್ಮಾಂಗದರಿಗೊಲಿದ ದಯದಿಂದಲೆನ್ನ || ೨

ಅವರಂತೆ ನಾನಲ್ಲ ಅವರ ದಾಸರ ದಾಸ
ಸವರಿ ಬಿಸುಟೆನ್ನ ದೋಷ ||
ಪವಿತ್ರನ್ನ ಮಾಡಯ್ಯ ಪುಂಡಲೀಕವರದನೆ
ಅವಸರಕೆ ದ್ರೌಪದಿಗೆ ಒಲಿದ ದಯದಿಂದಲೆನ್ನ || ೩

ಎಂದೆಂದು ನಿನ್ನ ಪಾದವೆನಗೆ ನೆಲೆಯಾಯಿತು
ಎಂದೆಂದು ನಿನ್ನ ನಾಮಭಜನೆ ||
ಎಂದೆಂದು ನೀಯೆನ್ನ ಬಿಡದೆ ಪಾಲಿಸೊ ಸ್ವಾಮಿ
ಅಂದು ಅಂಜನೆಕಂದನಿಗೆ ಒಲಿದ ದಯದಿಂದಲೆನ್ನ || ೪

ಅಂತರಂಗದುಬ್ಬಸವ ಆಯ್ಯೋ ನಿನಗುಸಿರುವೆನು
ಚಿಂತೆಗಳ ಪರಿಹರಿಸೊ ||
ಸಂತತ ಪಾಲಿಸೊ ಪುರಂದರವಿಠಲನೆ
ಚಿಂತಿಪ ಗೌತಮನ ಸತಿಗೆ ಒಲಿದ ದಯದಿಂದಲೆನ್ನ || ೫ ||

## ೧೦೨

ರಾಗ—ಕಮಾಚು ತಾಳ—ಆದಿ

*ಹೀಗೆ ಮಾಡಬೇಕೋ—ವಿಠಲ ತಂದೆ
ಹೀಗೆ ಮಾಡಬೇಕೋ || ಪ ||

ಹೇಗಾದರು ದುರಿತಗಳೆನ್ನ ಕಾಡದ
ಹಾಗೆ ಮಾಡಬೇಕೋ || ಅ.ಪ ||

---

* ಓ. ಪ್ರತಿಯಲ್ಲಿ ಈ ಹಾಡು ತೀರ ವಿಕೃತಿಪಡೆದು ಪ್ರಕಟವಾಗಿದೆ.

ಹಿಂದಿನ ಸುಕೃತಗಳ—ಫಲದಿಂದ—ಬಂದೀ ನರಜನುಮ
ಮುಂದೆ ನಾ ತಾಯ ಉದರದಲಿ ಜನಿಸದ
ಹಾಗೆ ಮಾಡಬೇಕೋ—ವಿಠಲ ತಂದೆ ॥ ೧ ॥

ದಾನಿ ನಿನ್ನನು ಬೇಡುವೆ – ದುಷ್ಕರ್ಮದ—ಹಾನಿಯೊಂದೇ ಸಾಲದೆ
ಹೀನಮಾನವರಿಗೆ ನಾನು ಕೈಯಾನದ
ಹಾಗೆ ಮಾಡಬೇಕೋ—ವಿಠಲ ತಂದೆ ॥ ೨ ॥

ಕರುಣಿ ಪುರಂದರ—ವಿಠಲ ತಂದೆ—ನೆರೆನಂಬಿದೆ ನಿನ್ನ
ಶರಣರಕ್ಷಕನೆಂಬ ಬಿರುದು ಬೇಕಾದರೆ
ಹೀಗೆ ಮಾಡಬೇಕೋ—ವಿಠಲ ತಂದೆ

## ೧೦೩

ರಾಗ – ಮೋಹನ ತಾಳ—ಅಟ

ಬಿಡೆ ನಿನ್ನ ಪಾದವ ಬಿಂಕವಿದೇಕೋ
ಕೊಡುವುದೊ [೧]ಅಭೀಷ್ಟವ ಕೋಪವಿದೇಕೋ ॥ ಪ ॥

ನೀರೊಳು ಪೊಕ್ಕರು ನಿನ್ನನು ಬಿಡೆ ಬೆನ್ನ
ಭಾರವ ಪೊತ್ತಿಹೆನೆಂದರು ಬಿಡೆನೋ ॥
ಕೋರೆಯ [೨]ತೋರಿಸಿ ಕೊಸರಿಕೊಂಡರು ಬಿಡೆ
ಘೋರರೂಪವ ತೋರಿ ಘುಡುಘುಡಿಸಲು ಬಿಡೆ ॥ ೧ ॥

ತಿರುಕನೆಂದರು ಬಿಡೆ ತರೆದ ತಾಯ್ಕೊರಳ
ಕೊರೆಕನೆಂದರು ಬಿಡೆ ಅವನಿಯೊಳು ॥
[೩]ಕರಕರೆಗಾರದೆ ಕಾಡ ಸೇರಲು ಬಿಡೆ
ಸುರಳ ಮಡುವಿನಲ್ಲಿ ಧುಮುಕಿದರೂ ಬಿಡೆ ॥ ೨ ॥

೧) ಪಾ. 'ಮನದಿಷ್ಟವ' ೨) ಪಾ. ಮಸೆಯುತ ಕೆಸರುಕೊಂಡರು. ೩) ಪಾ. ಪೊರೆಯು ಶಿಶನವಾಕ್ಯ.

ಕಡುಬತ್ತಲೆ ಕೈಲಿ ಕಾಸಿಲ್ಲೆಂದರು ಬಿಡೆ
ಒಡನೆ [೧]ತೇಜಿಯನೇರಿ ಓಡಲು ಬಿಡೆನೋ ||
[೨]ಒಡೆಯ ಪುರಂದರ ವಿಟ್ಠಲನೇ ಎನ್ನ
ಕಡಹಾಯ್ಸುವ ಭಾರ[೩]ಕರ್ತನು ನೀನೆಂದು || ೩ ||

## ೧೦೪

ರಾಗ – ಶಂಕರಾಭರಣ — ತಾಳ—ಅಟ

ಅಂಬಿಗ ನಾ ನಿನ್ನ ನಂಬಿದೆ—ಜಗ-
ದಂಬಾರಮಣ ನಿನ್ನ [೪]ಹೊಂದಿದೆ || ಪಲ್ಲ ||

ತುಂಬಿದ ಹರಿಗೋಲಂಬಿಗ—ಅದ-
ಕೊಂಬತ್ತು ಛಿದ್ರಗಳಂಬಿಗ ||
[೫]ಸಂಭ್ರಮದಿಂದಲಿ ಅಂಬಿಗ—ಅದ-
ರಿಂಬನರಿತು ನಡೆಸಂಬಿಗ || ೧ ||

ಹೊಳೆಯ [೬]ಅಬ್ಬರ ನೋಡಂಬಿಗ—ಅಲ್ಲಿ-
ಸೆಳವು ಬಹಳ ಕಾಣೋ ಅಂಬಿಗ ||
ಸುಳಿಗೊಳಗಾದೆನು ಅಂಬಿಗ—ಎನ್ನ
ಸೆಳೆದುಕೊಂಡು ಒಯ್ಯೋ ಅಂಬಿಗ || ೨ ||

ಹತ್ತು ಬೆಂಬಡಿಗರು ಅಂಬಿಗ—ಅಲ್ಲಿ
ಒತ್ತಿ ಬರುತಲಿಹರಂಬಿಗ ||
[೭]ಹತ್ತುವರೆತ್ತಲು ಅಂಬಿಗ—ಎನ್ನ
ಎತ್ತಿಕೊಂಡು ಒಯ್ಯೋ ಅಂಬಿಗ || ೩ ||

---

೧) ಓ. ಹಯವನೇರಿ  ೨) ಓ. ಪೊಡವಿಯೊಳು  ೩) ಓ. ನಿನ್ನದದಕೆ ನಾನು
೪) ನಂಬಿದೆ (ಬಹುಮತ).  ೫) ಅ. ತುಂಬಿದಹೊಳೆ ಕಾಣೊ ಅಂಬಿಗ
೬) ಭರವ (ಬಹುಮತ)  ೭) ಹತ್ತಿದರೈವರು ಅಂಬಿಗ– ಅವರ ಮುತ್ತಿಗೆ-
ಗೊಳಗಾದೆ (ಬಹುಮತ)

ಆರು ತೆರೆಯ ನೋಡಂಬಿಗ—ಸುತ್ತಿ
ಮೀರಿ ಬರುತಲಿವೆ ಅಂಬಿಗ ||
ಆರನೆಂತಿಂತು ಅಂಬಿಗ—ಮುಂದೆ
ದಾರಿಯ ತೋರಿಸು ಅಂಬಿಗ ||೪||

ಸತ್ಯವೆಂಬುವ ಹುಟ್ಟು ಅಂಬಿಗ-ಓದು-
ಭಕ್ತಿಯೆಂಬುವ ೧ಪಾತ್ರ ಅಂಬಿಗ ||
ನಿತ್ಯಮುಕ್ತ ನಮ್ಮ ಪುರಂದರ ವಿಠಲನ
ಮುಕ್ತಿಮಂಟಪಕೆ ಒಯ್ಯೋ ಅಂಬಿಗ ||೫||

## ೧೦೫

ರಾಗ—ಶಂಕರಾಭರಣ ತಾಳ—ಅಟ

೨ತಾರಿಸೊ—ಶ್ರೀಹರಿ—ತಾರಿಸೊ ||ಪ||

ತಾರಿಸೊ ಭವವ ನಿವಾರಿಸೊ ನಿನ್ನಡಿಯ
ತೋರಿಸೊ ವೈಕುಂಠ ಸೇರಿಸೊ ರಂಗಯ್ಯ ||ಅ.ಪ||

ಪಾಪವಿನಾಶನ ಮಾಡುವಿ—ನೀ-
ತಾಪಸರನು ನಿತ್ಯ ಸಲಹುವಿ ||
ವ್ಯಾಪಿಸಿ ಸರ್ವತ್ರ ನಿನ್ನವರನು ಕಾಯ್ವ
ಶ್ರೀಪಾಂಡುರಂಗ ಪರಮಾತ್ಮ ಮುಕುಂದ ||೧||

ಹಿರಣ್ಯಕಶಿಪುವನು ಸೀಳಿದೆ—ಅವನ-
ಕರುಳನು ಕೊರಳೊಳು ಹಾಕಿದೆ ||
ದುರುಳಬುದ್ಧಿಯ ತಳೆದ ದೈತ್ಯಾಧಮನ ಕೊಂದು
ಕರುಣದಿಂದಲಿ ಕಂದಗೊಲಿದೆ ಗೋವಿಂದ ||೨||

೧) ಪಥ (ಬಹುಮತ)
೨) ಎ. ಓ. ಪ್ರತಿಗಳಲ್ಲಿಮಾತ್ರವಿದೆ.

ಅಸುರೆ ಪೂತನಿಯ ಸಂಹರಿಸಿದೆ–ನೀ–
ಶಶಿಮುಖಿಯಭಿಮಾನ ಕಾಯ್ದೆ ||
ಶಿಶುವಾಗಿ ಬಾಲಲೀಲೆಗಳನು ತೋರಿದೆ
ಕುಸುಮನಾಭ ಶ್ರೀಪುರಂದರವಿಠಲ || ೩ ||

## ೧೦೬

ರಾಗ—ಕೇದಾರಗೌಳ ತಾಳ—ಏಕ

[೧]ಶರಣು ಶರಣು ನಿನಗೆಂಬೆನೊ ವಿಠಲ
ಎರವು ಮಾಡದೆಯೆನ್ನ ಕಾಯೊ ವಿಠಲ || ಪ ||

ಅರಸಿ ರುಕ್ಮಿಣಿಗೆ ನೀನೇನೆಂದೆಯೊ ವಿಠಲ
ಸರಸಿಜಸಂಭವ ಸನ್ನುತ ವಿಠಲ ||
ಬಿರುದಿನ ಶಂಖವ ಪಿಡಿದೆಯೊ ವಿಠಲ
ಅರಿತು ಇಟ್ಟಿಗೆಯ ಮೇಲೆ ನಿಂತೆಯೊ ವಿಠಲ || ೧ ||

ಶಶಿಮುಖಿ ಗೋಪಿಯರ ರಾಜನೆ ವಿಠಲ
ಕುಶಲದಿ ಗಜುಗವನಾಡಿದೆ ವಿಠಲ ||
ದಶರಥನಂದನ ರಾಮನೆ ವಿಠಲ
ಕುಸುಮಬಾಣನಯ್ಯ ಕಾಯೊ ನೀ ವಿಠಲ || ೨ ||

ಕಂಡೆ ಗೋಪುರದ ವೆಂಕಟನೆ ವಿಠಲ
ಅಂಡಜಾಧಿಪ ವಾಹನನೆ ವಿಠಲ ||
ಪಂಢರಿಕ್ಷೇತ್ರದ ಪಾಲನೆ ವಿಠಲ
ಪುಂಡರೀಕವರದ ಪುರಂದರವಿಠಲ || ೩ ||

## ೧೦೭

ರಾಗ—ಶಂಕರಾಭರಣ ತಾಳ—ಅಟ
(ನೀಲಾಂಬರ)

ರಕ್ಷಿಸೋ ಲೋಕನಾಯಕನೆ—ನೀ ಎನ್ನ—
ರಕ್ಷಿಸೋ ಲೋಕನಾಯಕನೇ || ಪ ||

---

೧) ೧೭೫೦ ರ ತಾಳೆಗರಿಯ ಪ್ರತಿಯಂತೆ ಇದನ್ನು ಬರೆದಿದೆ.

ಎಷ್ಟೆಷ್ಟು ಜನ್ಮ ಕಳೆದೆನೋ—ಇ-
ನ್ನೆಷ್ಟೆಷ್ಟು ಜನ್ಮಪಡೆವೆನೋ ||
ಕಷ್ಟವ ಪಡಲಾರೆ ಕೃಷ್ಣ ಕೃಪೆಯನಿಟ್ಟು
ಇಷ್ಟವ ಪಾಲಿಸು ಇಭರಾಜವರದನೆ || ೧ ||

ಬಾಲತನದಿ ಬಹು ಬೆಂದೆನೋ—ನಾನಾ
ಲೀಲೆಯಿಂದಲಿ ಕಾಲ ಕಳೆದೆನೋ ||
ಲೋಲಲೋಚನ ಎನ್ನ ಮೊರೆಯ ಕೇಳುತ ಬೇಗ
ಜಾಲವ ಮಾಡದೆ ಪಾಲಿಸೈ ನರಹರಿ || ೨ ||

ಮುದುಕನಾಗಿ ಚಿಂತೆಪಡುವೆನೋ—ನಾ-
ಕದಡುದುಃಖವ ಪಡಲಾರೆನೋ ||
[1]ಸದರವಲ್ಲವು ಶ್ರೀಪುರಂದರವಿಟ್ಠಲ
ಮುದದಿಂದ ರಕ್ಷಿಸೊ ಖಗರಾಜಗಮನ || ೩ ||

## ೧೦೮

ರಾಗ—ಶಂಕರಾಭರಣ ತಾಳ—ಆದಿ

*ದೃಷ್ಟಿ ನಿನ್ನ ಪಾದದಲ್ಲಿ ನೆಡುವ ಹಾಗೆ—ಧರೆಯ
ದುಷ್ಟಜನರ ಸಂಗಗಳನು ಬಿಡುವ ಹಾಗೆ || ಪ ||

ಕೆಟ್ಟ ಮಾತ ಕಿವಿಯಿಂದ ಕೇಳದ ಹಾಗೆ—ಮನವ
ಕಟ್ಟಿ ಸದಾ ನಿನ್ನ ಧ್ಯಾನ ಬಿಡದ ಹಾಗೆ || ಅ.ಪ ||

ಧೃಷ್ಟನಾಗಿ ಕೈಯನೆತ್ತಿ ಕೊಡುವ ಹಾಗೆ—ಶ್ರೀ-
ಕೃಷ್ಣ ನಿನ್ನ ಪೂಜೆಯನ್ನು ಮಾಡುವ ಹಾಗೆ ||
ಭ್ರಷ್ಟನಾಗಿ ನಾಲ್ವರೊಳು ತಿರುಗದ ಹಾಗೆ—ಬಲು
ಶಿಷ್ಟಜನರ ಸೇವೆಯನು ಮಾಡುವ ಹಾಗೆ || ೧ ||

---

೧) ಎ– ಓ. ಉದಧಿಶಯನ

* ಎ. ಓ. ಪ್ರತಿಗಳಲ್ಲಿ ಮಾತ್ರ ಈ ಹಾಡು ಇದೆ.

ಪುಟ್ಟಿಸಿದ ತಾಯಿ-ತಂದೆಯಲ್ಲವೆ ನೀನು—ಒಂದು
ಹೊಟ್ಟೆಗಾಗಿ ದೈನ್ಯಪಡಬೇಕೇ ನಾನು ||
ಪಟ್ಟೆ-ಪಟ್ಟಾವಳಿ ಬೇಡಲಿಲ್ಲ ನಾನು—ಎನ್ನ
ಗುಟ್ಟು-ಅಭಿಮಾನಗಳ ಕಾಯೋ ನೀನು || ೨ ||

ನಟ್ಟನಡುನೀರೊಳೀಸಲಾರೆ ನಾನು-ಎತ್ತಿ
ಕಟ್ಟೆಯ ಸೇರಿಸಬೇಕಯ್ಯ ನೀನು ||
ಬೆಟ್ಟದಷ್ಟು ಪಾಪ ಹೊತ್ತಿರುವೆ ನಾನು—ಅದನು
ಸುಟ್ಟುಬಿಡು ಪುರಂದರವಿಟ್ಠಲ ನೀನು || ೩ ||

## ೧೦೯

ರಾಗ—ರೇಗುಪ್ತಿ ತಾಳ—ಝಂಪೆ

ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ
ಗೋಪೀಜನಪ್ರಿಯ ಗೋಪಾಲಗಲ್ಲದೆ || ಪ ||

ದೊರೆಯತನದಲಿ ನೋಡೆ ಧರಣಿದೇವಿಯ ರಮಣ
ಸಿರಿಯತನದಲಿ ನೋಡೆ ಶ್ರೀಕಾಂತನು ||
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವುತನದಲಿ ನೋಡೆ ಜಗದಾದಿ ಗುರುವು || ೧ ||

ಪಾವನತ್ವದಿ ನೋಡೆ ಅಮರಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯ ||
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ
ಆವ ಧೈರ್ಯದಿ ನೋಡೆ ಅಸುರಾಂತಕ || ೨ ||

ಗಗನದಲಿ ಸಂಚರಿಪ [೧]ಗರುಡವಾಹನನೀತ
ಜಗತಿಧರ [೨]ಅಹಿಪಪರಿಯಂಕಶಯನ ||
ನಿಗಮಗೋಚರ ಪುರಂದರವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೇ || ೩ ||

೧) ಗರುಡದೇವನೆ ತುರಗ (ಬಹುಮತ) ೨) ಶೇಷ (ಬಹುಮತ)

## ೧೧೦

ರಾಗ—ಶಹನ ತಾಳ—ಛಾಪು

ಕಂಡುಕಂಡು ನೀ ಎನ್ನ ಕೈಬಿಡುವರೆ ಕೃಷ್ಣ
ಪುಂಡರೀಕಾಕ್ಷ ಪುರುಷೋತ್ತಮ ಹರೇ ॥ ಪ ॥

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನಯ್ಯ ನೀರಜಾಕ್ಷ ॥
ತಂದೆ-ತಾಯಿಯು ನೀನೇ—ಬಂಧು-ಬಳಗವು ನೀನೇ
ಎಂದೆಂದಿಗೂ ನಿನ್ನ ನಂಬಿದೆನೊ ಕೃಷ್ಣಾ ॥ ೧ ॥

ಕ್ಷಣವೊಂದು ಯುಗವಾಗಿ ೧ತೃಣವು ಪರ್ವತವಾಗಿ
ಎಣಿಸಲಳವಲ್ಲ ಈ ಭವದ ವ್ಯಥೆಯು ॥
ಸನಕಾದಿ ಮುನಿವಂದ್ಯ ೨ವನಜಸಂಭವನಯ್ಯ
ಫಣಿಶಾಯಿ ಪ್ರಹ್ಲಾದಗೊಲಿದ ೩ನರಹರಿಯೆ ॥ ೨ ॥

ಭಕ್ತವತ್ಸಲನೆಂಬ ಬಿರುದು ಬೇಕಾದರೆ
ಭಕ್ತರ ಅಧೀನನಾಗಿ ಇರಬೇಡವೆ ॥
ಮುಕ್ತಿದಾಯಕ ೪ದೇವ ಹೊನ್ನೂರ ಪುರವಾಸ
ಶಕ್ತ ಪುರಂದರವಿಠಲ ಶ್ರೀಕೃಷ್ಣಾ ॥ ೩ ॥

## ೧೧೧

ರಾಗ—ಕಲ್ಯಾಣಿ ತಾಳ—ಅಟ್ಟ

ಸಲ್ಲದೋ ಕೃಷ್ಣ ಸಲ್ಲದೋ—ಸಿರಿ-
ವಲ್ಲಭ ಇದ ನೋಡು ಪಾಲಿಸಬೇಕೋ ॥ ಪ ॥

ಚಿತ್ತ ಚಳಿಸಿ ತಳೆಯುತ್ತಿದ ವೈರನು
ಮತ್ತೆ ತುರುಹಿಂಡನು ಬಿಟ್ಟು ಮೆಲ್ಲಿಸುವುದು ॥ ೧ ॥

೧, ತೃಣಕಿಂತ ಕಡೆಯಾಗಿ (ಬಹುಮತ). ೨) ಬ-ಓ. ವನಜಸಂಭವ ಜನಕ
೩) ಬ-ಓ. ಶ್ರೀಕೃಷ್ಣಾ. ೪) ಬ-ಓ. ನೀನು.

ಸಾವಿರ ಹೊನ್ನಿಕ್ಕಿ ಸವನವ ಸಾಧಿಸಿ
ಪಾವಕಸುರಿಗೆ ನೀನೊಪ್ಪಿಸಿ ಕೊಡುವುದು ॥ ೨ ॥

ಕುಶಲದಿ ಬಣ್ಣಿಸಿ ಬರೆದು ಚಿತ್ತಾರವ
ಮಸಿ–ಮಣ್ಣ ಮಾಡಿ ನೀ ಕೆಡಿಸುವುದು ॥ ೩ ॥

ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳನು
ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು ॥ ೪ ॥

ಕರುಣಿಸು ಸಿರಿಪುರಂದರ ವಿಟ್ಠಲ ನಮ್ಮ
ಹಿರಿದು ಮಾಡಿ ಮತ್ತೆ ಕಿರಿದು ಮಾಡುವುದು ॥ ೫ ॥

## ೧೧೨

ರಾಗ—ಕಲ್ಯಾಣಿ ತಾಳ—ಅಟ

೧ಯಾರಲಿ ದೂರುವೆನೋ—ಗಿರಿಯ ರಾಯಾ
ಯಾರೆನ್ನ ಸಲಹುವರೋ ॥ ಪ ॥

ಸಾರಿದ ಭಕ್ತಸಂಸಾರಿ ನಿನ್ನಯ ಪದ
ವಾರಿಜವನು ತೋರೋ ಕಾರುಣ್ಯನಿಧಿ ಬೇಗ ॥ ಅ. ಪ ॥

ಕಷ್ಟಜನ್ಮಕೆ ಬಂದೆನೋ—ಧಾರಿಣಿಯೊಳು
ದುಷ್ಟರಿಂದಲಿ ನೊಂದೆನೋ ॥
ನಿಷ್ಠುರ ಬೇಡವೊ ನಿನ್ನ ನಂಬಿದ ಮೇಲೆ
ಸೃಷ್ಟಿಗೊಡೆಯ ಎನ್ನ ಬಿಟ್ಟು ಕಳೆಯಬೇಡ ॥ ೧ ॥

ಹಿಂದೆ ಮಾಡಿದ ಕರ್ಮವು—ಈ ಭವದೊಳು
ಮುಂದಾಗಿ ತೋರುತಿದೆ ॥
ಇಂದೇನು ಗತಿ ಅದರಿಂದ ನೊಂದೆನು ನಾನು
ಮಂದರಧರ ಗೋವಿಂದ ನೀನಲ್ಲದೆ ॥ ೨ ॥

೧) ಓ. ಯಾರಿಗೆ

ಹಗಲು ಕತ್ತಲೆ ಸುತ್ತಿದೆ—ಕಂಗೆಡಿಸುತ
ಹಗೆಗಳ ನಗಿಸುತಿದೆ ||
ಉಗುರಲಿ ಸೀಗೆಮುಳ್ಳುಗಳೀಗ ನೆಡುತಿವೆ
ಸೊಗವ ಹಾರಿಸಿ ಎದೆ ದಿಗಿಲುಗೊಳಿಸುತಿದೆ || ೩ ||

ಬಾಡಿದರಳಿಸಸಿಯು—ಕಲ್ಲಿನ ಮೇಲೆ
ಈಡಾಗಿ ನಾಟಿದರೆ ||
ಬೇಡಿಕೊಂಡರೆ ತಳಿರು ಮೂಡಿ ಬರುವುದುಂಟೆ
ರೂಢಿಗೊಡೆಯ ನೀನು ನೋಡದಿದ್ದ ಮೇಲೆ || ೪ ||

ಹಲವು ಪರಿಯ ಕಷ್ಟವ—ನಿನ್ನಯ ಪಾದ-
ಜಲಜದ ಕರುಣದಲಿ ||
ಸುಲಿಗೆಗೊಟ್ಟೆನು ನಾನು ಸೂರೆಗಾರರಿಗೆಲ್ಲ
ಒಲವಾಗು ಎನ್ನೊಳು ಪುರಂದರವಿಠಲ || ೫ ||

## ೧೧೩

ರಾಗ—ರೇಗುಪ್ತಿ ತಾಳ – ಅಟ

ಯಾಕೆ ಕಡೆಗಣ್ಣಿಂದ ನೋಡುವೆ—ಕೃಷ್ಣ
ನೀ ಕರುಣಾಕರನಲ್ಲವೆ ? || ಪ ||

ಭಕ್ತವತ್ಸಲ ನೀನಲ್ಲವೆ—ಕೃಷ್ಣ—ಚಿತ್ತಸುಖದಾತ ನೀನಲ್ಲವೆ ?
ಅತ್ಯಂತ ಅಪರಾಧಿ ನಾನಾದಡೇನಯ್ಯ
ಇತ್ತಿತ್ತ ಬಾ ಎನ್ನಬಾರದೆ ರಂಗ || ೧ ||

ಇಂದಿರೆಯರಸ ನೀನಲ್ಲವೆ—ಬಹು—ಸೌಂದರ್ಯನಿಧಿ ನೀನಲ್ಲವೆ ?
ಮಂದಮತಿ ನಾನಾದಡೇನು ಕೃಪಾ-
ಸಿಂಧು ನೀ ರಕ್ಷಿಸಬಾರದೆ ರಂಗ || ೨ ||

ದೋಷಿಯು ನಾನಾದಡೇನಯ್ಯ—ಸರ್ವ-ದೋಷರಹಿತ ನೀನಲ್ಲವೆ ?
ಗಾಸಿಯೇತಕೆ ನಿನ್ನ ನಂಬಿದೆ ಸಲಹಯ್ಯ
ಶೇಷಶಾಯಿ ಶ್ರೀಪುರಂದರವಿಠಲ || ೩ ||

## ೧೧೪

ರಾಗ—ನಾದನಾಮಕ್ರಿಯೆ ತಾಳ—ಆದಿ

ಜಯ ಪಾಂಡುರಂಗ—ನಾನಿನ್ನ ಮನಕೆ ಬಾರೆನೆ ‖ ಪ ‖

ನಾ ನಿನ್ನ ಮನಕೆ ಬಾರೆನೆ ಬಂದರೆ ಈ ಭವದ
ಬಲೆಯೊಳು ಸಿಲುಕುವೆನೆ—ಜಯ ಪಾಂಡುರಂಗ ‖ ಅ.ಪ ‖

ಕೆಟ್ಟ ಕಿರಾತನ ಬೆಟ್ಟದಂಥ ಪಾಪವ
ಸುಟ್ಟು ವಾಲ್ಮೀಕಿ ಮುನಿಯೆನಿಸಿದೆ ‖ ೧ ‖

ಅಂತ್ಯಸಮಯದಲ್ಲಿ ಅತಿಭ್ರಷ್ಟ ಅಜಾಮಿಳಗೆ
ಅಂತಕನ ಬಾಧೆಯ ಬಿಡಿಸಿದೆಯೊ ‖ ೨ ‖

ತಂದೆ-ತಾಯ್ಗಳನು ತೊರೆದ ಧ್ರುವನಿಗೆ
ಚೆಂದದಿಂದ ಮಾರ್ಗವ ತೋರಿದೆಯೊ ‖ ೩ ‖

ಪಂಕಜನಾಭನೆ ಕುಬುಜೆಯ ಡೊಂಕ ತಿದ್ದಿ
ಶಂಕೆಯಿಲ್ಲದೆ ಅವಳ ಕೂಡಿದೆಯೊ ‖ ೪ ‖

ತೊತ್ತಿನ ಮಗನ ಮನೆಯು ಕುಡಿತೆ ಪಾಲನು ಸವಿದು
ಮತ್ತವಗೆ ಮುಕ್ತಿಯ ತೋರಿದೆಯೊ ‖ ೫ ‖

ಬಿದು ಮಂದಿಯು ಕೂಡ ಸರಸವು ದ್ರೌಪದಿಗೆ
ಐದೆ ಲಜ್ಜೆಯ ಕಾಯ್ದೆಯೊ ‖ ೬ ‖

ದೀನರನುದ್ಧರಿಪ ಪುರಂದರವಿಟ್ಠಲ
ನೀನು ಕಾರಣ ಎನ್ನ ಮರೆತೆಯೊ ‖ ೭ ‖

## ೧೧೫

ರಾಗ—ಪೂರ್ವಿ ತಾಳ—ಝಂಪೆ

ನೀನೆ ಗತಿ ನೀನೆ ಮತಿ ನೀನೆ ಸ್ವಾಮಿ
ನೀನಲ್ಲದನ್ಯತ್ರ ದೈವಗಳ ನಾನರಿಯೆ ‖ ಪ ‖

ನಿನ್ನ ಪಾದಾರವಿಂದದ ಸೇವೆಯನು ಮಾಡಿ
ನಿನ್ನ ಧ್ಯಾನದಲಿರುವ ಹಾಗೆ ಮಾಡು ||
ನಿನ್ನ ದಾಸರ ಸಂಗದಿಂದ ದೂರಿಡದೆನಗೆ
ಸನ್ಮಾರ್ಗವಿಡಿಸೊ ಜಗದೀಶ ಅಘನಾಶ || ೧ ||

ಕಮಲನಾಭಿಯೊಳು ಬೊಮ್ಮರ ಪುಟ್ಟಿಸಿದೆ ಹರಿಯೆ
ಕಮಲಸಖ ಕೋಟಿಪ್ರಕಾಶ ಈಶ ||
ಕಮಲಕರತಳದಿ ಅಭಯವನಿತ್ತು ಭಕುತರಿಗೆ
ಕಮಲಾಕ್ಷನೆನಿಸಿದೆಯೊ ಕಮಲಾರಮಣನೆ || ೨ ||

ಶಿಶುಪಾಲ ದಂತವಕ್ತ್ರರ ಶಿರವ ಭೇದಿಸಿದೆ
ಪಶುಪತಿಯ ಆಭರಣವೈರಿವಾಹನನೆ ||
ಅಸುರಕುಲ ಸಂಹರಿಸಿ ಭಕ್ತಜನರನು ಪೊರೆವೆ
ವಸುಧೇಶ ಸಿರಿ ಪುರಂದರವಿಠಲರಾಯಾ || ೩ ||

## ೧೧೬

ರಾಗ—ನವರೋಜು ತಾಳ—ಆದಿ

ನಂಬಿದೆ ನಿನ್ನ ಪಾದವ—ವೆಂಕಟರಮಣ
ನಂಬಿದೆ ನಿನ್ನ ಪಾದವ || || ಪ ||

ನಂಬಿದೆ ನಿನ್ನ ಪದಾಂಬುಜಯುಗಳವ
[1]ಇಂಬಿತ್ತು ಸಲಹಯ್ಯ ಕಂಬು-ಚಕ್ರಧರನೆ || ಅ.ಪ ||

ತಂದೆಯು ನೀನೆ ತಾಯಿಯು ನೀನೇ
ಬಂಧು-ಬಳಗವು ನೀನೇ ||
[2]ಬಂದ ದುರಿತವೆನ್ನ ಹೊಂದಿಕೊಳ್ಳದಂತೆ
ನಿಂತವೆ ಸಲಹೊ ಮುಕುಂದ ಮುರಾರಿ || ೧ ||

---

೧) ಎ. ಚೆಂದದಿ ಸಲಹೊ, ೨) ಎ. ಬಂದೆನ್ನ

ಚಿಕ್ಕಂದು ಮೊದಲು ನಾನು—ನಿನ್ನಯ ಪಾದ
ಹೊಕ್ಕು ಜೀವಿಸುತಿಹೆನು ||
ಗಕ್ಕನೆ ಜ್ಞಾನವನಕ್ಕರೆಯುಲಿ ಕೊಡು
ಮಕ್ಕಳ ಮಾಣಿಕ್ಯ ರುಕ್ಮಿಣಿಯರಸಾ || ೨ ||

ಮರೆತು ನಾ ಮಾಯೆಯೊಳು—ಮುಳುಗಿದೆ ಅದ-
ನರಿತು ಅರಿಯದಾದೆ ||
ಮರೆಯದೆ ಎನ್ನನು ಪೊರೆಯೊ ಕೃಪಾನಿಧಿ
ವರದಶ್ರೀವೆಂಕಟ ಪುರಂದರವಿಠಲ || ೩ ||

## ೧೧೭

ರಾಗ—ಮೋಹನ — ತಾಳ—ಅಟ

‡ನಿಲ್ಲಬೇಕಯ್ಯಾ ನೀನು—ಕೃಷ್ಣಯ್ಯಾ
ನಿಲ್ಲಬೇಕಯ್ಯಾ ನೀನು || ಪ ||

ನಿಲ್ಲಬೇಕಯ್ಯಾ ನೀ ಮಲ್ಲಮರ್ದನ ಸಿರಿ-
ವಲ್ಲಭ ಎನ್ನ ಹೃದಯದಲ್ಲಿ ಸತತ || ಪಲ್ಲ ||

ಸುಪ್ಪಾಣಿ ಮುತ್ತಿಟ್ಟು ನೋಡುವೆ—ನಿನ್ನ
ಚಪ್ಪಾಳಿ ತಟ್ಟುತ ನಾ ಪಾಡುವೆ ||
ಅಪ್ಪ ಶ್ರೀಕೃಷ್ಣ ನಿನ್ನನೆತ್ತಿ ಮುದ್ದಿಸಿಕೊಂಬೆ
ಸರ್ಪಶಯನ ಕೃಪೆಮಾಡೆಂದು ಬೇಡುವೆ || ೧ ||

ಚೆಂದದ ಹಾಸಿಗೆ ಹಾಸುವೆ—ಪುನಗು
ಗಂಧ ಕಸ್ತೂರಿಯ ಪೂಸುವೆ ||
ತಂದು ಮುದದಿ ಮುತ್ತಿನ ಹಾರ ಹಾಕುವೆ
ಅಂದದಿಂದಲಿ ನಿನ್ನನೆತ್ತಿ ಮುದ್ದಿಸಿಕೊಂಬೆ || ೨ ||

---

‡ ಅಚ್ಚಾದ ಪ್ರತಿಗಳಲ್ಲಿ ಮಾತ್ರ ಇದು ದೊರೆವುದು.

ನೀಲದ ಕಿರೀಟವನಿಡುವೆ—ಬಲು
ಬಾಲಲೀಲೆಗಳನು ಪಾಡುವೆ ||
ಚೆಲ್ವ ಶ್ರೀಪುರಂದರ ವಿಟ್ಠಲರಾಯನೆ
ನಿಲ್ಲು ಎನ್ನ ಮನದಲಿ ಒಂದೇಗಳಿಗೆ || ೩ ||

### ೧೧೮

ರಾಗ—ನಾದನಾಮಕ್ರಿಯೆ    ತಾಳ—ಆದಿ

*ನಿನ್ನ ಭಕುತಿಯನು ಬೀರೋ—[೧]ಎನ್ನ
ಮನ್ನಿಸಿ ಸಲಹುವರಾರೋ || ಪ ||

ಸನ್ನುತ ಸನ್ಮಾರ್ಗ ತೋರೋ—ಆ-
ಪನ್ನರಕ್ಷಕ ಬೇಗ ಬಾರೋ || ಅ.ಪ ||

ಪನ್ನಗ ಶಯನ ಲಕ್ಷ್ಮೀಶಾ—ವೇದ-
ಸನ್ನುತಪಾದ ಸರ್ವೇಶಾ ||
ಇನ್ನು ಬಿಡಿಸು ಭವಪಾಶಾ—ಪ್ರ-
ಸನ್ನ ರಕ್ಷಿಸೊ ಶ್ರೀನಿವಾಸಾ || ೧ ||

ನಾರದ ಗಾನವಿಲೋಲಾ—ಸ್ವಾಮಿ
ಭೂರಿ ಭಕ್ತರ ಪರಿಪಾಲಾ ||
ಶ್ರೀರಮಣ ಕರುಣಾಲವಾಲ—ದೇವ
ನೀರದಶ್ಯಾಮ ಗೋಪಾಲಾ || ೨ ||

ಕರಿರಾಜವರದಪ್ರಮೇಯಾ—ಎನ್ನ-
ನರಿತು [೨]ನಡೆಸೊ ಯೋಗಿಧ್ಯೇಯ ||
ಸುರಮುನಿ ಹೃದಯ ನಿಕಾಯ—ನಮ್ಮ
ಪುರಂದರವಿಟ್ಠಲರಾಯಾ || ೩ ||

* ಇ. ಹಸ್ತಪ್ರತಿಯಲ್ಲಿದು ಬರೀ 'ಪುರಂದರವಿಟ್ಠಲ' ಎಂದಿದ್ದರೂ ಅಚ್ಚಾದ ಎ–ಓ. ಪ್ರತಿಗಳಲ್ಲಿ 'ಗುರುಪುರಂದರವಿಟ್ಠಲ' ಎಂದು ಪ್ರಕಟವಾಗಿದೆ.

೧) ಓ. ದೇವಾ.    ೨) ಓ. ಸಲಹೊ.

## ೧೧೯

ರಾಗ—ಕಾಂಬೋದಿ ತಾಳ—ಝಂಪೆ

ಎಂದಿಗೆ ನಾನಿನ್ನು ಧನ್ಯನಹೆನೊ
ಎಂದಿಗೆ ನಿನ್ನ ಚಿತ್ತಕೆ ಬಹೆನೂ ಅಚ್ಯುತನೆ ‖ ಪಲ್ಲ

ಪುಲು-ಮರವು ಗಿಡ-ಬಳ್ಳಿ ಕುಲದಲಿಪ್ಪತು ಲಕ್ಷ-
ಜಲಜೀವದೊಳಗೆ ಒಂಬತ್ತು ಲಕ್ಷ ‖
ಅಳಲಿ ಏಕಾದಶ ಲಕ್ಷ ಕ್ರಿಮಿ-ಕೀಟದಲಿ
ತೊಳಲಿ ಬಳಲಿದೆನಂಡಜದೊಳು ದಶಲಕ್ಷ ‖೧

ಚರಣ ನಾಲ್ಕರಲಿ ಮೂವತ್ತುಲಕ್ಷ ಜೀವಿಸಿ
ನರನಾಗಿ ಚರಿಸಿದೆನು ನಾಲ್ಕುಲಕ್ಷ ‖
ಪರಿಪರಿಯ ಭವದಿಂದ ಬಲು ನೊಂದೆನೈ ನಿನ್ನ
ಸರಸಿಜಸಂಭವನ ಕಲ್ಪದಲ್ಲಿ ‖ ೨

ಎಂಬತ್ತುನಾಲುಕು—ಲಕ್ಷಯೋನಿಗಳಲ್ಲಿ
ಅಂಬುಜನಾಭ ನಿನ್ನ ಲೀಲೆಗಾಗಿ ‖
ಕುಂಭಿನಿಯೊಳು ಬಂದು ನೊಂದೆನಯ್ಯಾ ಸ್ವಾಮಿ
ಕಂಬುಕಂಧರ ಸಿರಿಪುರಂದರವಿಠಲ ‖ ೩

## ೧೨೦

ರಾಗ—ಕೇದಾರಗೌಳ ತಾಳ—ಝಂಪೆ

ನಿನ್ನ ನಂಬಿದೆನೊ ನೀಯೆನ್ನ ಸಲಹಯ್ಯ
ಎನ್ನ ಗುಣದೋಷಗಳ ಎಣಿಸಬೇಡಯ್ಯ ‖ ಪ ‖

ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಯೌವನಮದದಿ ಮುಂದರಿಯದೆ ‖
ಸ್ಥೂಲ ಸಂಸಾರದಲಿ ಸಿಲುಕಿ ಬಳಲಿದೆ ನಾನು
ಪಾಲಿಸೈ ಪರಮಾತ್ಮ ಭಕುತಿಯನು ಕೊಟ್ಟು ‖ ೧

ಆಸೆಯೆಂಬುದು ಅಜನ ಲೋಕ ಮುಟ್ಟುತಲಿದೆ
ಬೇಸರದೆ ಸ್ತ್ರೀಯರಲಿ ಬುದ್ಧಿಯೆನಗೆ ॥
ವಾಸುದೇವನೆ ನಿನ್ನ ಪೂಜೆಗೆಯ್ವವನಲ್ಲ
ಕೇಶವನೆ ಕ್ಲೇಶವನು ನಾಶ ಮಾಡಯ್ಯ || ೨ ||

ಈ ತೆರದಿ ಕಾಲವನು ಕಳೆದೆ ನಾನಿಂದಿರೇಶ
ಭೀತಿ-ಮೋಹದಿ ಜ್ಞಾನರಹಿತನಾದೆ ||
ಮಾತೆ ಶಿಶುವನು ಕರೆದು ಮನ್ನಿಸುವ ತೆರನಂತೆ
ದಾತ ಶ್ರೀಪುರಂದರವಿಠಲ ದಯಮಾಡೈ || ೩ ||

## ೧೨೧

ರಾಗ—ಆನಂದಭೈರವಿ ತಾಳ · ಅಟ
(ಸಾವೇರಿ)

ನಿನ್ನ ನಂಬಿದೆ ನೀರಜನಯನ
ಎನ್ನ ಪಾಲಿಸೊ ಇಂದಿರೆರಮಣ || ಪ ||
ಮುನ್ನ ಪಾಂಚಾಲಿಯ ಮೊರೆಯ ಲಾಲಿಸಿ ಕಾಯ್ದ
ಪನ್ನಗ ಶಯನ ನೀ ಪರಮಪುರುಷನೆಂದು || ಅ.ಪ ||

ಹರಿಸರ್ವೋತ್ತಮನಹುದೆಂಬ ಬಾಲಕನ
ಹಿರಣ್ಯಕಶಿಪು ಹಿಡಿದು ಬಾಧಿಸಲು ||
ನರಹರಿರೂಪದಿಂದವನ ವಕ್ಷವ ಸೀಳ್ದು
ಪರಮ ವಿಶ್ವಾತ್ಮಕನಹುದೆಂದು ಮೊರೆಹೊಕ್ಕೆ || ೧ ||

ಪಾದವ ಪಿಡಿದು ನೀರೊಳಗೆಳೆದ ನಕ್ರನ
ಬಾಧೆಗಾರದೆ ಕರಿಮೊರೆಯಿಡಲು ||
ಆದಿಮೂರುತಿ ಚಕ್ರದಿಂದ ನಕ್ರನ ಕೊಂದ
ವೇದಾಂತವೇದ್ಯ ಅನಾಥರಕ್ಷಕನೆಂದು || ೨ ||

ಇಳೆಗೊಡೆಯನ ತೊಡೆ ನಿನಗೇತಕೆಂದು ಆ-
ಲಲನೆ ಕೈಪಿಡಿದೆಳೆಯಲರ್ಭಕನ ॥
ನಳಿನಾಕ್ಷ ನಿನ್ನನೆದೆಯೊಳಿಟ್ಟು ತಪವಿರ್ದ
ಬಲುಬಾಲಕಗೆ ಧ್ರುವಪಟ್ಟಗಟ್ಟಿದನೆಂದು ॥ ೩ ॥

ಸುದತಿ ಗೌತಮಸತಿ ಮುನಿಶಾಪದಿಂದಲಿ
ಪಥದಿ ಪಾಷಾಣವಾಗಿ ಬಿದ್ದಿರಲು ॥
ಮುದದಿಂದಲಾಕೆಯ ಮುಕ್ತಮಾಡಿದ ಯೋಗಿ-
ಹೃದಯಭೂಷಣ ನಿನ್ನ ಪದವೈಭವವ ಕಂಡು ॥ ೪ ॥

ಪರಮಪಾವನೆ ಜಗದೇಕಮಾತೆಯನು
ದುರುಳ ರಾವಣ ಪಿಡಿದುಕೊಂಡೊಯ್ಯಲು ॥
ಶರಣೆಂದು ವಿಭೀಷಣ ಚರಣಕೆರಕಲಾಗಿ
ಸ್ಥಿರಪಟ್ಟವನು ಕೊಟ್ಟ ಜಗದೀಶ ನೀನೆಂದು ॥ ೫ ॥

ಅಂಬರೀಷನೆಂಬ ನೃಪತಿ ದ್ವಾದಶಿಯನು
ಸಂಭ್ರಮದಿಂದ ಸಾಧಿಸುತಿರಲು ॥
ಡೊಂಬೆಯಿಂದ ದೂರ್ವಾಸ ಶಪಿಸಲಾಗಿ
ಬೆಂಬಿಡದಲೆ ಚಕ್ರದಿಂದ ಕಾಯ್ದವನೆಂದು ॥ ೬ ॥

ಧರೆಯೊಳು ನಿಮ್ಮ ಮಹಿಮೆಯ ಪೊಗಳ್ವಡೆ
ಸರಸಿಜೋದ್ಭವ-ಶೇಷಗಸದಳವು ॥
ಸ್ಮರಣೆಮಾತ್ರದಿ ಅಜಾಮಿಳಗೆ ಮೋಕ್ಷವನಿತ್ತ
ಪುರಂದರವಿಟ್ಠಲ ಜಗದೀಶ ನೀನೆಂದು ॥ ೭ ॥

# ಸೋಪಚಾರ ಪೂಜೆ

## ೧೨೨

ರಾಗ— ಮೋಹನ ತಾಳ—ಆದಿ

ಏನನಿತ್ತು ಮೆಚ್ಚಿಸುವೆನು ಏನೋ ವಿಠಲ || ಪ ||

[೧]ಮಾನಿನಿಸಿರಿಯರಸ ನಿನ್ನ
ನಾಮವನ್ನೆ ನೆನೆವೆನಯ್ಯ || ಅ. ಪ ||

ಓದಿ ನಿನ್ನ ಮೆಚ್ಚಿಸುವೆನೆ ವೇದವನ್ನು ಅಜನಿಗಿತ್ತೆ
ಪಾದಿಸಿ ನಿನ್ನ ಮೆಚ್ಚಿಸುವೆನೆ ಆದಿಶೇಷಶಯನನೆ || ೧ ||

ಆಡಿ ನಿನ್ನ ಮೆಚ್ಚಿಸುವೆನೆ ಮೃಡನಯ್ಯನಯ್ಯನೆ
ಪಾಡಿ ನಿನ್ನ ಮೆಚ್ಚಿಸುವೆನೆ ಪವನಜನೊಡೆಯನೆ || ೨ ||

ಚಿನ್ನವಿತ್ತು ಮೆಚ್ಚಿಸುವೆನೆ ಸಿರಿದೇವಿಯ ರಮಣನೆ
ಪೂರ್ಣಾನಂದ ವಿಜ್ಞಾನಿ ನೀನೆ ಪುರಂದರವಿಠಲಯ್ಯ || ೩ ||

## ೧೨೩

ರಾಗ—ಕಾಂಬೋದಿ ತಾಳ—ಆದಿ

ಎಂತು ನಿನ್ನ ಪೂಜೆ ಮಾಡಿ ಮೆಚ್ಚಿಸುವೆನೋ || ಪ ||

ಚಿಂತಾಯಿತನೆ ನಿನ್ನ ನಾಮ ಎನಗೊಂದು ಕೋಟಿ || ಅ.ಪ ||

ಪವಿತ್ರೋದಕದಿ ಪಾದ ತೊಳವೆನೆಂತೆಂದರೆ
ಪಾವನವಾದ ಗಂಗೆ ಪಾದೋದ್ಭವೆ ||
ನವಕುಸುಮವ ಸಮರ್ಪಿಸುವೆನೆಂದರೆ ಉದು-
ಭವಿಸಿದನು ಅಜ ನಿನ್ನ ಪೊಕ್ಕುಳ ಪೂವಿನಲಿ || ೧ ||

೧) ಪಾ— ಹ. ದೀನರಕ್ಷಕ ನಿನ್ನ ಧ್ಯಾನವೀಯೊ ವಿಠಲಯ್ಯ ।
೨) ಪಾ— ಹ. ಸ್ವಾಮಿಯೇ

ದೀಪವನು ಬೆಳಗುವೆನೆ–ನಿನ್ನ ಕಂಗಳು ಸಪ್ತ-
ದ್ವೀಪಂಗಳೆಲ್ಲವನು ಬೆಳಗುತಿಹವೋ ||
ಆಪೋಶನವನಾದರೀವೆನೆಂತೆಂಬೆನೆ
ಆಪೋಶನವಾಯ್ತು ಏಳು ಅಂಬುಧಿಯು || ೨

ಕಾಣಿಕೆಯಿತ್ತಾದರು ಕೈಮುಗಿವೆನೆಂದರೆ
ರಾಣಿವಾಸವು ಸಿರಿದೇವಿ ನಿನಗೆ ||
ಮಾಣದೆ ಮನದೊಳು ನಿನ್ನ ನಾಮಸ್ಮರಣೆ
ಧ್ಯಾನವನು ದಯೆಮಾಡೋ ಪುರಂದರವಿಠಲ || ೩

## ೧೨೪

ರಾಗ—ಶಂಕರಾಭರಣ ತಾಳ - ಅಟ

ಹೇಗೆ ಅರ್ಚಿಸಲಿ ಮೆಚ್ಚಿಸಲಿ ನಿನ್ನ
ನಾಗಶಯನ ನಾರದವಂದಿತನೆ ದೇವಾ || ಪ

ಮಂಗಳಾಭಿಷೇಕಕೆ ಉದಕ ತರುವೆನೆನೆ
ಗಂಗೆಯು ಅಂಗುಟದಿ ಪಡೆದಿಹೆಯೊ ||
ಸಂಗೀತಕೀರ್ತನೆ ಪಾಡುವೆನೆಂದರೆ
ಹಿಂಗದೆ ತುಂಬುರ–ನಾರದರು ಪಾಡುವರೊ || ೧

ಪುಷ್ಪವ ತಂದು ನಿನಗರ್ಪಿಸುವೆನೆಂದರೆ
ಪುಷ್ಪ ಫುಲ್ಲಯಿಸಿದೆ ಹೊಕ್ಕುಳಲಿ ||
ಮುಪ್ಪತ್ತು ಮೂಕೋಟಿ ದೇವತೆಗಳು ನಿನ-
ಗೊಪ್ಪಯಿಸೆ ನೈವೇದ್ಯ ನಿತ್ಯತೃಪ್ತನು ನೀನು || ೨

ಕೋಟಿಸೂರ್ಯರ ಕಾಂತಿ ಮಿಗಿಲಾದವನಿಗೊಂದು
ಪೋಟು ದೀವಿಗೆ ಬೆಳಗೆ ಬೆಳಕಹುದೆ ? ||
ಸಾಟಿಗಾಣದ ಸಿರಿ ಉರದೊಳು ನೆಲಸಿರೆ
ಪೋಟುಗಾಸನು ಎಂತು ಕಾಣಿಕೆಯಿಡಲಯ್ಯ || ೩

ಹಾಸಿಗೆಯನು ನಿನಗೆ ಹಾಸುವೆನೆಂದರೆ
ಶೇಷನ ಮೈಮೇಲೆ ಪವಡಿಸಿಹೆ ||
ಬೀಸಣಿಕೆಯ ತಂದು ಬೀಸುವೆನೆಂದರೆ
ಆಸವಿಾರಣ ಚಾಮರವ ಬೀಸುತಿಹನೋ ||೪||

ನಿತ್ಯಗುಣಾರ್ಣವ ನಿಜಸುಖ ಪರಿಪೂರ್ಣ
ಸತ್ತು-ಚಿತ್ತಾನಂದ ಸನಕಾದಿವಂದ್ಯ ||
ಮುಕ್ತಿದಾಯಕ ನಮ್ಮ ಪುರಂದರವಿಠಲನು
ಭಕ್ತಿಪ್ರಿಯನು ಎಂದು ಭಜಿಸಿ ಕೊಂಡಾಡುವೆ ||೫||

## ೧೨೫

ರಾಗ—ಶಂಕರಾಭರಣ ತಾಳ—ಅಟ

ಒಲ್ಲನೋ ಹರಿ ಕೊಳ್ಳನೋ ||ಪ||

ಎಲ್ಲ ಸಾಧನವಿದ್ದು ತುಲಸಿ ಇಲ್ಲದ ಪೂಜೆ ||ಅ. ಪ||

ಸಿಂಧು [೧]ಸಾಗರಕೋಟಿ ಗಂಗೋದಕವಿದ್ದು
ಗಂಧ ಸುಪರಿಮಳ ವಸ್ತ್ರವಿದ್ದು ||
ಅಂದವಾದಾಭರಣ ಧೂಪ-ದೀಪಗಳಿದ್ದು
ವೃಂದಾವನ ಶ್ರೀತುಲಸಿಯಿಲ್ಲದ ಪೂಜೆ ||೧||

[೨]ಮಧುಕ್ಷೀರ ಮೊದಲಾದ ಪಂಚಾಮೃತಗಳಿದ್ದು |
ಮಧುಪರ್ಕ [೩]ಪೂಜೋಪಚಾರವಿದ್ದು |
[೪]ಮಧುಸೂದನ ಮುದ್ದು ಕೃಷ್ಣನ ಪೂಜೆಗೆ |
[೫]ಮುದದ ಮೋಹದಳೆಂಬ ತುಲಸಿಯಿಲ್ಲದ ಪೂಜೆ ||೨||

---

೧) ಎ. ಓ. ಶತಕೋಟಿ ೨) ಎ– ಓ. ದಧಿಕ್ಷೀರ ೩) ಎ. ಓ. ಪಂಚೋಪಚಾರವಿದ್ದು ೪) ಆ–ಎ–ಓ. ಮುದದಿಂದ ೫) ಎ– ಓ. ಸದಮಲವಾದ

ಕಮಲ ಮಲ್ಲಿಗೆ ಜಾಜಿ ಸಂಪಗೆ-ಕೇದಗೆ
ವಿಮಲ ಘಂಟೆ ಪಂಚವಾದ್ಯವಿದ್ದು ||
ಅಮಲ ಪಂಚದಿವ್ಯ ಅಮೃತಾನ್ನಗಳಿದ್ದು
ಕಮಲನಾಭನು ಶ್ರೀತುಲಸಿಯಿಲ್ಲದ ಪೂಜೆ || ೩ ||

ಮಂತ್ರ ಮಹಾಮಂತ್ರ ಪುರುಷಸೂಕ್ತಗಳಿದ್ದು
ತಂತುತಪ್ಪದ ತಂತ್ರಸಾರವಿದ್ದು ||
ಸಂತತ [1]ಸುಖಸಂಪೂರ್ಣನ ಪೂಜೆಗ- |
ತ್ಯಂತ ಪ್ರಿಯಳಾದ ತುಲಸಿಯಿಲ್ಲದ ಪೂಜೆ || ೪ ||

ಪೂಜೆಯ ಮಾಡದೆ ತುಲಸೀಮಂಜರಿಯಿಂದ
ಮೂಜಗದೊಡೆಯ ಮುರಾರಿಯನು |
ರಾಜಾಧಿರಾಜನೆಂಬ ಬಿರುದುಮಂತ್ರಗಳಿಂದ ||
ಪೂಜೆ ಮಾಡಿದರೇನು ಪುರಂದರವಿಠಲನ || ೫ ||

## ೧೨೬

ರಾಗ—ಪೂರ್ವಕಲ್ಯಾಣಿ ತಾಳ—ಅಟ

ಧೂಪಾರತಿಯ ನೋಡುವ ಬನ್ನಿ—ನಮ್ಮ-
[2]ಗೋಪಾಲಕೃಷ್ಣನ ಪೂಜೆಯ ಸಮಯದಿ || ಪ ||

ಅಗುರು ಚಂದನ ಧೂಪ ಗುಗ್ಗುಳ ಸಾಮ್ರಾಣಿ
ಘಮಘಮಿಸುವ ಧೂಪದಾರತಿಯು ||
ಮಿಗಿಲಾದ ಏಕಾಂತ ಭಕ್ತಿಯಲಿ ನಮ್ಮ |
ಜಗನ್ನಾಥ ಕೃಷ್ಣನ ದೇವರ ಪೂಜೆಯು || ೧ ||

---

೧) ಅ- ಶ್ರೀಕೃಷ್ಣರಾಯನ

೨) ಅ- ಎ. ಗೋಪಾಲಕೃಷ್ಣ ದೇವರ

ಮದ್ದಲೆ ಜಾಂಗಟೆ ತಾಳ ತಮ್ಮಟೆ ಭೇರಿ
ತದ್ಧಿಮಿ ಧಿಮಿಕೆಂಬ ನಾದಗಳು ॥
ಹೊದ್ದಿದ ಧವಳಶಂಖದ ಘೋಷಣಂಗಳ
ಪದ್ಮನಾಭನ ದಿವ್ಯ ದೇವರ ಪೂಜೆಯು ॥ ೨ ॥

ಢಣಢಣ-ಢಣರೆಂಬ ತಾಳ-ದಂಡಿಗೆ ವೇಣು
ಢಣಕು ಧಿಮಿಕು ಎಂಬ ಮದ್ದಳೆಯು ॥
ಝಣಿರ್ಝಣಿಸುವ ವೀಣೆ ಕಿನ್ನರಿಸ್ವರಗಳ
ಘನರಾಗದಿಂದಲಿ ಹಾಡುತ ಪಾಡುತ ॥ ೩ ॥

ಮುತ್ತುಛತ್ರ ಚಾಮರ ಪತಾಕ ಧ್ವಜ
ರತ್ನಕೆಚ್ಚಿದ ಪದಕಹಾರಗಳು ॥
ಮತ್ತೆ ಕೋಟಿಸೂರ್ಯ ಪ್ರಭೆಯ ಧಿಕ್ಕರಿಸುವ
ಸತ್ಯಭಾಮೆ-ರುಕ್ಮಿಣಿಯರರಸನ ॥ ೪ ॥

ಹರ ಬ್ರಹ್ಮ ಸುರಪತಿ ದೇವತೆ ಮೊದಲಾದ
ಪರಮ ಪಾವನಮೂರ್ತಿ ಪುರುಷೋತ್ತಮನ ॥
[1]ಪರದೈವತನೆಂದು ಬಿರುದು ಹೊಗಳಿಸಿಕೊಂಬ
ಪುರಂದರವಿಠಲನ ಪೂಜೆಯು ಕಾಲದ ॥ ೫ ॥

## ೧೨೭

ರಾಗ—ಧನ್ಯಾಸಿ ತಾಳ— ಆದಿ

ಏಕಾರತಿಯನೆತ್ತುವ ಬನ್ನಿ—ನಮ್ಮ-
ಲೋಕನಾಥನ ಸಿರಿಪಾದವ ಬೆಳಗುವ ॥ ಪ ॥

ತುಪ್ಪದೊಳ್ದ್ದಿರಿಸಿದ ಹೂರು ಬತ್ತಿಯನಿಟ್ಟು
ಒಪ್ಪುವ ದೀಪಕ್ಕೆ ದೀಪ ಹಚ್ಚಿ ॥
ತಪ್ಪದೆ ಸಕಲ ಪಾಪಂಗಳ ಹರಿಸುವ
ಅಪ್ಪ ವಿಠಲನ ಪದಾಬ್ಜವ ಬೆಳಗುವ ॥ ೧ ॥

೧) ಪಾ. ಪರದೈವ ಅವನೆಂದು ಶ್ರುತಿಯುದಿ ಹೊಗಳಿ

ಹರುಷದಿ ಏಕಾರತಿ ಬೆಳಗಿದ ಫಲ
ನರಕದಿಂದುದ್ಧಾರ ಮಾಡುವುದು ॥
ಪರಮ ಭಕುತಿಯಿಂದ ಬೆಳಗುವ ನರರನು
ಹರಿ ತನ್ನ ಹೃದಯದಿ ಧರಿಸುವನಯ್ಯ ॥ ೩

ಅನ್ಯಚಿಂತೆ ಮಾಡದೆ ಅನ್ಯರ ಭಜಿಸದೆ-ಮು-
ತ್ತನ್ಯ ದೇವರನು ಸ್ಮರಿಸದೆ-ಅ- ॥
ನನ್ಯವಾಗಿ ಶ್ರೀಪುರಂದರವಿಠಲನ
ಪುಣ್ಯನಾಮಗಳ ಧ್ಯಾನಿಸುತ ॥ ೪

## ೧೨೮

ರಾಗ—ಆನಂದಭೈರವಿ ತಾಳ—ಆದಿ

[೧]ನೈವೇದ್ಯವ ಕೊಳ್ಳೊ ನಾರಾಯಣಸ್ವಾಮಿ
ದಿವ್ಯ ಷಡುರಸಾನ್ನವನಿಟ್ಟೆನೊ ॥ ಪ

ಘಮಘಮಿಸುವ ಶಾಲ್ಯನ್ನ ಪಂಚಭಕ್ಷ್ಯ
ಅಮೃತ ಕೂಡಿದ ದಿವ್ಯ ಪರಮಾನ್ನವು ॥
ರಮಾದೇವಿಯು ಸ್ವಹಸ್ತದಿ ಮಾಡಿದ ಪಾಕ
ಭೂಮಿ ಮೊದಲಾದ ದೇವಿಯರ ಸಹಿತ ತಾನು ॥ ೧

ಅರುವತ್ತು ಶಾಕ ಲವಣಶಾಕ ಮೊದಲಾದ
ಸರಸ ಮೊಸರುಬುತ್ತಿ ಚಿತ್ರಾನ್ನವ ॥
ಪರಮ ಮಂಗಳ ಅಪ್ಪಾಲು ಅತಿರಸಗಳ
ಹರುಷದಿಂದಲಿ ಇಟ್ಟ ಹೊಸತುಪ್ಪವ ॥ ೨

ವಡೆಯಂಬೋಡಿಯು ದಧಿವಡೆಯು ತಿಂಥಿಣಿ
ಒಡೆಯನೆ ಬಡಿಸಿದೆ ಅಧಿಕವಾಗಿ ॥
ದೃಢವಾದ ಪಡಿಪದಾರ್ಥವನೆಲ್ಲ ಇಡಿಸಿದೆ
ಒಡೆಯ ಶ್ರೀಪುರಂದರವಿಠಲ ನೀನುಣ್ಣೊ ॥ ೩

೧) ಮುದ್ರಿತ ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತದೆ.

## ೧೨೯

ರಾಗ—ಕಲ್ಯಾಣಿ ತಾಳ—ಅಟ

ಆರೋಗಣೆಯ ಮಾಡೋ—ಎನ್ನಯ್ಯ
ಆರೋಗಣೆಯ ಮಾಡೋ ॥ ಪ ॥

ನಾರದಾರ್ಚಿತಪಾದ—ನಾರಾಯಣ ಸ್ವಾಮಿ ॥ ಅ.ಪ. ॥

ಸರಸಿಜಾಲಯೆ ಲಕ್ಷ್ಮಿ ಸರಸ್ವತಿ ಭಾರತಿ
ಪರಿಪರಿ ಅಡಿಗೆಯ ಸಿದ್ಧ ಮಾಡಿಹರೊ ॥
ಪರಿಮಿತಿಯಿಲ್ಲದ ರುಚಿಯ ಪದಾರ್ಥವ
ಪರಮಪುರುಷ ಉಂಡು ದಯೆಮಾಡೋ ಸ್ವಾಮಿ ॥ ೧ ॥

ಅಂಬುಜಮುಖಿ ಲಕ್ಷ್ಮಿ ತಾಂಬೂಲ ಕೊಡುವಳು
ಕಂಬುಕಂಧರನೇ ನೀ ಕೈಕೊಳು ಬೇಗ ॥
ರಂಭೆ ಊರ್ವಸಿ ಮೇನಕೆ ಮೊದಲಾದವರು
ಸಂಭ್ರಮದಿ ಬಂದು ನಾಟ್ಯಕೆ ಕಾದಿಹರೊ ಸ್ವಾಮಿ ॥ ೨ ॥

೧* * * * *
* * * * *
ಸರಸಿಜಭವನಯ್ಯ ಪುರಂದರವಿಟ್ಠಲ
ಸರುವಭೋಗ ಭುಂಜಿಪ ನರರ ಪಾಲಿಸೊ ದೇವಾ ॥ ೩ ॥

## ೧೩೦

ರಾಗ—ಮುಖಾರಿ ತಾಳ—ಅಟ

ಆರೋಗಣೆಯ ಮಾಡೇಳಯ್ಯ—ಶ್ರೀಮನ್
ನಾರಾಯಣ ಭೋಗ ಸ್ವೀಕರಿಸಯ್ಯ ॥ ಅ.ಪ ॥

೧) ಹ. ಕೈಬರೆಹದ ಪ್ರತಿಯೊಂದರಲ್ಲಿ ಮಾತ್ರ ಈ ಹಾಡು ಸಿಗುತ್ತದೆ. ಮೂರ ನೆಯ ನುಡಿಯ ಮೊದಲಿನ ಎರಡು ಪಂಕ್ತಿಗಳು ಮೂಲಪ್ರತಿಯಲ್ಲಿ ಇಲ್ಲ.

ಸರಸಿಜಭವಾಂಡದ ಮೇರುಮಂಟಪದಿ ದಿನ-
ಕರಕರದೀಪ್ತ ಜ್ಯೋತಿಶ್ಚಕ್ರವು ॥
ತರಣಿಮಂಡಲ ಪೋಲುವ ರತುನದ ಹೊನ್ನ
ಹರಿವಾಣದಲಿ ದೇವಿ ಬಡಿಸಿಹಳಯ್ಯ ॥ ೧ ॥

ಅಲ್ಲ ಪೇರೀಳೆ ಲಿಂಬೆ ಯಾಲಕ್ಕಿ ಮೆಣಸು ಕಾಯ್-
ನೆಲ್ಲಿ ಅಂಬಟೆಕಾಯಿ ಚೆಲ್ವ ಮಾಂಗಾಯಿ ॥
[೧]ಬೇಲ ಮಂಗರೋಳಿ ಹುಣಿಸೆ ಪಾಪಟೆಕಾಯಿ
ಎಲ್ಲ ಧರಾದೇವಿ [೨]ಅಣಿಗೊಳಿಸಿಹಳಯ್ಯ ॥ ೨ ॥

ಹಪ್ಪಳ ಸಂಡಿಗೆ ವಿವಿಧ ಶಾಕಂಗಳು
ತುಪ್ಪ ಸಕ್ಕರೆ [೩]ಹಣ್ಣು-ಹಂಪಲವು
ಕರ್ಪೂರ ಕಸ್ತೂರಿ ಬೆರಸಿದ ಸಿಖರಿಣಿ
ಒಪ್ಪದಿ ಶ್ರೀದೇವಿ ಬಡಿಸಿಹಳಯ್ಯ ॥ ೩ ॥

ಎಣ್ಣೂರಿಗತಿರಸ [೪]ಚೆನ್ನಾದ ಮಂಡಿಗೆ
ಅನ್ನ [೫]ಕ್ಷೀರಾನ್ನ ಪರಮಾನ್ನಗಳು ॥
ಸಣ್ಣ ಸೇವಗೆ ಶಾಲ್ಯನ್ನವ ನಿಮಿಷದಿ
[೬]ಚೆನ್ನೆ ದುರ್ಗಾದೇವಿ ಬಡಿಸಿಹಳಯ್ಯ ॥ ೪ ॥

ನೀ ನಿತ್ಯತೃಪ್ತನಹುದು ನಿನ್ನ ಉದರದೊಳು
ನಾನಾ ಜನರು ಬಂದು ಉಣ್ಣಬೇಕೋ ॥
ಶ್ರೀನಾಥ ಗದುಗಿನ ವೀರನಾರಾಯಣ
ಅನಾಥಬಂಧು ಶ್ರೀಪುರಂದರವಿಠಲಾ ॥ ೫ ॥

---

೧) ಓ. ಬಿಲ್ವ. ೨) ಓ. ತಾ ಬಡಿಸಿದಳಯ್ಯ. ೩) ಓ. ಹಣ್ಣು-ಫಲಗಳು.
೪) ಓ. ಬೆಲ್ಲದ ಮಂಡಿಗೆ. ೫) ಓ. ಪಾಲಿನ. ೬) ಓ. ಬಣ್ಣಿಸಿ.

### ೧೩೧

ರಾಗ—ಆನಂದಭೈರವಿ ತಾಳ—ಅಟ

೧ಫಲಾಹಾರವನು ಮಾಡೊ ಪರಮಪುರುಷ—ಭೂ-
ಬಲನೆ ಲಕ್ಷ್ಮೀ ಕಂದರ್ಪರ ಸಹಿತ ॥ ಪ ॥

ಕದಳಿ ಕೆಂಬಾಳೆ ಕಿತ್ತಳೆ ಕಂಚಿಫಲಗಳು
ಬದರಿ ಬೆಳುವಲ ಜಂಬೀರ ದ್ರಾಕ್ಷೆಗಳು ॥
ಮಧುರದ ಮಾದಾಳ ಮಾವಿನ ಹಣ್ಗಳು
ತುದಿ-ಮೊದಲಿಲ್ಲದ ಪರಿಪರಿ ಫಲಗಳ ॥ ೧ ॥

ಉತ್ತತ್ತಿ ಜಂಬು ನಾರಂಗ ದಾಳಿಂಬವು
ಮುತ್ತಾದೌದುಂಬರ ಕಾರಿಯು ಕವಳಿ ॥
ಕತ್ತರಿಸಿದ ಕಬ್ಬು ಪಲಸು ತೆಂಗಿನಕಾಯಿ
ಒತ್ತಿದ ಜೇಳಿ ನೆಲಗಡಲೆ ಖರ್ಜೂರ ಹಣ್ಣ ॥ ೨ ॥

ಹಾಲು ಸಕ್ಕರೆ ಜೇನುತುಪ್ಪ ಸೀಕರಣೆಯು
ಹಾಲು ರಸಾಯನ ಬೆಣ್ಣೆ ಸೀಯಾಳು ॥
ಮೂಲೋಕದೊಡೆಯ ಶ್ರೀಪುರಂದರವಿಠಲನೆ
ಪಾಲಿಸೋ ನಿನ್ನಯ ಕರಕಂಜದಿಂದಲಿ ॥ ೩ ॥

### ೧೩೨

ರಾಗ—ಧನ್ಯಾಸಿ ತಾಳ—ಆದಿ

೨ಪಂಕಜ ಮುಖಿಯರೆಲ್ಲರು ಬಂದು—ಲಕ್ಷ್ಮೀ-
ವೆಂಕಟರಮಣಗಾರತಿಯೆತ್ತಿರೆ ॥ ಪ ॥

---

೧) ಎ. ಹಸ್ತಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.
೨) ಎ–ಓ. ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತಿದೆ.

ಮತ್ಸ್ಯಾವತಾರಗೆ ಮಂಪರೋದ್ಧಾರಗೆ
ಉತ್ಸಾಹದಿ ಭೂಮಿ ತಂದವಗೆ ||
ವತ್ಸಗಾಗಿ ಕಂಬದಿಂದಲಿ ಬಂದ—
ಉತ್ಸವ ನರಸಿಂಹಗಾರತಿಯೆತ್ತಿರೆ ||೧||

ವಾಮನರೂಪದಿ ದಾನ ಬೇಡಿದವಗೆ
ನೇಮದಿ ಕೊಡಲಿಯ ಪಿಡಿದವಗೆ ||
ರಾಮನಾಗಿ ದಶಶಿರನನು ಕೊಂದ
ಸ್ವಾಮಿ ಶ್ರೀಕೃಷ್ಣಗಾರತಿಯೆತ್ತಿರೆ ||೨||

ಬತ್ತಲೆ ನಿಂತಗೆ ಬೌದ್ಧಾವತಾರಗೆ
ಉತ್ತಮ ಅಶ್ವವನೇರಿದಗೆ ||
ಭಕ್ತರ ಸಲಹುವ ಪುರಂದರವಿಠಲಗೆ
ಮುತ್ತೈದೆಯರಾರತಿಯೆತ್ತಿರೆ ||೩||

## ಪ್ರಾರ್ಥನೆ

### ೧೩೩

ರಾಗ — ಪೂರ್ವಿ ತಾಳ — ಆಟ

ಬಣ್ಣಿಸಲಳವೇ ನಿನ್ನ || ಪ ||
ಬಣ್ಣಿಸಲಳವಲ್ಲ ಭಕುತವತ್ಸಲದೇವ
ಪನ್ನಗಶಯನ ಪಾಲ್ಗಡಲೊಡೆಯನೆ ರಂಗ || ಅ.ಪ ||

ಅಸಮ ಪರಾಕ್ರಮಿ ತಮನೆಂಬ ದೈತ್ಯನು
ಶಶಿಧರನ ವರದಿ ಶಕ್ರಾದ್ಯರಿಗಳುಕದೆ
ಬಿಸಜಸಂಭವನ ಠಕ್ಕಿಸಿ ನಿಗಮವ ಕದ್ದು
ವಿಷಧಿಯೊಳಡಗಿರಲ್ ಒದಗಿಬಂದಮರರು
ವಸುಧೀಶ ಕಾಯಬೇಕೆಂದೆನಲವನ ಮ- ||
ರ್ದಿಸಿ ವೇದಾವಳಿಯ ತಂದು—ಮೆರೆದೆ ದಶ-
ದಿಸೆಯೊಳು ಬೊಮ್ಮಗಂದು—ವೇದವ ಕರು-
ಣಿಸಿದೆ ಕಂಜಾಕ್ಷ ಕೇಶವ ದಯಾಸಿಂಧು || ೧ ||

ಇಂದ್ರಾದಿ ಸಕಲ ದೇವತೆಗಳೆಲ್ಲರು ದೈತ್ಯ
ವೃಂದವೊಂದಾಗಿ ಮತ್ಸರವ ಮರೆದು ಕೂಡಿ
ಬಂದು ನೆರೆದು ಮುರಹರ ನಿನ್ನ ಮತದಿಂದ
ಮಂದರಾದ್ರಿಯ ಕಡೆಗೋಲ ಗೈಯ್ದು ತುಳ ಫ-
ಣೀಂದ್ರನ ತನು ನೇಣೆನಂದದಿ ಬಂಧಿಸಿ ||
ಸಿಂಧುಮಥಿಸುತಿರಲು—ಘನಾಚಲ-
ವಂದು ಮುಳುಗಿ ಪೋಗಲು—ಬೆನ್ನಾಂತು ಮು-
ಕುಂದ ನೆಗಪಿದೆ ಸುರರು ಜಯ ಜಯವೆನಲು || ೨ ||

ಖಳಶಿರೋಮಣಿ ಕನಕಾಕ್ಷನೆಂಬಸುರ ನಿ-
ನ್ನೊಳು ಸೆಣಸುವೆನೆಂಬ ಗರುವದಿಂದಲಿ ಬಹು
ಬಲದಿಂದುಪ್ಪಟನಾಗಿ ದಿವಿಜರನಂಜಿಸಿ
ಇಳೆಯ ಕದ್ದು ರಸಾತಳದೊಳಗಿರೆ ನಿನ್ನ

ಪೊಳೆವ ಕೋರೆಗಳಿಂದ ತಿವಿದು ರಕ್ಕಸನ ಅ ॥
ಪ್ಪಳಿಸಿ ಕೊಂದವನ ದಿಂಡು—ಗೆಡಹಿ ಮಹೀ-
ಲಲನೆಯೊಡನೆ ಕೈಕೊಂಡು—ಪಾಲಿಸಿದೆ ಪೂ—
ಮಳೆಗರೆದರು ಅಮರರು ನೆಲೆಗೊಂಡು ॥ ೩ ॥

ಹಗಲಿರುಳಳಿವಿಲ್ಲದಸುರ ಕಶಿಪು ತನ್ನ
ಮಗನ ಹರಿಯ ತೋರೆಂದಧಿಕ ಬಾಧಿಸುತಿರೆ
ಬಗಿದು ಕಂಬವನೊಡೆದಧಿಕ ರೋಷಾಗ್ನಿ ಕಾ-
ರ್ಬೊಗೆ ಸೂಸಿ ಗಗನಮಂಡಲ ಧಗ-ಧಗಧಗ
ಧಗಿಪ ಪ್ರಜ್ವಾಲೆಯನುಗುಳಿ ಹಿರಣ್ಯಕನ ಕೂ-
ರುಗುರಿಂದೊಡಲ ಸೀಳಿ—ಕರುಳಮಾಲೆ
ತೆಗೆದು ಕಂಠದಲಿ ತಾಳಿ—ಒಪ್ಪಿದೆ ನರ-
ಮೃಗರೂಪೀ ತ್ರಾಹಿಯೆನಲು ಶಶಿಮೌಳಿ ॥ ೪ ॥

ಕುಲಿಶಧರನ ಗೆದ್ದು ಕುವಲಯದೊಳು ಭುಜ-
ಬಲವಿಕ್ರಮದಲಿ ಸೌಭಾಗ್ಯದುನ್ನತಿಯಿಂದ
ಬಲಿ ವಾಜಿಮೇಧ ಗೆಯ್ಯಲು ವಟುವೇಷದಿಂ-
ದಿಳಿದು ತ್ರಿಪಾದ ಭೂಮಿಯ ದಾನವ ಬೇಡಿ
ಬಲುಹಮ್ಮ ಮುರಿಯಬೇಕೆಂದವನ ಶಿರಮೆಟ್ಟಿ ॥
ನೆಲನ ಈರಡಿಮಾಡಿದೆ-ಚರಣವಿಟ್ಟು
ಜಲಜಜಾಂಡವನೊಡೆದೆ-ಅಂಗುಷ್ಟದಿ-
ಸುಲಲಿತ ಸುಮನಸ ನದಿಯ ನೀ ಪಡೆದೆ ॥ ೫ ॥

ಪೊಡವಿಪತಿಗಳೊಳಗಧಿಕ ಕಾರ್ತವೀರ್ಯ
ಕಡುಧೀರ ದೇವ-ದೈತ್ಯರಿಗಂಜದವನ ಬೆಂ-
ಬಿಡದೆ ಸಂಗ್ರಾಮದೊಳಧಿಕ ಸಮರ್ಥನ
ಹೊಡೆದು ತೋಳ್ಗಳ ಕುಟ್ಟಿ ಕೆಡಹಿ ಆಗಸದೊಳು

ಮೃಡಮುಖ್ಯ ದೇವಸಂತತಿ ನೋಡೆ ಕ್ಷತ್ರಿಯರ
ಪಡೆಯನೆಲ್ಲವ ಸವರಿ—ಮಾತೆಯ ಶಿರ-
ಕಡಿದು ತತ್ಪತಿಗೆ ತೋರಿ—ಪಿಡಿದೆ ಗಂಡು-
ಗೊಡಲಿಯ ಕರದಿ ಬಲ್ಲಿದ ದನುಜಾರಿ ॥ ೬ ॥

ದಶರಥರಾಯ ಕೌಸಲ್ಯಾನಂದನನಾಗಿ
ಋಷಿ ವಿಶ್ವಾಮಿತ್ರನಧ್ವರವ ರಕ್ಷಿಸಿ ಘನ
ವಿಷಕಂಠಧನುವ ಖಂಡಿಸಿ ಜಾನಕಿಯ ತಂದು
ತ್ರಿಶಿರ ದೂಷಣ ಖರರಳಿದು ವಾಲಿಯನಂದು
ನಿಶಿತಾಸ್ತ್ರದಿಂದ ಸಂಹರಿಸಿ ಸಾಗರವ ಬಂ- ॥
ಧಿಸಿ ರಾವಣನ ಶಿರವ—ಕತ್ತರಿಸಿ ರಂ-
ಜಿಸುವ ಲಂಕಾಪುರವ—ವಿಭೀಷಣಗೆ
ವಸಿವ ಪಟ್ಟವ ಕಟ್ಟಿದೆಲೆ ದೇವಗುರುವ ॥ ೭ ॥

ದೇವಕಿ—ವಸುದೇವರಲ್ಲಿ ಜನಿಸಿ ಲೋಕ-
ಪಾವನಗೆಯ್ದು ಪನ್ನಗನ ಪೆಡೆಯ ಮೆಟ್ಟಿ
ಗೋವಳನಾಗಿ ಗೋವರ್ಧನ ಗಿರಿಯೆತ್ತಿ
ಮಾವ-ಮಲ್ಲರ ಕೊಂದು ಪಾರಿಜಾತವ ತಂದು
ಆ ವಿಪ್ರನಲಿ ಓದಿ ಪೋದಪತ್ಯವನಿತ್ತ ॥
ತಾವರೆದಳನೇತ್ರ—ತ್ರಿಭುವನ ಸಂ-
ಜೀವ ಪರಮಪವಿತ್ರ—ಶ್ರೀರುಕ್ಮಿಣಿ-
ದೇವಿ ಮನೋಹರ ಶುಭನೀಲಗಾತ್ರ ॥ ೮ ॥

ಸರಸಿಜಾಸನ ಭವ ಇಂದ್ರಾದಿಗಳುಕದೆ
ಮುರುಳ ದಾನವರಿರಲಂದು ಖೇಚರದೊಳು
ನಿರುಪಮ ನೀನೆ ಬಂದೊಂದು ರೂಪಗಳಿಂದ
ವರಗೆ ಸಹಾಯವಾಗಿ ದನುಜಸ್ತ್ರೀಯರ ವ್ರತ

ಪರಿಹಾರ ಮಾಡಿ ಆಯಾಸವಿಲ್ಲದಲೆ ಮು- ||
ಪ್ಪುರವ ಅಳಿದ ನಿಸ್ಸೀಮ—ಅಖಿಳಶ್ರುತಿ-
ಯರಸೆ ಕಾಣದ ಮಹಿಮ—ಹೇ ಸಾಮಜ-
ವರದ ಸುಪರ್ಣವಾಹನ ಸಾರ್ವಭೌಮ || ೯ ||

ಮಣಿಮಯಯುಕ್ತ ಆಭರಣದಿಂದೆಸೆವ ಲ-
ಕ್ಷಣವುಳ್ಳ ದಿವ್ಯವಾಜಿಯನೇರಿ ಧುರದೊಳು
ಕುಣಿವ ಮಿಾಸೆಯು ಘೋರವದನ ಖಡ್ಗ ಚರ್ಮ-
ವನು ಕೊಂಡು ದ್ರುಹಿಣಾದಿಗಳು ಪೊಗಳಲು ಕಲಿ-
ದನುಜರೆಲ್ಲರನೊಂದೆ ದಿನದೊಳು ಸವರಿದ ||
ರಣಭಯಂಕರ ಪ್ರಚಂಡ—ಮೂಜಗದೊಳು-
ಎಣೆಗಾಣೆನೆಲೊ ಉದ್ದಂಡ—ಕಲ್ಕಿ—ದಿನ-
ಮಣಿಕೋಟಿತೇಜ ದುಷ್ಕೃತಕುಲ ಖಂಡ || ೧೦ ||

ಚಿತ್ತಜನಯ್ಯನೆ ಚಿನ್ಮಯಗಾತ್ರನೆ
ಉತ್ತಮ ದರ ಚಕ್ರ ಗದೆ ಜಲಜಾಂಕನೆ
ಸುತ್ತಲು ಅರಸಲು ನಿನಗೆಲ್ಲಿ ಸರಿಕಾಣೆ
ಹೊತ್ತು ಹೊತ್ತಿಗಾದಿತ್ಯರ ಬಿನ್ನಪಕೇಳಿ
ಹತ್ತವತಾರದಿ ಅಸುರರ ಮಡುಹಿದೆ ||
ನಿತ್ಯ ತ್ರಿಸ್ಥಾನವಾಸ—ವಾಗಿಹ ಸರ್ವ-
ಭಕ್ತರ ಮನೋವಿಲಾಸ—ಸಲಹೋ ಪುರು-
ಷೋತ್ತಮ ಪುರಂದರವಿಠಲ ತಿರುಮಲೇಶ || ೧೧ ||

## ೧೩೪

ರಾಗ—ನಾಟ ತಾಳ—ಆದಿ

ಮಹದಾದಿದೇವ ನಮೋ ಮಹಾಮಹಿಮನೆ ನಮೋ
ಪ್ರಹಲ್ಲಾದವರದ ಅಹೋಬಲ ನರಸಿಂಹ ॥ ಪ ॥

ತರಣಿಗುಬ್ಬಸವಾಗೆ ತಾರಾಪತಿಯು ನಡುಗೆ
ಸುರರು ಕಂಗೆಟ್ಟೋಡೆ ನಭವ ಬಿಟ್ಟು ॥
ತರುಗಿರಿಗಳಲ್ಲಾಡೆ ಶರಧಿಗಳು ಕುದಿದುಕ್ಕೆ
ಉರಿಯನುಗುಳುತ ಉದ್ಭವಿಸಿದೆಯೊ ನರಸಿಂಹ ॥ ೧ ॥

ಸಿಡಿಲಂತೆ ಗರ್ಜಿಸುತೆ ಕುಡಿಯ ನಾಲಗೆ ಚಾಚಿ
ಅಡಿಗಡಿಗೆ [1]ಹುಂಕರಿಸಿ ಕಡುಕೋಪದಿಂದ ॥
ಮುಡಿವಿಡಿದು ರಕ್ಕಸನ ಕೆಡವಿ ನಖದಿಂದೊತ್ತಿ
[2]ಬಿಡದೊಡಲ ಬಗೆದ ಕಡುಗಲಿ ನಾರಸಿಂಹ ॥ ೨ ॥

ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ
ಸುರರು ಅಂಬರದಿ ಪೂಮಳೆಗರೆಯಲು ॥
ಸಿರಿಸಹಿತ ಗರುಡಾದ್ರಿಯಲಿ ನಿಂತು ಭಕುತರನು
ಕರುಣಿಸುವ ಪುರಂದರವಿಠಲ ನಾರಸಿಂಹ ॥ ೩ ॥

## ೧೩೫

ರಾಗ—ಕಲ್ಯಾಣಿ ತಾಳ—ಅಟ

[3]ನೀನಲ್ಲದೆನಗಾರಿಲ್ಲ ಗೋವಿಂದ–
ನೀನಲ್ಲದೆ ಇಹಪರವಿಲ್ಲ ॥ ಪ ॥

---

೧) ಲಂಘಿಸುತೆ (ಬಸುನುತ) ೨) ಅ. ನಿಡುಗವುಳ

೩) ಈ ೧೩೫ನೆಯ ಪದ್ಯದ ತಾಳೆಗರಿಯಲ್ಲಿಯ ಪಾಠ. ನಮಗೆ ದೊರೆತ ಇತರ ಪುಸ್ತಕಗಳಲ್ಲಿ 'ಹಿಂದಿಲ್ಲ, ರಾಗ ತಾಳವಿಲ್ಲ' ಎಂಬ ಪಲ್ಲವಿಯಿಂದ ಆರಂಭವಾಗುವುದು. ನುಡಿಗಳು ವಿಕಾರಗೊಂಡಿವೆ.

ಪರರ ಬೇಡಿ ಪಂಥವಾಡಿ ಹೋಯಿತಲ್ಲ
ನರರ ಕೊಂಡಾಡಿ ನಾಲಗೆ ಬರಡಾಯಿತಲ್ಲ ||
ಪರವಿಲ್ಲ ಇಹವಿಲ್ಲ ನರಜನ್ಮ ಸ್ಥಿರವಲ್ಲ
ನರಗೆ ಪಾಮರಗೆ ಪಾತಕದ ಪಂಜರಗೆ || ೧ ||

ತನುವು ತನ್ನದಲ್ಲ ತನ್ನವರು ತನಗಿಲ್ಲ
ಧನಧಾನ್ಯ ಸಂಪತ್ತು ಅವಗಿರದು ||
ತನುವು ಹೋಗಿ ಇನ್ನು ಮಣ್ಣು ಕೂಡುವಾಗ
ತನುಮನಕ್ಕೆ—ಇನ್ನಾರಯ್ಯ ಸ್ವಾಮಿ || ೨ ||

ಮಾತಾಪಿತರು ಗೋತ್ರಜರು ಮೊದಲಾಗಿ
ಪ್ರೀತಿಯಿಂದ ಬಹಳ ಸತಿಸುತರು ||
ಕೀರ್ತಿಗೆ ಅವರು—ಸ್ವಾರ್ಥಕೆ ಇವರು ಸಂ-
ಗಾತಿಗಿನ್ನಾರಯ್ಯ ಪುರಂದರವಿಠಲ || ೩ ||

## ೧೩೬

ರಾಗ—ತೋಡಿ ತಾಳ—ಅಟ

*ನೀನೇ ಅನಾಥ ಬಂಧು–ಕಾರುಣ್ಯಸಿಂಧು–
ನೀನೇ ಅನಾಥ ಬಂಧು || ಪ ||

ಪತಿಗಳೈವರಿದ್ದರೇನು ಸತಿಯ [೧]ಸಮಯಕೊದಗಲಿಲ್ಲ ||
ಗತಿ ನೀನೆಂದು ಮುಕುಂದನೆ ನೆನೆದರೆ
ಅತಿ ಚಮತ್ಕಾರದಿಂದೊದಗಿದೆ ಕೃಷ್ಣ || ೧ ||

---

* ಚ– ೧೭೮೦ನೆಯ ವರ್ಷದ ತಾಳೆಗರಿಯಲ್ಲಿ ಇದ್ದ ಪಾಠ.

(೧) ಭಂಗ (ಬಹುಮತ)

ಮದಗಜವೆಲ್ಲ [೧]ಇದ್ದರೇನು
ಅದರ [೨]ಸಮಯಕ್ಕೊದಗಲಿಲ್ಲ ||
ಮದನನಯ್ಯ ಮಧುಸೂದನನೆಂದರೆ
ಒದಗಿದೆಯೋ ತಡಮಾಡದೆ ಕೃಷ್ಣ || ೨ ||

ಶಿಲೆಯ ಕಾಯ—ಕುಲಕ್ಕೆ ತಂದೆ
[೩]ಬಲಿಯೆನ್ನದೆ ಸತ್ಪದವಿಯನಿತ್ತೆ ||
ಇಳೆಯೊಳು ನಿನ್ನಯ ದಾಸರ ಸಲಹುವ
ಚೆಲುವ ಮೂರುತಿ ಶ್ರೀಪುರಂದರವಿಠಲ || ೩ ||

## ೧೩೭

ರಾಗ—ಕಲ್ಯಾಣಿ ತಾಳ—ಅದಿ

ದಾರಿ ಯಾವುದಯ್ಯ ವೈಕುಂಠಕೆ-
ದಾರಿ ತೋರಿಸಯ್ಯ || ಪ ||

ದಾರಿ ಯಾವುದಯ್ಯ ದಾರಿ ತೋರಿಸು ಆ-
ಧಾರ ಮೂರುತಿ ನಿನ್ನ ಪಾದ ಸೇರುವುದಕ್ಕೆ || ಅ.ಪ ||

ಬಲುಭವದನುಭವದಿ-ಕತ್ತಲೆಯೊಳು-
ಬಲು ಅಂಜುತೆ ನಡುಗಿ ||
ಬಳಲುತ ತಿರುಗಿದೆ ದಾರಿಯು ಕಾಣದೆ
ಹೊಳೆಯುವ ದಾರಿಯ ತೋರೊ ನಾರಾಯಣ || ೧ ||

ಪಾಪವ ಪೂರ್ವದಲಿ-ಮಾಡಿದುದಕೆ-
ಲೇಪವಾಗಿರೆ ಕರ್ಮ ||
ಈಪರಿಯಿಂದಲಿ ನಿನ್ನ ನೆನೆಸಿಕೊಂಬೆ
ಶ್ರೀಪತಿ ಸಲಹೆನ್ನ ಭೂಪನಾರಾಯಣ || ೨ ||

---

೧) ಕೂಡಿದರೇನು (ಬಹುಮತ) ೨) ಸೇಳೆ (ಬಹುಮತ)
೩) ಬಲಿಗೊಲಿದು (ಬಹುಮತ)

ಇನ್ನು ನಾ ಜನಿಸಲಾರೆ—ಭೂಮಿಯ ಮೇಲೆ
ನಿನ್ನ ದಾಸನಾದೆನೊ ||
ಪನ್ನಗಶಯನ ಶ್ರೀಪುರಂದರವಿಠಲ
ಇನ್ನು ಪುಟ್ಟಿಸದಿರೊ ಎನ್ನ ನಾರಾಯಣ || ೩ ||

## ೧೩೮

ರಾಗ—ಕೇದಾರಗೌಳ ತಾಳ— ಅಟ

ನಿನಗಾರು ಸರಿಯಿಲ್ಲ ಎನಗನ್ಯಗತಿಯಿಲ್ಲ
ಎನಗೂ ನಿನಗೂ ನ್ಯಾಯ ಹೇಳುವರಿಲ್ಲ || ಪ ||

ಒಂದೇ ಗೂಡಿನೊಳು ಒಂದು ಕ್ಷಣವಗಲದೆ
ಎಂದೆಂದು ನಿನ್ನ ಪಾದ ಪೊಂದಿರುವೆ ||
ಬಂದ ವಿಷಯಂಗಳಿಗೆ ಎನ್ನನೊಪ್ಪಿಸಿಕೊಟ್ಟು
ಅಂಧಕನಂತೆ ನೀ ನೋಡುವುದುಚಿತವೆ || ೧ ||

ಪರಸತಿಗಳುಪಿರೆ ಪರಮ ಪಾಪಿಷ್ಠನೆಂದು
ಪರಿಪರಿ ನರಕವ ನೇಮಿಸುವೆ ||
ಪರಸತಿಯರ ಒಲುಮೆ ನಿನಗೆ ಒಪ್ಪಿತು ದೇವ
ದೊರೆತನಕಂಜಿ ನಾ ಶರಣೆಂದೆನಲ್ಲದೆ || ೨ ||

ನಿನ್ನಾಜ್ಞೆಯುವ ನಾನು ನಿನ್ನ ಪ್ರೇರಣೆಯಿಂದ
ಅನಂತವಿಧದ ಕರ್ಮವ ಮಾಡಿದೆ ||
ಎನ್ನಪರಾಧಗಳೆಣಿಸಲಾಗದು ದೇವ
ಪನ್ನಗಶಯನ ಶ್ರೀಪುರಂದರವಿಠಲ || ೩ ||

## ೧೩೯

ರಾಗ—ತೋಡಿ ತಾಳ—ಆದಿ

ನೀನೇ ದಯಾಸಂಪನ್ನನೊ—ಕಾವೇರಿರಂಗ—
ನೀನೇ ಬ್ರಹ್ಮಾದಿವಂದ್ಯನೊ ‖ ಪ ‖

ಬಂಧುಗಳೆಲ್ಲರ ಮುಂದಾ ದ್ರುಪದನ
ನಂದನೆಯೆಳತಂದು ಸೀರೆಯ ಸೆಳೆಯಲು ‖
ನೊಂದು ಕೃಷ್ಣ ಸಲಹೆಂದರೆ ಅಕ್ಷಯ
ಕುಂದದಲಿತ್ತ ಮುಕುಂದನು ನೀನೇ ‖ ೧ ‖

ನಿಂದಿತ ಕರ್ಮಗಳೊಂದು ಬಿಡದೆ ಬೇ-
ಕೆಂದು ಮಾಡಿದನಂದಜಮಿಳನು ‖
ಕಂದಗೆ ನಾರಗನೆಂದರೆ ಮುಕುತಿಯ
ಕುಂದದಲಿತ್ತ ಮುಕುಂದನು ನೀನೇ ‖ ೨ ‖

ಮತ್ತಗಜವನೆಗಳೊತ್ತಿ ಪಿಡಿಯೆ ಬಲು
ಒತ್ತಿ ರಭಸದಿ ಬಿತ್ತರಿಸಲು ಗುಣ ‖
ಭೃತ್ಯವರದ ಶ್ರೀಪುರಂದರವಿಠಲ
ಹಸ್ತಿಗೊಲಿದ ಪರವಸ್ತುವು ನೀನೇ ‖ ೩ ‖

## ೧೪೦

ರಾಗ—ಕಾಂಬೋದಿ ತಾಳ—ಝಂಪ

ವಿಧಿ-ನಿಷೇಧವು ನಿನ್ನವರಿಗೆಂತೊ ಹರಿಯೇ ‖ ಪ ‖

ವಿಧಿ ನಿನ್ನ ಸ್ಮರಣೆಯು ನಿಷೇಧ ವಿಸ್ಮೃತಿಯೆಂಬ
ವಿಧಿಯನೊಂದನೆ ಬಲ್ಲರಲ್ಲದೇ ಮತ್ತೊಂದು ‖ ಅ.ಪ ‖

ಮಿಂದವರ್ಗೆ ಗಂಗಾದಿ ಪುಣ್ಯತೀರ್ಥಂಗಳು
ಬಂದವರ್ಗೆ ಪುಣ್ಯಕಾಲ ಸಾಧುಜನರು ‖
ನಿಂದವರ್ಗೆ ಗಯೆ ವಾರಣಾಸಿ ಕುರುಕ್ಷೇತ್ರ
ಸಂದೇಹವೇಕೆ ಮನವಾನೆ ಪೋಪುದೆ ಬೀದಿ ‖ ೧ ‖

ಕಂಡಕಂಡಲ್ಲಿ ವಿಶ್ವಾದಿ ಮೂರುತಿಯು ಭೂ-
ಮಂಡಲದಿ ಶಯನವೆ ನಮಸ್ಕಾರವು ||
ತಂಡತಂಡದ ಕ್ರಿಯೆಗಳೆಲ್ಲ ನಿನ್ನಯ ಪೂಜೆ
ಮಂಡೆ ಬಾಗಿಸಿ ನಮಿಪ ಭಾಗವತಜನಕೆ || ೨ ||

ನಡೆದ ನಡಿಗೆಯು ಎಲ್ಲ ಲಕ್ಷ ಪ್ರದಕ್ಷಿಣೆಯು
ನುಡಿವ ನುಡಿಗಳು ಎಲ್ಲ ಗಾಯತ್ರಿ ಮಂತ್ರ ||
ಕೊಡುವುದೆಲ್ಲವು ಅಗ್ನಿಮುಖದಲ್ಲಿ ಆಹುತಿ
ದೃಢಭಕ್ತರೇನ ಮಾಡಿದರದೇ ಮರ್ಯಾದೆ || ೩ ||

ನಷ್ಟವಾದುದು ಎಲ್ಲ ಸಂಚಿತದ ಕರ್ಮವು
ಮುಟ್ಟಲಂಜುವುವೆಲ್ಲ ಆಗಾಮಿಕರ್ಮ ||
ಸ್ಪಷ್ಟವಾಗಿರುವ ಪ್ರಾರಬ್ಧಕರ್ಮವ ಮೀರಿ
ಸೆಟ್ಟಿಮೆಟ್ಟಿದ್ದೆ ಪಟ್ಟಣವೆಂಬುದೇ ನಿಜವು || ೪ ||

ಎಲ್ಲಿ ಕುಳ್ಳಿರಲಲ್ಲಿ ಪ್ರಾಯೋಪವೇಶ ಮ-
ತ್ತೆಲ್ಲಿ ನೋಡಲು ಮನವು ಅಲ್ಲಿಯೆ ಸಮಾಧಿ ||
ಎಲ್ಲೆಲ್ಲಿಯೂ ಪುರಂದರವಿಠಲರಾಯನ
ಬಲ್ಲವರಿಗೆಲ್ಲಿಹುದು ಪಾಪಪುಣ್ಯದ ಲೇಪ || ೫ ||

## ೧೪೧

ರಾಗ—ಸಾರಂಗ ತಾಳ— ಝಂಪೆ

ಆವನಾವನ ಕಾಯ್ವ ಅವನಿಯೊಳಗೆ
ದೇವ-ದೇವೇಶ ಶ್ರೀಹರಿಯಲ್ಲದೆ || ಪ ||

ಆವ ತಂದೆಯು ಸಲಹಿದನು ಪ್ರಹಲ್ಲಾದನ
ಆವ ತಾಯಿ ಸಲಹಿದಳು ಧ್ರುವರಾಯನ ||
ಆವ ಸುತ ಸಲಹಿದನು ಆ ಉಗ್ರಸೇನನ
ಜೀವರಿಗೆ ಪೋಷಕನು ಹರಿಯಲ್ಲದೆ || ೧ ||

ಆವ ಬಂಧುವು ಸಲಹಿದನು ಗಜರಾಜನನು
ಆವ ಪತಿ ಕಾಯ್ದ ದ್ರೌಪದಿಯ ಮಾನ ||
ಆವ ಸೋದರರು ಸಲಹಿದರು ವಿಭೀಷಣನ
ಜೀವರಿಗೆ ದಾತೃ ಶ್ರೀಹರಿಯಲ್ಲದೆ || ೨ ||

ಆವನಾಧಾರ ಅಡವಿಯೊಳಿಪ್ಪ ಮೃಗಗಳಿಗೆ
ಆವ ರಕ್ಷಕ ಪಕ್ಷಿಜಾತಿಗಳಿಗೆ ||
ಆವ ಪೋಷಕನು ಗರ್ಭದಲಿಪ್ಪ ಶಿಶುಗಳಿಗೆ
ದೇವ ಶ್ರೀಪುರಂದರವಿಠಲನಲ್ಲದಲೆ || ೩ ||

## ೧೪೨

ರಾಗ—ಕಲ್ಯಾಣಿ ತಾಳ—ತ್ರಿಪುಟ

ಅಂದಿಂದ ನಾ ನಿನ್ನ ನೆರೆನಂಬಿದೆನೊ ಕೃಷ್ಣ
ತಂದೆ ಗೋವಿಂದ ಮುಕುಂದ ನಂದನ ಕಂದ || ಪ ||

ಬಲವಂತ ಉತ್ತಾನಪಾದರಾಯನ ಕಂದ
ಮಲತಾಯಿ ನೂಕಲು ಅಡವಿಯೊಳು ||
ಜಲಜಾಕ್ಷ ನಿನ್ನ ಧ್ಯಾನದಿ ತಪವಿರಲಾಗಿ
ಒಲಿದು ಧ್ರುವಗೆ ಪಟ್ಟಕಟ್ಟಿದ್ದ ಕೇಳಿ || ೧ ||

ನಕ್ರಂಗೆ ಗಜರಾಜ ಸಿಕ್ಕಿ ಸರಸಿಯೊಳು
ದುಕ್ಖದಿ ಶ್ರೀಹರಿ ಸಲಹೆನ್ನಲು ||
ಚಕ್ರದಿ ನೆಗಳ ಕಂಠವ ತರಿದು ಭಕ್ತನ
ಅಕ್ಕಸ ಪರಿದಾದಿಮೂಲನೆಂಬುದ ಕೇಳಿ || ೨ ||

ದ್ರುಪದನ ಸುತೆಯು ದುಃಶಾಸನ ಸಭೆಯೊಳು
ಕಪಟದಿ ಸೀರೆಯ ಸೆಳೆಯುತಿರೆ ||
ಸುಪರ್ಣವಾಹನ ಕೃಷ್ಣ ಸಲಹೆಂದಬಲೆಯನು
ಅಪಮಾನದಿಂದ ಕಾಯ್ದು ಹರಿಯೆಂಬುವನು ಕೇಳಿ || ೩ ||

ಹರಿನಾರಾಯಣನೆಂದು ಪ್ರಹಲ್ಲಾದ ಬರೆಯಲು
ದುರುಳ ದಾನವ ಅವನಿಗೆ ಮುನಿದು ||
ಕರೆ ನಿನ್ನ ಒಡೆಯನ ಎಂದು ಗರ್ಜಿಸೆ ನರ-
ಹರಿ ಬಂದು ಒಡನೆಯೆ ಕಾಯ್ದನೆಂಬುದ ಕೇಳಿ || ೪ ||

ಅಂಬರೀಷಗೆ ದೂರ್ವಾಸ ಶಾಪವ ಕೊಡೆ
ಅಂಬುಜಲೋಚನ ಚಕ್ರದಿಂದ ||
ಬೆಂಬತ್ತಿ ಮುನಿಯ ಶಾಪವ ಪರಿಹರಿಸಿದ
ಕಂಬುಚಕ್ರಧರ ಹರಿಯೆಂಬುದ ಕೇಳಿ || ೫ ||

ಛಲಬೇಡ ರಾಮನ ಲಲನೆಯ ಬಿಡು ಎಂದು
ತಲೆಹತ್ತರವಗೆ ಪೇಳಲು ತಮ್ಮನ ||
ಬಳಲಿಸಿ ಹೊರಡಿಸೆ ಅವ ನಿನ್ನ ಮೊರೆಹೊಗಲು
ಸಲೆ ವಿಭೀಷಣಗೆ ಲಂಕೆಯನಿತ್ತುದನು ಕೇಳಿ || ೬ ||

ಸುರ-ನರ-ನಾಗಲೋಕದ ಭಕ್ತಜನರನು
ಪೊರೆಯಲೋಸುಗ ವೈಕುಂಠದಿಂದ ||
ಸಿರಿಸಹಿತದಿ ಬಂದು ಶೇಷಾಚಲದಿ ನಿಂತ
ಪುರಂದರವಿಠಲ ನಿನ್ನಯ ಚರಣವ ಕಂಡು || ೭ ||

## ೧೪೩

ರಾಗ—ಶಂಕರಾಭರಣ ತಾಳ—ಅಟ

ಮರೆಯದೆ ಮನದಲಿ ಸಿರಿವರನ ಚರಣವನು
ಸ್ಮರಿಸಿದಂಥವರನ್ನು ನರರೆನ್ನಬಹುದೇ ? || ಪ ||

ಮುರಹರನಿಗೆರಗುವ ಶಿರವು ದ್ವಾರಕಾಪುರವು
ಹರಿಕಥೆ ಕೇಳುವ ಕರ್ಣ ಗೋಕರ್ಣವು ||
ಬಿರುದು ಪೊಗಳುವ ಜಿಹ್ವೆ ಸ್ಥಿರದಿ ಕ್ಷೀರಾರ್ಣವ
ವರದನ ಪೂಜಿಪ ಕರವು ರಾಮೇಶ್ವರವು || ೧ ||

ಸೃಷ್ಟೀಶನಿರ್ಮಾಲ್ಯ ಗೃಹಣ ನಾಸಿಕ ಕಾಶಿ
ಕೃಷ್ಣನ ನೋಡುವ ದೃಷ್ಟಿ ಶ್ರೀಮುಷ್ಣವು ||
ಅಷ್ಟಮದಗಳ ಜರೆದ ಮುಖ ಮಥುರಾಪುರ
ವಿಷ್ಣುವನು ಪಾಡುವ ಕಂಠ ಭೂವೈಕುಂಠ ||೨||

ಪರಕೆ ನಡೆಸುವ ಜಂಘೆ ಹರಿವ ಗಂಗೆಯು ಈ
ಪರಿಯಲೊಪ್ಪುವ ಅಂಗ ಶ್ರೀರಂಗವು ||
ಧರೆಯೊಳು ಪುರಂದರವಿಟ್ಠಲರಾಯನ
ಪರಮ ಭಾಗವತರ ಉದರವೆ ಬದರಿ ||೩||

## ೧೪೪

ರಾಗ—ಶಂಕರಾಭರಣ ತಾಳ- ಆದಿ

ಸಕಲವೆಲ್ಲವು ಹರಿಸೇವೆಯೆನ್ನಿ
ರುಕುಮಿಣಿಯರಮಣ ವಿಟ್ಠಲನಲ್ಲದಿಲ್ಲವೆನ್ನಿ ||ಪ||

ನುಡಿಗಳೆಲ್ಲವು ನಾರಾಯಣನ ಕೀರ್ತನೆಯೆನ್ನಿ
ನಡೆವುದೆಲ್ಲವು ಹರಿಯಾತ್ರೆಯೆನ್ನಿ ||
ಕೊಡುವುದೆಲ್ಲವು ಕಾಮಜನಕಗರ್ಪಿತವೆನ್ನಿ
ಎಡೆಯ ಅನ್ನವು ಶ್ರೀಹರಿಯ ಪ್ರಸಾದವೆನ್ನಿ ||೧||

ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಪುಡೆಯೆನ್ನಿ
ಕುಸುಮ ಪರಿಮಳವು ಕಂಜನಾಭಗೆನ್ನಿ ||
ಎಸೆವಾಭರಣವು ಯಶೋದೆನಂದನಗೆನ್ನಿ
ಶಶಿಮುಖಿಯರ ಕೂಟ ಸೊಬಗು ಗೋವಳಗೆನ್ನಿ ||೨||

ಆಟಪಾಟಗಳೆಲ್ಲ ಅಂತರ್ಯಾಮಿಗೆನ್ನಿ
ನೋಟ ಬೇಟಗಳೆಲ್ಲ ನಾಟಕಧಾರಿಗೆನ್ನಿ ||
ಊಟದ ವಸ್ತುಗಳೆಲ್ಲ ಕೈಟಭಮರ್ದನಗೆನ್ನಿ
ಕೋಟಲೆ ಸಂಸಾರ ಕಪಟನಾಟಕಗೆನ್ನಿ ||೩||

ನಿದ್ರೆಜಾಗರವು ಸಮುದ್ರಶಯನಗೆನ್ನಿ
ಭದ್ರಗಜನಿಧಿ ವರದಗೆನ್ನಿ ||
ರೌದ್ರದಾರಿದ್ರ್ಯವು ರಾಘವನ ಮಾಯೆಯೆನ್ನಿ ಶ್ರೀ-
ಮುದ್ರೆ ಧರಿಸಿದವ ಹರಿದಾಸನೆನ್ನಿ ||೪||

ಅಣು-ರೇಣು ತೃಣ-ಕಾಷ್ಠ ಪರಿಪೂರ್ಣನಹುದೆನ್ನಿ
ಎಣಿಸಬಾರದನಂತಮಹಿಮನೆನ್ನಿ ||
ಸೆಣಸುವ ರಕ್ಕಸರ ಶಿರವ ಚಂಡಾಡುವ
[1]ಪ್ರಣವಗೋಚರ ಪುರಂದರವಿಠಲರಾಯನೆನ್ನಿ ||೫||

೧೪೫

ರಾಗ—ಕಾಂಬೋದಿ ತಾಳ—ಝಂಪೆ

ಮರೆಯದಿರು ಶ್ರೀಹರಿಯನು ||ಪ||

ಮರೆಯದಿರು ಶ್ರೀಹರಿಯ ಮರಣಾತುರದಿ ಮಗನ
ಕರೆದವಗೆ ಸಾಯುಜ್ಯವಿತ್ತ ನಾರಾಯಣನ
ಸ್ಮರಣೆಯನು ಮಾಡುವರ ಚರಣ ಸೇವಕರಿಂಗೆ
ಪರಮ ಪದವೀವ ಹರಿಯ ||ಅ. ಪ||

ದೇವಕಿಯ ಬಂಧವನು ಪರಿದವನ ಪೂತಣೆಯ
ಜೀವರಸವೀಂಟಿದನ ಮಾವನನು ಮಡುಹಿದನ
ಪಾವನ ತರಂಗಿಣಿಯ ಪದನಖದಿ ಪಡೆದವನ
ಗೋವರ್ಧನೋದ್ಧಾರನ ||
ದಾವಾನಲನ ಪಿಡಿದು ನುಂಗಿದನ ಲೀಲೆಯಲಿ
ಗೋವತ್ಸ ಗೋಪಾಲ ರೂಪವನು ತಾಳ್ದವನ
ದೇವ ಮುನಿಮುಖ್ಯಸುರರಾರಾಧಿಸುವನ ಶ್ರೀ-
ಪಾದವನು ಭಜಿಸು ಮನವೇ ||೧||

---

೧) ಅ– ಆ. ಫಣಿಶಾಯಿ (ಶಯನ)

ಕಂಜಸಂಭವಪಿತನ ಕರುಣಾಪಯೋನಿಧಿಯು
ಕುಂಜರನ ನುಡಿ ಕೇಳಿ ಒದಗಿದನ ರಣದೊಳು ಧ-
ನಂಜಯನ ಜೀವವಂ ಕೃಪೆಯಿಂದ ಕಾಯ್ದವನ
ಆಂಜನೇಯನನಾಳ್ದನ ||

ರಂಜಿಸುವ ಕೌಸ್ತುಭವಿಭೂಷಣನ ಜಲಧಿಯಲಿ
ಸಂಜಿನೊಡೆಯನ ಮೇಲೆ ಮಲಗಿದನ ತಮದೊಳಗೆ-ಪ-
ರಂಜ್ಯೋತಿಮಯನಾಗಿ ಬೆಳಗುವನ ಶ್ರೀಚರಣ
ಕಂಜವಂ ಭಜಿಸು ಮನವೇ || ೨ ||

ವಾರಿಧಿಯೊಳಾಡಿದನ ವರಗಿರಿಯ ತಾಳಿದನ
ಧಾರಿಣಿಯ ತಂದವನ ದೈತ್ಯನನು ಕೊಂದವನ
ಮೂರಡಿಯನಳೆದವನ ಮೊನೆಗೊಡಲಿ ಪಿಡಿದವನ
ನೀರಧಿಯ ಬಂಧಿಸಿದನ ||

ದ್ವಾರಕೆಯನಾಳ್ದವನ ತ್ರಿಪುರಗಳ ಜಗುಳ್ದವನ
ಚಾರುಹಯವೇರಿದನ ಸಕಲ ಸುಜನರ ಪೊರೆವ
ಧೀರ ಪುರಂದರವಿಟ್ಠಲನ ಚರಣಕಮಲವನು
ನಂಬಿ ನೀ ಭಜಿಸು ಮನವೇ || ೩ ||

### ೧೪೬

ರಾಗ—ಆನಂದಭೈರವಿ ತಾಳ—ಆದಿ

ಸಾಮಾನ್ಯವಲ್ಲ ಶ್ರೀಹರಿಸೇವೆ
ಪಾಮರ ಜನರಿಗೆ || ಪ ||

ಸಾಮಜವರದನ ಪ್ರೇಮದಿ ಸೇವ್ಯವು
ತಾಮಸಬುದ್ಧಿಯು ತಾ ತ್ಯಜಿಸದೆ || ಅ. ಪ ||

ಅಂತರ ಮಲಿನವಳಿಯಲುಬೇಕು—ಸಂತತಶ್ರವಣದಿ ಶ್ರೀ-
ಕಾಂತನ ಚರಿತವ ಕೇಳಲು ಬೇಕು—ಸಂತಸದಿರಬೇಕು ॥
ಸಂತಜನರ ಗುಣ ಸಂತತ ಮನದಿ ನಿ-
ರಂತರವಲಿ ತಾ ಚಿಂತಿಸಬೇಕು ॥ ೧ ॥

ಜ್ಞಾನ-ಕರ್ಮೇಂದ್ರಿಯಗಳ ನಿಗ್ರಹಿಸಿ—ಜ್ಞಾನವ ಸಂಗ್ರಹಿಸಿ
ಹಾನಿ-ವೃದ್ಧಿಗಳೆರಡನು ತಾ ಸಹಿಸಿ—ದೀನತೆಯನು ವಹಿಸಿ ॥
ಮಾನಾಪಮಾನ ಸಮಾನವೆಂದರಿದು ನಿ-
ಧಾನದಿ ಹರಿಗುಣ ಧ್ಯಾನವ ಮಾಳ್ಪುದು ॥ ೨ ॥

೧ಸರ್ವಾಂತರ್ಯಾಮಿ ಶ್ರೀಹರಿಯೆಂದು—ಸರ್ವೇಶ್ವರನೆಂದು—
ಸರ್ವರ ಧಣಿ ಸ್ವರಮಣನೆಂದು—ಸರ್ವಾನುಗನೆಂದು ॥
ಸರ್ವಮೂರುತಿ ಶ್ರೀಪುರಂದರವಿಠಲನ
ಸರ್ವದಾ ಧ್ಯಾನಿಸಿ ಗರ್ವವಳಿಯ ಬೇಕು ॥ ೩ ॥

## ೧೪೭

ರಾಗ—ಕಲ್ಯಾಣಿ ತಾಳ—ಅಟ

ಕೇಳನೋ ಹರಿ ತಾಳನೋ
ತಾಳ-ಮೇಳಗಳಿದ್ದು ಪ್ರೇಮವಿಲ್ಲದ ಗಾನ ॥ ಪ ॥

ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು
ಕೊಂಬು ಕೊಳಲ ಧ್ವನಿಸಾರವಿದ್ದು ॥
ತುಂಬುರು-ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಭಕದ ಕೂಗಾಟ ॥ ೧ ॥

೧) ಸರ್ವತ್ರ ಶ್ರೀಹರಿವ್ಯಾಪ್ತನೆಂದು (ಹರಿದಾಸ ಭಾರತಿ ೧೯೫೨ ಸಪ್ಟೆಂಬರ್).

ನಾನಾಬಗೆಯ ಭಾವ ರಾಗ ತಿಳಿದು ಸ್ವರ-
ಜ್ಞಾನ ಮನೋಧರ್ಮ ಜಾತಿಯಿದ್ದು ||
ದಾನವಾರಿಯ ದಿವ್ಯ ನಾಮರಹಿತವಾದ
ಹೀನ ಸಂಗೀತ ಸಾಹಿತ್ಯವ ಮನವಿತ್ತು ‖ ೨ ‖

ಅಡಿಗಡಿಗಾನಂದಬಾಷ್ಪ ಪುಳಕದಿಂದ
ನುಡಿನುಡಿಗೂ ಶ್ರೀಹರಿಯೆನ್ನುತ ||
ದೃಢಭಕ್ತರನು ಕೂಡಿ ಹರಿಕೀರ್ತನೆಯ ಪಾಡಿ
ಕಡೆಗೆ ಪುರಂದರವಿಠಲನೆಂದರೆ ಕೇಳ್ವ ‖ ೩ ‖

## ೧೪೮

### ಉಗಾಭೋಗ

೧

ಕ್ಷೀರಸಾಗರಕೆ ಶ್ರೀರಮಣ ಬಂದಂತೆ
ಪ್ರಹ್ಲಾದನಿಗೊಲಿದು ನರಸಿಂಹ ಬಂದಂತೆ
ಭಗೀರಥನ ಮನೆಗೆ ಶ್ರೀಗಂಗೆ ಬಂದಂತೆ
ಮುಚುಕುಂದನ ಮನೆಗೆ ಮುಕ್ಕುಂದ ಬಂದಂತೆ
ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ
ಲಕ್ಷ್ಮೀಕಾಂತ ಪುರಂದರವಿಠಲ ಬರಲು
ನನ್ನ ನಾಲಗೆ ತುದಿಯಲಿ ಗಾಯನ ಮಾಡುತ ಧನ್ಯನಾದೆ.

೨

ಹರಿಕಥಾಶ್ರವಣಕ್ಕೆ ಮನವಿಟ್ಟ ಪ್ರೌಢ
ಅರುವತ್ತು ಗಳಿಗೆಗಳ ವ್ಯರ್ಥ ಹೋಗಾದ
ಪರಮ ಪದವಿಗೆ ಐದುವನವನೆ ಗಡ
ನರಕದ ಬಟ್ಟೆ ದೂರವಲೊಮ್ಮೆ ನೋಡ
ಪುರಂದರವಿಠಲನಂಘ್ರಿ ಗಾಢ-
ತರದಲಪ್ಪುವ ಮೈಮರೆದು ದಾತನ.

೩

ಹರಿನಾಮ ಕೀರ್ತನೆಯ ಭಕುತಿಯಿಂ ಕೇಳ್ವ
ಚಿರಸ್ವಭಾವದಲಿ ಕಣ್ಣೊರತೆಯು ತಾಳ್ವ
ಹರಿಯಂತೆ ಕೂಗಿ ಸುಜನರೊಳು ಬಾಳ್ವ
ದುರಿತ ಗಜಗಳ ಮಂಡೆಯನೇರಿ ಸೀಳ್ವ
ಹರುಷಾಮೃತಾಬ್ಧಿಯೊಳು ಇಳಿಮುಳಿಗೇಳ್ವ
ಪುರಂದರವಿಠಲೇಶನ ಹೊಂದಿ ತಾ ಬಾಳ್ವ.

೪

ನೀನೆ ಕರ್ತನು ಅಕರ್ತರು ಅಜಭವೇಂದ್ರಾದ್ಯಮರರು
ನೀನೆ ಸ್ವತಂತ್ರ ಅಸ್ವತಂತ್ರರವರು
ನೀನೆ ಸಾರಾತ್ಮಕನಾಗಿ ಸ್ವೀಕರಿಸುವವ
ಜ್ಞಾನ ನಿನ್ನಧೀನ ಕರ್ಮ ನಿನ್ನಧೀನ
ಅನಾದಿಕಾಲದಿ ಇರುವ ಜೀವರಿಗೆ.
ನೀನೆ ಸುಖವನೀವ ನೀನೆ ದುಃಖವನೀವ
ಅನಾದಿಗಳು ಜೀವ ಕರ್ಮ ಜ್ಞಾನ
ನಿನ್ನಧೀನವಯ್ಯ ಅನಾದಿಕರ್ಮ ನೀನೆ ಪುರಂದರವಿಠಲ
ನೀನೆ ಸಲಹೊ ನಿನ್ನಡಿ ಪೊಂದಿದವರ.

೫

ಸಂಕರ್ಷಣನೆನಿಸಿ ಶಂಕರನ ಅಂತರ್ಯಾಮಿಯಾಗಿ
ಸಂಹಾರಮಾಡುವೆ
ಸರಸಿಜೋದ್ಭವನಲ್ಲಿ ಅಂತರ್ಯಾಮಿ ವಾಸುದೇವನಾಗಿ
ಸೃಷ್ಟಿಯು ಮಾಡುವೆ
ಅನಿರುದ್ಧನೆನಿಸಿ ಪಾಲನೆ ಮಾಡುವೆ ಅನಾದಿ ಕಾಲದಿ
ನೀನು ನಿತ್ಯ ಬ್ರಹ್ಮರುದ್ರರೇ ಅವರು
ಬೊಮ್ಮಪುರಂದರವಿಠಲರೇಯ.

೬

ಕೆಟ್ಟೆನೆಂದೆನಲೇಕೆ ಕ್ಲೇಶ ಪಡುವುದೇಕೆ
ಹೊಟ್ಟೆಗೋಸುಗ ಪರರ ಕಷ್ಟಪಡಿಸಲೇಕೆ
ಬೆಟ್ಟದ ಮೇಲಿದ್ದರೇನು ವನದೊಳಿದ್ದರೇನು
ಹುಟ್ಟಿಸಿದ ದೇವರು ಹುಲ್ಲುಮೇಯಿಸುವನೆ
ಗಟ್ಟಿಯಾಗಿ ನೆರೆನಂಬು ಪುರಂದರವಿಠಲನ
ಸೃಷ್ಟಿಮಾಡಿದ ಬ್ರಹ್ಮ ಸ್ಥಿತಿಮಾಡಲರಿಯನೆ ?

೭

ದಾಸನಾದವನಿಗೆ ವೈಕುಂಠಲೋಕದಲ್ಲಿ ವಾಸ
ದಾಸನಾಗದವನೆಲ್ಲಿ ಪೋದರಾಭಾಸ
ದಾಸನೆಂದೆನಿಸಿದ ಭಾರತಿಯ ಗಂಡ
ಸತ್ಯಲೋಕವನಾಳ್ವ ಶೌಂಡ
ದಾಸರ ಹೃದಯದಿ ಮಿನುಗುವ ವಾಸವಾದಿವಂದ್ಯ ಶ್ರೀಶದ್ವಿ-
ಸಾಸಿರಂಬಕಶರಣ್ಯ ದಾಸರಿಗೊಲಿವ ಶ್ರೀಪುರಂದರವಿಠಲ.

೮

ತಪ್ಪುರಾಶಿಗಳ ಒಪ್ಪಿ ಕಾಯೊ ಕೃಪಾಳು
ಮುಪ್ಪುರವನಳಿದಂಥ ಮುನೀಂದ್ರವಂದ್ಯ
ಅಪ್ರಮೇಯನೆ ನಿನ್ನ ಅದ್ಭುತ ಮಹಿಮೆಗಳ
ಅಪ್ಪನಿಧಿಯಲ್ಲಿ ಪುಟ್ಟಿದವಳು ಬಲ್ಲಳೆ
ಕಪ್ಪುಮೇಘಕಾಂತಿಯೊಪ್ಪುವ ತಿಮ್ಮಪ್ಪ
ಅಪ್ರಾಕೃತರೂಪ ಪುರಂದರವಿಠಲ.

೯

ಹರಿ ನೀನೊಲಿವಂತೆ ಮಾಡು
ಒಲಿದರೆ ತಿರಿವಂತೆ ಮಾಡು
ತಿರಿದರೆ ಅನ್ನ ಸಿಗದಂತೆ ಮಾಡು
ಸಿಗಿದರೆ ಹೊಟ್ಟೆ ತುಂಬದಂತೆ ಮಾಡು

ಹೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆ ಮಾಡು
ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು
ಇಂಬು ದೊರೆತರೆ ನಿನ್ನ ಪಾದಾರವಿಂದದಲಿ
ಇಂಬುದೊರೋ ಪುರಂದರವಿಠಲ !

೧೦

ನಿನ್ನ ನಾಮಭಂಡಾರವ ಕದ್ದ ಕಳ್ಳ ನಾನು
ನಿನ್ನ ಭಕ್ತಿಯೆಂಬ ಸಂಕೋಲೆಯ ಹಾಕಿ
ನಿನ್ನ ದಾಸರ ಕೈಯ್ಗೆ ಎನ್ನ ಒಪ್ಪಿಸಿಕೊಟ್ಟು
ನಿನ್ನ ಮುದ್ರಿಕೆಯಿಂದ ಗಾಸಿ ಮಾಡಿಸೊ ಕೃಷ್ಣ
ನಿನ್ನ ವೈಕುಂಠದುರ್ಗದಲ್ಲಿ ಎನ್ನ ಸೆರೆಯಿಟ್ಟು
ಚೆನ್ನಾಗಿ ಸಲಹೊ ಶ್ರೀಪುರಂದರವಿಠಲ !

೧೪೯

## ಸುಳಾದಿ

### ಧ್ರುವತಾಳ

ಪಾದ ನಖ ಪರಿಪೂರ್ಣ ಜಾನು ಜಂಘೆ ಪರಿಪೂರ್ಣ ।
ಊರು ಕಟಿ ಪರಿಪೂರ್ಣ ಜಘನ ಪರಿಪೂರ್ಣ ।
ಉದರ ತ್ರಿವಳಿ ವಕ್ಷ ಬಾಹು ಪರಿಪೂರ್ಣ ।
ಪದುಮ ಗದೆ ಚಕ್ರ ಶಂಖ ಪರಿಪೂರ್ಣ ।
ವದನ ಪರಿಪೂರ್ಣ ಕಂಬುಕಂಠ ಪರಿಪೂರ್ಣ ।
ಸರ್ವಾಂಗ ಪರಿಪೂರ್ಣ ಪುರಂದರವಿಠಲನ
ಸರ್ವಾಂಗ ಪರಿಪೂರ್ಣ ॥ ೧

### ಮಟ್ಟತಾಳ

ಹಮ್ಮು ಪರಿಪೂರ್ಣ ಮನ್ಯು ಪರಿಪೂರ್ಣ ।
ಸುಮ್ಮಾನ ಪರಿಪೂರ್ಣ ಬುದ್ಧಿ ಪರಿಪೂರ್ಣ ।
ಚಿತ್ಸುಖ ಪರಿಪೂರ್ಣ ಪುರಂದರವಿಠಲನ
ಹಮ್ಮು ಪರಿಪೂರ್ಣ ॥ ೨

ಝಂಪೆತಾಳ

ಅನಂತಬಾಹುವಾಗಿ ಅನಂತಚಕ್ಷುವಾಗಿ ।
ಅನಂತಕಲ್ಪದಲ್ಲಿ ಅನಂತನಾಮ ಶ್ರೀಪುರಂದರವಿಠಲನ
ಅನಂತ ಅವತಾರಗಳು ಪರಿಪೂರ್ಣ
ಅನಂತ ಅವತಾರಗಳು ಪರಿಪೂರ್ಣ ॥ ೩ ॥

ಅಟತಾಳ

ಶ್ರೋತುರ ನೇತುರ ಘ್ರಾಣ ತ್ವಗ್ರಸನವು ।
ಪಾಣಿ ಪಾದ ಪಾಯೂಪಸ್ಥಾದಿ ಈರೈದು ।
ಮಾತರಿಶ್ವಪ್ರಿಯ ಪುರಂದರವಿಠಲನ
ಜ್ಞಾನ-ಕರ್ಮೇಂದ್ರಿಯಗಳು ಪರಿಪೂರ್ಣ ॥ ೪ ॥

ಏಕತಾಳ

ಆವಾವ ಕಾಲದಲ್ಲಿ ಆವಾವ ದೇಶದಲ್ಲಿ ।
ಆವಾವ ಜೀವರಲಿ ಶ್ರೀವಲ್ಲಭ ಪರಿಪೂರ್ಣ ।
ಭೂವಲ್ಲಭ ಪರಿಪೂರ್ಣ ಸಕಲ ಲೋಕದೊಳೊಬ್ಬ
ಪುರಂದರವಿಠಲನು ಪೂರ್ಣ—ಪಾದನಖ ಪರಿಪೂರ್ಣ ॥ ೫ ॥

ಜತೆ

[೧]ಪರಿಪೂರ್ಣ ಜ್ಞಾನಪೂರ್ಣ ಆನಂದಪರಿಪೂರ್ಣ
ಪುರಂದರವಿಠಲವಿಭುವೆ ಪಾದನಖ ಪರಿಪೂರ್ಣ

---

೧) ಪಾ. ಅರಸಿ ಇಂದಿರೆ ಪರಿಪೂರ್ಣ ಪುರಂದರವಿಠಲ
ಸರಸಿಜೋದ್ಭವ ಶರ್ವಾದಿಗಳೆಲ್ಲ ಅಪೂರ್ಣರು

## ಜಯ-ಶುಭ-ಮಂಗಲ

### ೧೫೦

ರಾಗ—ಮಧ್ಯಮಾವತಿ ತಾಳ—ಆದಿ

ಮಂಗಳ ಮಾರಮಣಗೆ ಮಂಗಳ—ಜಯ-
ಮಂಗಳ ಭೂರಮಣಗೆ ಮಂಗಳ ॥ ಪ ॥

ಮುಕುಟಕೆ ಮಂಗಳ ಮತ್ಸ್ಯಾವತಾರಗೆ
ಮುಖಕೆ ಮಂಗಳ ಮುದ್ದುಕೂರ್ಮನಿಗೆ ॥
ಸುಕಂಠಕೆ ಮಂಗಳ ಸೂಕರರೂಪಗೆ
ನಖಕೆ ಮಂಗಳ ಮುದ್ದುನರಸಿಂಹಗೆ ॥ ೧ ॥

ವಕ್ಷಕೆ ಮಂಗಳ ವಟುವಾಮನನಿಗೆ
ಪಕ್ಷಕೆ ಮಂಗಳ ಭಾರ್ಗವಗೆ ॥
ಕಕ್ಷಕೆ ಮಂಗಳ ಕಾಕುತ್ಸ್ಥರಾಮನಿಗೆ
ಕುಕ್ಷಿಗೆ ಮಂಗಳ ಶ್ರೀಕೃಷ್ಣಗೆ ॥ ೨ ॥

ಊರುಗಳಿಗೆ ಮಂಗಳ ಉತ್ತಮ ಬುದ್ಧಗೆ
ಚರಣಕ್ಕೆ ಮಂಗಳ ಚೆಲ್ವ ಕಲ್ಕಿಗೆ ॥
ಪರಿಪರಿ ರೂಪಗೆ ಪರಮ ಮಂಗಳ
ಪುರಂದರವಿಠಲಗೆ ಶುಭಮಂಗಳ ॥ ೩ ॥

## ೧೫೧

ರಾಗ—ಭೈರವಿ ತಾಳ—ಛಾಪು

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ಇಂದೀವರಾಕ್ಷಗೆ ಇಭರಾಜವರದಗೆ
ಇಂದಿರಾರಮಣ ಗೋವಿಂದ ಹರಿಗೆ ॥
ನಂದನ ಕಂದಗೆ ನವನೀತ ಚೋರಗೆ
ವೃಂದಾರಕೇಂದ್ರ ಉಡುಪಿಯ ಕೃಷ್ಣಗೆ ॥ ೧ ॥

ಕ್ಷೀರಾಬ್ಧಿ ವಾಸಗೆ ಕ್ಷಿತಿಜನ ಪಾಲಗೆ
ಮಾರನನು ಪಡೆದ ಮಂಗಲಮೂರ್ತಿಗೆ ॥
ಚಾರುಚರಣದಿಂದ ಚೆಲುವ ಗಂಗೆಯ ಪಡೆದ
ಕಾರುಣ್ಯಮೂರ್ತಿ ಕೌಸ್ತುಭಧಾರಿಗೆ ॥ ೨ ॥

ವ್ಯಾಸಾವತಾರಗೆ ವೇದ ಉದ್ಧಾರಗೆ
ವಾಸಿತಾನಂತಪದ ಸಕಲೇಶಗೆ ॥
ವಾಸುದೇವನ ಮೂರ್ತಿ ಪುರಂದರವಿಟ್ಠಲಗೆ
ದಾಸರನು ಕಾಯ್ವ ರುಕ್ಮಿಣಿರಮಣಗೆ ॥ ೩ ॥

## ೧೫೨

ರಾಗ—ತೋಡಿ ತಾಳ—ಆದಿ

ಮನ್ನಾರು ಕೃಷ್ಣಗೆ ಮಂಗಳ–ಜಗವ–
ಮನ್ನಿಸಿದೊಡೆಯಗೆ ಮಂಗಳ ॥ ಪ ॥

ಬೊಮ್ಮನ ಪಡೆದಗೆ ಭಕ್ತರುದ್ಧಾರಿಗೆ
ಕಮ್ಮಗೋಲನಯ್ಯಗೆ ಮಂಗಳ ॥
ಧರ್ಮಸಂರಕ್ಷಗೆ ದಾನವಶಿಕ್ಷಗೆ
ನಮ್ಮ ರಕ್ಷಕನಿಗೆ ಮಂಗಳ ॥ ೧ ॥

ತುರುಗಳ ಕಾಯ್ದಗೆ ಕರುಣಾಕರನಿಗೆ
ಗಿರಿಯನೆತ್ತಿದನಿಗೆ ಮಂಗಳ ||
ಪುರದ ತಿಮ್ಮಪ್ಪಗೆ ವಾರಿಜನಾಭಗೆ
ಹರಿಸರ್ವೋತ್ತಮನಿಗೆ ಮಂಗಳ || ೨ ||

ದೇವಕಿ ದೇವಿಯ ತನಯಗೆ ಮಂಗಳ
ದೇವ ತಿಮ್ಮಪ್ಪಗೆ ಮಂಗಳ ||
ಮಾವನ ಕೊಂದು ಮಲ್ಲರ ಮಡುಹಿದ
ಪುರಂದರವಿಠಲಗೆ ಮಂಗಳ || ೩ ||

## ೧೫೩

ರಾಗ—ಸುರಟ ತಾಳ—ಅಟ

[೧]ಜಯಮಂಗಳಂ ನಿತ್ಯ ಶುಭಮಂಗಳಂ || ಪ ||

ಮಂಗಳ ಮಧು–ಕೈಟಭಾಸುರಮರ್ದನಗೆ
ಮಂಗಳ ಮದನಕೋಟಿ ಲಾವಣ್ಯಗೆ ||
ಮಂಗಳ ಜಗದಂತರಂಗ ಕೃಪಾಂಗಗೆ
ಮಂಗಳ ಯದುಕುಲೋತ್ತಮ ಸಾರ್ವಭೌಮಗೆ || ೧ ||

ಶ್ರೀವತ್ಸಲಾಂಛನಗೆ ಸಿರಿದೇವಿಯರಸಗೆ
ಗೋವರ್ಧನೋದ್ಧಾರ ಗೋವಿಂದಗೆ ||
ಮಾವಕಂಸನ ಕೊಂದ ಮಕರಕುಂಡಲಧರ
ಭಾವಜನಯ್ಯ ಚಿನ್ಮಯಮೂರ್ತಿಗೆ || ೨ ||

ಅಂಬುಜನಾಭಗೆ ಅಖಿಳಲೋಕೇಶಗೆ
ಶಂಭು–ಅಜ–ಸುರ–ಮುನಿವಂದ್ಯ ಹರಿಗೆ ||
ಎಂಬತ್ತುನಾಲ್ಕುಲಕ್ಷ ಜೀವರಾಶಿಗಳ
ಬೊಂಬೆಯ ಮಾಡಿ ಕುಣಿಸುವ ದೇವಗೆ || ೩ ||

---

೧) ಇ. ಹಸ್ತಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

ಸಕಲಗುಣಪೂರ್ಣಗೆ ಸರ್ವಸ್ವಾತಂತ್ರ್ಯಗೆ
ಅಕಳಂಕ ಆದಿ ನಿರ್ದೋಷ ಹರಿಗೆ ॥
ಭಕುತವತ್ಸಲನಿಗೆ ಭವರೋಗವೈದ್ಯಗೆ
ನಿಖಿಳ ಜೀವದಯಾಪರಿಪೂರ್ಣಗೆ ॥ ೪ ॥

ಪನ್ನಗಶಯನಗೆ ಪಾವನಮೂರ್ತಿಗೆ
ಸನ್ನುತಾನಂತ ಸದ್ಗುಣಭರಿತಗೆ ॥
ಎನ್ನೊಡೆಯ ಪುರಂದರವಿಠಲರಾಯಗೆ
ತನ್ನ ನಂಬಿದವರ ಸಲಹುವ ಮೂರ್ತಿಗೆ ॥ ೫ ॥

### ೧೫೪

ರಾಗ—ಪೂರ್ವಿ ತಾಳ—ಆದಿ

ಮಂಗಳಂ ಜಯಮಂಗಳಂ ॥ ಪ ॥

ನಿಗಮವ ತಂದಾ ಮತ್ಸ್ಯನಿಗೆ
ನಗವ ಬೆನ್ನಲಿ ಪೊತ್ತ ಕೂರ್ಮನಿಗೆ ॥
ಜಗವನುದ್ಧರಿಸಿದ ವರಹಾವತಾರಗೆ
ಮಗುವನು ಕಾಯ್ದ ಮುದ್ದುನರಸಿಂಹಗೆ ॥ ೧ ॥

ಭೂಮಿಯ ದಾನವ ಬೇಡಿದಗೆ
ಆ ಮಹಾ ಕ್ಷತ್ರಿಯರ ಗೆಲಿದವಗೆ ॥
ರಾಮಚಂದ್ರನಾದ ಸ್ವಾಮಿಗೆ—ಸತ್ಯ-
ಭಾಮೆಯರಸ ಗೋಪಾಲಕೃಷ್ಣಗೆ ॥ ೨ ॥

ಬತ್ತಲೆ ನಿಂತಿಹ ಬುದ್ಧನಿಗೆ
ಉತ್ತಮ ಹಯವೇರಿದ ಕಲ್ಕಿಗೆ ॥
ಹತ್ತವತಾರದಿ ಭಕ್ತರ ಸಲಹುವ
೧ಸತ್ಯ ಶ್ರೀಪುರಂದರವಿಠಲನಿಗೆ ॥ ೩ ॥

---

೧) ಇ. ನಿತ್ಯ. ಓ. ಕರ್ತೃ.

## ೧೫೫

ರಾಗ—ಭೈರವಿ ತಾಳ—ಝಂಪೆ

ಜಯಮಂಗಳಂ ನಿತ್ಯ ಶುಭಮಂಗಳಂ ‖ ಪ ‖

ಕಂದರ್ಪನಯ್ಯನಿಗೆ ಕರುಣಾಸಮುದ್ರನಿಗೆ
ಮಂದರೋದ್ಧರಗೆ ಮಧುಸೂದನನಿಗೆ ‖
ಕಂದ ಪ್ರಹ್ಲಾದನನು ಕಾಯ್ದ ನರಸಿಂಹಗೆ
ಸೌಂದರ್ಯಮೂರ್ತಿ ಸರ್ವೋತ್ತಮನಿಗೆ ‖ ೧ ‖

ಕರಿರಾಜವರದಗೆ ಸರಸಿಜಸುನಯನಗೆ
ಸುರಪತಿಯ ಮದಭಂಗ ಮಾಡಿದವಗೆ ‖
ಸಿರಿಯರಸನಿಗೆ ದೈತ್ಯಗಿರಿನಿಕರಕುಲಿಶನಿಗೆ
ಕರುಣಾಸಾಗರ ಶರಣಜನಪಾಲಗೆ ‖ ೨ ‖

ಅಂಬರೀಷನ ಶಾಪ ಪರಿಹರಿಸಿ ಪೊರೆದವಗೆ
[೧]ತುಂಬುರ ನಾರದ ಮುನಿವಂದ್ಯಗೆ ‖
ಕಂಬುಕಂದರಪುರಂದರವಿಠಲರಾಯಗೆ
ಅಂಬುಜನಾಭನಿಗೆ ಅಜನಪಿತಗೆ ‖ ೩ ‖

---

೧) ಇ. ಕೆಳಗೆ ಕಾಣಿಸಿದ ಚರಣಗಳಿವೆ.

ಕಂಬುದರಗದೆಕಂಜಧನುಪಾಣಿಗೆ ‖
ಗೊಂಬೆಯಂದದಿ ಅಜಭವಾದಿಗಳ ಕುಣಿಸುವಗೆ ।
ಸ್ತಂಭಸನ್ನಿಹಿತಪುರಂದರವಿಠಲಗೆ ‖

## ೧೫೬

ರಾಗ—ಕಲ್ಯಾಣಿ ತಾಳ ಆದಿ

ಮಂಗಳಂ ಜಯ ಮಂಗಳಂ ॥ ಪ ॥

ಅಕ್ರೂರವರದ ತ್ರಿವಿಕ್ರಮಗೆ
ನಕ್ರನ ಗೆಲಿದ ಪರಾಕ್ರಮಿಗೆ ॥
೧ಶಕ್ರನ ಗರ್ವವ ನಿರಸವ ಮಾಡಿದ
ಶುಕ್ರನ ಶಿಷ್ಯನಿಗೊಲಿದವಗೆ ॥ ೧ ॥

ಗಂಗೆಯ ಪಡೆದ ಶ್ರೀರಂಗನಿಗೆ
ರಂಗುಮಾಣಿಕದುಂಗುರದವಗೆ ॥
ಭೃಂಗಕುಂತಳೆಯರ ವ್ರತವನು ಕೆಡಿಸಿದ
ಅಂಗಜನಯ್ಯ ಶುಭಾಂಗನಿಗೆ ॥ ೨ ॥

ಧರೆಯೊಳಧಿಕ ವೆಂಕಟಾಚಲದಿ
ಸ್ಥಿರವಹ ಪುಷ್ಕರಿಣಿಯ ತಟದಿ ॥
ಪರಮಪುರುಷ ಶ್ರೀಉರಗಗಿರಿಯ ದೊರೆ
ವರದ ಪುರಂದರ ವಿಟ್ಠಲಗೆ ॥ ೩ ॥

## ೧೫೭

ರಾಗ—ಮಧ್ಯಮಾವತಿ ತಾಳ— ರೂಪಕ

ಮಂಗಳಂ ಜಯ ಮಂಗಳಂ ॥ ಪ ॥

ಜಯ ಜಯ ಮಂಗಳ ಹರಿಗೆ
ಜಯ ಜಯ ಮಂಗಳ ಸಿರಿಗೆ
ಜಯ ಜಯ ವರದಪುರಂದರವಿಟ್ಠಲಗೆ ॥ ೧ ॥

ಜಯ ವಸುದೇವನ ಸುತಗೆ
ಜಯ ಜಯ ಭೀಷ್ಮಕಸುತೆಗೆ
ಜಯ ಜಯ ದಾಸಪತಿವರದಪುರಂದರವಿಟ್ಠಲಗೆ ॥ ೨ ॥

---

೧) ಪಾ. ಶುಕ್ರಶಿಷ್ಯನ ಗರ್ವ ನಿವಾರಿಸಿ। ಶಕ್ರಗೆ ಪದವಿಯನಿತ್ತವಗೆ

ಜಯು ಜಯು ದಶರಥಸುತಗೆ
ಜಯು ಜಯು ಜನಕನ ಸುತೆಗೆ
ಜಯು ಜಯು ದಂಪತಿವರದಪುರಂದರವಿಟ್ಠಲಗೆ ‖ ೩

ಪರಮಾನಂದವು ಹರಿಗೆ
ಪರಮಾನಂದವು ಸಿರಿಗೆ
ಪರಮಾನಂದವು ವರದಪುರಂದರವಿಟ್ಠಲಗೆ ‖ ೪

ಶುಭವಿದು ಶೋಭನ ಹರಿಗೆ
ಶುಭವಿದು ಶೋಭನ ಸಿರಿಗೆ
ಶುಭವಿದು ಶೋಭನ ವರದಪುರಂದರವಿಟ್ಠಲಗೆ ‖ ೫

## ೧೫೮

ರಾಗ—ಶ್ರೀರಾಗ ತಾಳ—ಅಟ

ಮಂಗಳಂ ಜಯುಮಂಗಳಂ ‖ ಪ

ವಾತಸುತ ಹನುಮನ ಒಡೆಯುಗೆ ಮಂಗಳ
ದಾತ ಶ್ರೀರಘುಪತಿಗೆ ಮಂಗಳ ‖
ಸೇತುವೆಗಟ್ಟಿದ ರಾಯುಗೆ ಮಂಗಳ
ಸೀತಾರಮಣಗೆ ಶುಭಮಂಗಳ ‖ ೧

ಬಿಲ್ಲ ಹಿಡಿದು ಬಲು ಬಿಂಕದ ದೈತ್ಯರ
ಹಲ್ಲ ಮುರಿದವಗೆ ಮಂಗಳ ‖
ಕಲ್ಲಾದಹಲ್ಯೆಯನುದ್ಧಾರ ಮಾಡಿದ
ಬಲ್ಲಿದ ದಾಶರಥಿಗೆ ಮಂಗಳ ‖ ೨

ಹರಧನು ಮುರಿದ ವಿನೋದಿಗೆ ಮಂಗಳ
ವರದ ತಿಮ್ಮಪ್ಪಗೆ ಮಂಗಳ ‖
ಪುರಂದರವಿಟ್ಠಲರಾಯುಗೆ ಮಂಗಳ
ಸರುವೋತ್ತಮನಿಗೆ ಶುಭಮಂಗಳ ‖ ೩

## ೧೫೯

ರಾಗ—ಭೈರವಿ ತಾಳ—ಛಾಪು

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ಗುರುಭಕ್ತಿಯೆಂತೆಂಬ ಗಮಕದೋಲೆಯನಿಟ್ಟು
ಹರಿಧ್ಯಾನವೆಂಬ ಆಭರಣವಿಟ್ಟು ॥
ಪರತತ್ತ್ವವೆಂತೆಂಬ ಪಾರಿಜಾತವ ಮುಡಿದು
ಪರಮಾತ್ಮ ಹರಿಗೆ ಆರತಿಯೆತ್ತಿರೆ ॥ ೧ ॥

ಆದಿಮೂರುತಿಯೆಂಬ ಅಚ್ಚ ಅರಿಸಿಣ ಬಳೆದು
ವೇದಮುಖನೆಂಬ ಕುಂಕುಮವನಿಟ್ಟು ॥
ಸಾಧು-ಸಜ್ಜನಸೇವೆಯೆಂಬ ಸಂಪಿಗೆ ಮುಡಿದು
ಮೋದದಿಂ ಲಕ್ಷ್ಮಿಗಾರತಿಯೆತ್ತಿರೆ ॥ ೨ ॥

ತನುವೆಂಬ ತಟ್ಟೆಯಲಿ ಮನದ ಸೊಡರನು ಇಡಿಸಿ
ಘನಶಾಂತಿಯೆಂಬ ಆಜ್ಯವನು ತುಂಬಿ ॥
ಆನಂದವೆಂತೆಂಬ ಜ್ಯೋತಿಯನು ಹಚ್ಚಿಟ್ಟು
ಚಿನುಮಯ ಹರಿಗೆ ಆರತಿಯೆತ್ತಿರೆ ॥ ೩ ॥

ಕಾಮಾಂಧವಳಿದಂತ ಕಮಲದ ತಟ್ಟೆಯಲಿ
ನೇಮವೆಂತೆಂಬ ಹರಿದ್ರವನು ಕದಡಿ ॥
ಆ ಮಹಾ ಸುಜ್ಞಾನವೆಂಬ ಸುಣ್ಣವ ಬೆರಸಿ
ಸೋಮಧರವರದಗಾರತಿಯೆತ್ತಿರೆ । ೪ ॥

ನಾರದವಂದ್ಯಗೆ ನವನೀತಚೋರಗೆ
ನಾರಾಯಣಗೆ ಶ್ರೀವರಲಕ್ಷ್ಮಿಗೆ ॥
ಸಾರಿದವರನು ಪೊರೆವ ಪುರಂದರವಿಟ್ಠಲಗೆ
ನೀರಜಮುಖಿಯರಾರತಿಯೆತ್ತಿರೆ ॥ ೫ ॥

೧೬೦

ರಾಗ—ಭೈರವಿ ತಾಳ— ಅಟ

ಜಯಮಂಗಳಂ ನಿತ್ಯ ಶುಭಮಂಗಳಂ ‖ ಪ ‖

ಮಂಗಳವು ಆನಂದತೀರ್ಥ ಗುರುರಾಯರಿಗೆ
ಮಂಗಳವು ಮಧುರವಾಕ್ಯಸುಭಾಷ್ಯಗೆ ‖ ಅ.ಪ ‖

ಅಂಜನೆಯ ಗರ್ಭಸಂಜಾತ ವಿಖ್ಯಾತನಿಗೆ
ಸಂಜೀವಿನಿಯು ತಂದ ಹನುಮಂತಗೆ ‖
ಸಂಜೆಯಲಿ ಲಂಕಿಣಿಯಸಂಜಿಸಿ ಪೊಕ್ಕ ಪ್ರ
ಭಂಜನನ ಕುವರ ಮಂಜುಳವಾಕ್ಯಗೆ ‖ ೧ ‖

ದ್ವಾಪರದಿ ಕುಂತಿಯೊಳ್ ಪರ್ವತದಿ ಜನಿಸಿದಗೆ
ಪಾಪಿ ಜರಾಸಂಧನನು ಸೀಳ್ದವಗೆ ‖
ದ್ರೌಪದಿಗೆ ಸೌಗಂಧಿ ಕುಸುಮವನು ತಂದವಗೆ
ಶ್ರೀಪತಿಯ ದಾಸ ಶ್ರೀಭೀಮಸೇನನಿಗೆ ‖ ೨ ‖

ಕಲಿಯುಗದಿ ಶಂಕರನ ದುರ್ಮತವ ತರೆದವಗೆ
ಖಳ ಬೌದ್ಧ ಚಾರ್ವಾಕ ಮತವ ಗೆಲಿದವಗೆ ‖
ಒಲಿದು ಸಚ್ಛಾಸ್ತ್ರವನು ಸಾಧುಗಳಿಗೊರೆದವಗೆ
ಸುಲಭ ಪುರಂದರವಿಟ್ಠಲನ ದಾಸಗೆ ‖ ೩ ‖

## ಶಯನೋತ್ಸವ

### ೧೬೧

ರಾಗ—ಕಲ್ಯಾಣಿ ತಾಳ—ಅಟ

[1]ಮಲಗಯ್ಯ ಜಲಜನಾಭ
ಮಾಣಿಕ್ಯಮಂಟಪದಿ || ಪ ||

ಆದಿಶೇಷನು ಬಂದು ಹಾಸಿಗೆಯಾಗಿಹ
ವೇದವಿನುತ ಜಗದಾದಿಪುರುಷ ಕೇಳೊ || ೧ ||

ಸಿರಿ-ಭೂ-ದುರ್ಗೆಯರು ತರುಣಿಯರು ಮೂವರು
ಚರಣವೊತ್ತಲಿಕೆ ಕೈಕಟ್ಟಿ ನಿಂತಿಹರು || ೨ ||

ಸರುವಜ್ಞಮುನಿವಂದ್ಯ ಸರುವಸ್ವತಂತ್ರನೇ
ಪರಮಸುಂದರ ಪುರಂದರವಿಠಲರಾಯಾ || ೩ ||

### ೧೬೨

ರಾಗ – ಮಧ್ಯಮಾವತಿ ತಾಳ – ಅಟ

[2]ಪವಡಿಸು ಪರಮಾತ್ಮನೆ—ಸ್ವಾಮಿ-
ಭವರೋಗ ವೈದ್ಯನೆ ಭಕ್ತರ ಪ್ರಿಯನೆ || ಪ ||

ಕುಂದಣದಿ ರಚಿಸಿದ ಸೆಜ್ಜೆಯ ಮನೆಯಲಿ
ಇಂದ್ರನೀಲ ಮಣಿಮಂಟಪದಿ ||
ಚಂದ್ರಕಾಂತಿಯ ಠಾಣದೀವಿಗೆ ಹೊಳೆಯಲು
ಸಿಂಧುಶಯನ ಆನಂದದಿಂದಲಿ || ೧ ||

ತೂಗುಮಂಚದಿ ಹಂಸತೂಲದ ಹಾಸಿಗೆ
ನಾಗಸಂಪಿಗೆಯ ಹೂವಿನ ಒರಗು ||
ಸಾಗರಸುತೆಯ ಸಮ್ಮೇಳವಲಿ ನಿಜ ||
ಭೋಗವ ಪಡುತ ಓಲಾಡುತಿರು || ೨ ||

೧) ಅ. ಹಸ್ತಪ್ರತಿಯಲ್ಲಿ ಸಿಕ್ಕುತ್ತಿದೆ.
೨) ಎ- ಓ. ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತಿದೆ.

ಸದ್ದಡಗಿತು ಗಡಿಯಾರ ಸಾರಿತು ಬೇಗ
ಮುದ್ರೆಗಳಾಗಿವೆ ಬಾಗಿಲಿಗೆ ||
ತಿದ್ದಿದ ಧವಳಶಂಖಗಳ ನಾದದಿಂದ
ಪದ್ಮನಾಭ ಶ್ರೀಪುರಂದರವಿಠಲ || ೩ ||

### ೧೬೩

ರಾಗ—ಪೀಲು | ತಾಳ—ಆದಿ

ಲಾಲಿ ಲಾಲಿ ನಮ್ಮ ಹರಿಯೆ ಲಾಲಿ-ಸುರ-
ನರರಿಗೆ ಒಲಿದು ಕರುಣವ ಬೀರುವ ದೊರೆಯೆ—ಲಾಲಿ || ಪ ||

ರಾಮ ಲಾಲಿ ಮೇಘಶ್ಯಾಮ ಲಾಲಿ
[1]ಮಾಮನೋಹರ ಅಮಿತ ಸದ್ಗುಣಧಾಮ—ಲಾಲಿ || ೧ ||

ಕೃಷ್ಣ ಲಾಲಿ ಸರ್ವೋತ್ಕೃಷ್ಟ ಲಾಲಿ
ದುಷ್ಟರ ಶಿಕ್ಷಿಸಿ ಶಿಷ್ಟರ ಪೊರೆವ ಸಂತುಷ್ಟ—ಲಾಲಿ || ೨ ||

ರಂಗ ಲಾಲಿ ಮಂಗಳಾಂಗ ಲಾಲಿ
ಗಂಗೆಯ ಪಡೆದ ತುಂಗಮಹಿಮ ನರಸಿಂಗ—ಲಾಲಿ || ೩ ||

ನಂದ ಲಾಲಿ ಗೋಪಿಕಂದ ಲಾಲಿ
ಮಂದರ ಗಿರಿಧರ ಮಧುಸೂದನ ಮುಕುಂದ—ಲಾಲಿ || ೪ ||

ಶೂರ ಲಾಲಿ ರಣಧೀರ ಲಾಲಿ
ಮಾರನಯ್ಯ ನಮ್ಮ [2]ಪುರಂದರವಿಠಲ—ಲಾಲಿ || ೫ ||

---

೧) ಎ–ಓ. ರಮಾಮನೋಹರ
೨) ಎ–ಓ. ಗುರು ಪುರಂದರವಿಠಲ

## ೧೬೪

ರಾಗ—ಭೈರವಿ ತಾಳ—ಅಟ

ಲಾಲಿ ತ್ರಿಭುವನಪಾವನ ಲಾಲಿ ॥ ಪ ॥

ಗೋವಳ ಕುಲದೊಳು ಪುಟ್ಟಿದಗೆ ಲಾಲಿ
ಗೋವರ್ಕಳನು ಸಲಹಿದಗೆ ಲಾಲಿ ॥
ಗೋವುಗಳನೆಲ್ಲ ಕಾಯ್ದವಗೆ ಲಾಲಿ
ಗೋವಿಂದ ಪರಮಾನಂದಗೆ ಲಾಲಿ......ಲಾಲಿ ॥ ೧ ॥

ನಖದಲಿ ಗಂಗೆಯ ಪಡೆದಗೆ ಲಾಲಿ
[೧]ಶಕಟನ ಮುರಿದು ಒತ್ತಿದವಗೆ ಲಾಲಿ ॥
ಅಖಿಳವೇದಂಗಳ ತಂದಗೆ ಲಾಲಿ
ರುಕುಮಿಣಿಯರಸ ವಿಟ್ಠಲನಿಗೆ ಲಾಲಿ......ಲಾಲಿ ॥ ೨ ॥

ಗಗನವ ಮುರಿದು ಒತ್ತಿದಗೆ ಲಾಲಿ
ನಿಗಮಗಳನು ತಂದಿತ್ತಗೆ ಲಾಲಿ ॥
ಹಗೆಗಳನೆಲ್ಲರ ಗೆಲಿದಗೆ ಲಾಲಿ
ಜಗವನು ಉದರದಿ ಧರಿಸಿದಗೆ ಲಾಲಿ......ಲಾಲಿ ॥ ೩ ॥

ಬೊಟ್ಟಿಲಿ ಬೆಟ್ಟವನೆತ್ತಿದಗೆ ಲಾಲಿ
ಮೆಟ್ಟಿಲಿ ಭೂಮಿಯನಳೆದಗೆ ಲಾಲಿ ॥
ಜಟ್ಟಿಗರನೆಲ್ಲ ಗೆಲಿದಗೆ ಲಾಲಿ
ಕಟ್ಟುಗ್ರ ಶ್ರೀನರಸಿಂಹಗೆ ಲಾಲಿ......ಲಾಲಿ ॥ ೪ ॥

ಶರಧಿಗೆ ಸೇತುವೆಗಟ್ಟಿದಗೆ ಲಾಲಿ
ಸುರರ ಸೆರೆಯನು ಬಿಡಿಸಿದಗೆ ಲಾಲಿ ॥
ಕರಿಮೊರೆ ಇಡಲು ಬಂದೊದಗಿದವಗೆ ಲಾಲಿ
ವರದ ಪುರಂದರವಿಠಲಗೆ ಲಾಲಿ......ಲಾಲಿ ॥ ೫ ॥

---

೧) ಪು. ಶಕಟಾದಿ ಅಸುರರ ಮುರುಹಿದನೆ ಲಾಲಿ.

## ೧೬೫

ರಾಗ—ಶ್ರೀರಾಗ (ಜೋಗುಳ) ತಾಳ—ಅಟ

ದೇವಕಿಯುದರ ಸಂಜಾತನೆ ತ್ರುವಿ
ಕಾವನಪಿತ ಕಮಲಾಕ್ಷನೆ ತ್ರುವಿ
ಶ್ರೀವೈಭವ ಸಚ್ಚಿದಾನಂದ ತ್ರುವಿ
ಭಾವಕಿ ಗೋಪಿಯ ಕಂದನೆ ತ್ರುವಿ......ತ್ರುವಿ ॥ ೧ ॥

ಮಧುರೆಯೊಳುದಿಸಿದ ಮಹಿಮನೆ ಜೋ ಜೋ
ಯದುಕುಲತಿಲಕ ಯಾದವರಾಯ ಜೋಜೋ ॥
ಮಧುಕೈಟಭ ಮುರಮರ್ದನ ಜೋಜೋ
ಚದುರನಾಗಿ ತುರುಗಳ ಕಾಯ್ದ ಜೋಜೋ......ಜೋಜೋ ॥ ೨ ॥

ಗೋಕುಲಪಾಲಕ ಗೋವಿಂದ ತ್ರುವಿ
ಶ್ರೀಕುಚಕುಂಕುಮಾಂಕಿತ ಕೃಷ್ಣ ತ್ರುವಿ ॥
ಪಾಕಶಾಸನ ಮುಖ್ಯ ಸುರವಂದ್ಯ ತ್ರುವಿ
ಲೋಕವೀರೇಳ ಪೆತ್ತಾತನೆ ತ್ರುವಿ......ತ್ರುವಿ ॥ ೩ ॥

ಶ್ರುತಿಚೋರ ಸಂಹಾರಕ ದೇವ ಜೋಜೋ
ಜತನದಿ ಸುರರಿಗಮೃತವಿತ್ತೆ ಜೋಜೋ
ಕ್ಷಿತಿಯ ಕದ್ದೊಯ್ದನ ಸೀಳ್ದೆ ನೀ ಜೋಜೋ
ಮತಿಯುತ ಬಾಲಕನತಿರಕ್ಷ ಜೋ ಜೋ......ಜೋಜೋ ॥ ೪ ॥

ಕ್ಷಿತಿಯ ಈರಡಿಗೆಯ್ದ ವಾಮನ ತ್ರುವಿ
ಯತಿವಂಶ ಜನನ ಭಾರ್ಗವರೂಪ ತ್ರುವಿ ॥
ಕ್ರತುವ ರಕ್ಷಕ ಕಾಕುತ್ಸ್ಥನೆ ತ್ರುವಿ
ರತಿಪತಿಪಿತ ಸುರನುತ ಕೃಷ್ಣ ತ್ರುವಿ......ತ್ರುವಿ ॥ ೫ ॥

ಗೋಪಿಕಾನಂದ ಮುಕುಂದನೆ ಜೋಜೋ
ಭೂಪರೊಳ್ಳಾಡಿ ಬಳಲಿದನೆ ಜೋಜೋ ||
ಶ್ರೀಪುರುಷೋತ್ತಮ ನರಸಿಂಹ ಜೋಜೋ
ಅಪಾರ ಮಹಿಮಾರ್ಣವದೇವ ಜೋಜೋ...ಜೋಜೋ || ೬ ||

ಮಣ್ಣೊಳಗಾಡಿ ನೀ ಬಂದೆಯ ತ್ರುವಿ
ಬೆಣ್ಣೆಯ ಬೇಡೆ ಬಯ್ದೆನೆ ಕಂದ ತ್ರುವಿ ||
ಕಣ್ಣ ದೃಷ್ಟಿಗೆ ಕರಗದ ಕಂದ ತ್ರುವಿ
ಚಿಣ್ಣ ಸುಮ್ಮನೆ ಇರು ಶ್ರೀಕೃಷ್ಣ ತ್ರುವಿ...ತ್ರುವಿ || ೭ ||

ತಾರಕಸತಿವ್ರತಹಾರಕ ಜೋಜೋ
ವಾರಣ ಹಯವೇರಿ ಮೆರೆದನೆ ಜೋಜೋ ||
ಸಾರಿದವರ ಸಂತೈಸುವ ಜೋಜೋ
ಶ್ರೀರಮಾಕಾಂತ ಶ್ರೀಕೃಷ್ಣನೆ ಜೋಜೋ...ಜೋಜೋ || ೮ ||

ಶರಣಾಗತ ವಜ್ರಪಂಜರ ತ್ರುವಿ
ಕರುಣಾಕರ ಕಮಲಾಕ್ಷನೆ ತ್ರುವಿ ||
ಧರಣೀಧರಶಾಯಿ ಶ್ರೀವರ ತ್ರುವಿ
ವರದ ಶ್ರೀಪುರಂದರವಿಠಲನೆ ತ್ರುವಿ...ತ್ರುವಿ || ೯ ||

## ೧೬೬

ರಾಗ—ಶಂಕರಾಭರಣ ತಾಳ—ಅಟ

ತೂಗಿರೆ ರಂಗನ ತೂಗಿರೆ ಕೃಷ್ಣನ
ತೂಗಿರೆ ಅಚ್ಯುತಾನಂತನ || ಪ ||

ತೂಗಿರೆ ವರಗಿರಿ ಅಪ್ಪ ತಿಮ್ಮಪ್ಪನ
ತೂಗಿರೆ ಕಾವೇರಿ ರಂಗಯ್ಯನ || ಅ. ಪ ||

ಇಂದ್ರಲೋಕದೊಳುಪೇಂದ್ರ ಮಲಗಿಹನೆ
[೧]ಬಂದೊಮ್ಮೆ ತೊಟ್ಟಿಲ ತೂಗಿರೆ
[೨]ಮುಂದಗಮನೆಯರು ಚೆಂದದಿ ಪಾಡುತ
ನಂದನ ಕಂದನ ತೂಗಿರೆ ॥ ೧ ॥

ನಾಗಲೋಕದಲ್ಲಿ ನಾರಾಯಣ ಮಲಗಿಹನೆ
ಹೋಗಿ ನೀವ್ ತೊಟ್ಟಿಲ ತೂಗಿರೆ
ನಾಗವೇಣಿಯರು ನಾಲ್ಕು ನೇಣನು ಪಿಡಿದು
ಭಾಗ್ಯವಂತನೆಂದು ತೂಗಿರೆ ॥ ೨ ॥

ಜಲಧಿಯೊಳಾಲದ ಎಲೆಯಲ್ಲಿ ಮಲಗಿದ
ಚೆಲುವನ ತೊಟ್ಟಿಲ ತೂಗಿರೆ
ಸುಲಭ ದೇವರ ದೇವ ಬಲಿಬಂಧಮೋಚಕ
ಎಳೆಯನ ತೊಟ್ಟಿಲ ತೂಗಿರೆ ॥ ೩ ॥

ಸೂಸುವ ಮಡುವಿನೊಳ್ ಕಾಳಿಯನ ತುಳಿದಿಟ್ಟ
ದೋಷವಿದೂರನ ತೂಗಿರೆ
ಸಾಸಿರನಾಮದ ಸರ್ವೋತ್ತಮನೆಂದು
ಲೇಸಾಗಿ ತೊಟ್ಟಿಲ ತೂಗಿರೆ ॥ ೪ ॥

ಅರಳೆಲೆ ಮಾಗಾಯಿ ಕೊರಳ ಪದಕಸರ
ತರಳನ ತೊಟ್ಟಿಲ ತೂಗಿರೆ
ಉರಗಾದ್ರಿವಾಸ ಶ್ರೀಪುರಂದರವಿಠಲನ
ಹರುಷದಿ ಪಾಡುತ ತೂಗಿರೆ ॥ ೫ ॥

---

೧) ಎ. ಇಂದುಮುಖಿಯರೆಲ್ಲ ತೂಗಿರೆ  ೨) ಇ- ಎ. ಇಂದ್ರಕನ್ನಿಕೆಯರು

## ೧೬೭

ರಾಗ—ಶ್ರೀರಾಗ ತಾಳ—ಅಟ

ಜೋಜೋ ಶ್ರೀಕೃಷ್ಣ ಪರಮಾನಂದ
ಜೋಜೋ ಗೋಪಿಯಕಂದ ಮುಕುಂದ || ಪ ||

ಪಾಲುಗಡಲೊಳು ಪವಡಿಸಿದವನೆ—ಒಂ-
ದಾಲದೆಲೆಯ ಮೇಲೆ ಮಲಗಿದ ಶಿಶುವೇ ||
ಶ್ರೀಲತಾಂಗಿಯರ ಚಿತ್ತವಲ್ಲಭನೇ
ಬಾಲ ನಿನ್ನನು ಪಾಡಿ ತೂಗುವೆನಯ್ಯ—ಜೋ ಜೋ || ೧ ||

ಹೊಳೆಯುವ ರನ್ನದ ತೊಟ್ಟಿಲ ಮೇಲೆ
ಥಳಥಳಿಸುವ ಗುಲಗಂಜಿಯ ಮಾಲೆ ||
ಅಳದೆ ನೀ ಪಿಡಿದಾಡೆನ್ನಯ ಮುದ್ದುಬಾಲ
ನಳಿನನಾಭನೆ ನಿನ್ನ ಪಾಡಿ ತೂಗುವೆನು—ಜೋ ಜೋ || ೨ ||

ಆರ ಕಂದ ನೀನಾರ ನಿಧಾನಿ
ಆರ ರತ್ನವೊ ನೀನಾರ ಮಾಣಿಕವೋ ||
ಸೇರಿತು ಎನಗೊಂದು ಚಿಂತಾಮಣಿಯು-ಎಂದು
ಪೋರ ನಿನ್ನನು ಪಾಡಿ ತೂಗುವೆನಯ್ಯ ಜೋ ಜೋ || ೩ ||

ಗುಣನಿಧಿಯೇ ನಿನ್ನ ಎತ್ತಿಕೊಂಡಿದ್ದರೆ
ಮನೆಯ ಕೆಲಸವಾರು ಮಾಡುವರಯ್ಯ ||
ಮನಸಿಗೆ ಸುಖನಿದ್ರೆ ತಂದುಕೊ ಬೇಗ
ಫಣಿಶಯನನೆ ನಿನ್ನ ಪಾಡಿ ತೂಗುವೆನು—ಜೋ ಜೋ || ೪ ||

ಅಂಡಜವಾಹನ ಅನಂತಮಹಿಮ
ಪುಂಡರೀಕಾಕ್ಷ—ಪರಮಪಾವನ ||
ಹಿಂಡು ದೈವದ ಗಂಡ ಉದ್ದಂಡದೇವ
ಪಾಂಡುರಂಗ ಶ್ರೀಪುರಂದರವಿಠಲ—ಜೋ ಜೋ || ೫ ||

## ೧೬೮

ರಾಗ—ಆನಂದಭೈರವಿ ತಾಳ—ಆದಿ

ಜೋಜೋ ಯಶೋದೆಯ ನಂದ ಮುಕುಂದನೆ
ಜೋಜೋ ಕಂಸಕುಠಾರಿ || ಪ ||

ಜೋಜೋ ಮುನಿಗಳ ಹೃದಯಾನಂದನೆ
ಜೋಜೋ ಲಕುಮಿಯ ರಮಣ || ಅ. ಪ ||

ಹೊಕ್ಕುಳ ಹೂವಿನ ತಾವರೆಗಣ್ಣಿನ
ಇಕ್ಕಿದ ಮಕರ ಕುಂಡಲದ
ಜಕ್ಕುಳಿಸುವ ಕದಪಿನ ಸುಳಿಗುರುಳಿನ
ಚಿಕ್ಕ ಬಾಯ ಮುದ್ದು ಮೊಗದ ||
ಸೊಕ್ಕಿದ ಮದಕರಿಯುಂದದಿ ನೊಸಲೊಳ-
ಗಿಕ್ಕಿದ ಕಸ್ತೂರಿ ತಿಲಕ |
ರಕ್ಕಸರೆದೆದಲ್ಲಣ ಮುರವೈರಿಯೆ
ಮಕ್ಕಳ ಮಾಣಿಕ್ಯ ಜೋಜೋ || ೧ ||

ಕಣ್ಣಬೆಳಗು ಪಸರಿಸುತಿರೆ ಗೋಪಿ—ಅರೆ-
ಗಣ್ಣ ಮುಚ್ಚಿ ನೋಡಿ ನಗುತ |
ಸಣ್ಣ ಬೆರಳುಗಳ ಬಾಯೊಳಗಳವಡಿಸಿ
ಪನ್ನಗಶಯನ ತೊಟ್ಟಿಲಲಿ ||
ನಿನ್ನ ಮಗನ ಮುದ್ದ ನೋಡು ಎಂದೆನುತಲಿ
ತನ್ನ ಪತಿಗ ತೋರಿದಳು |
ಹೊನ್ನ ಬಣ್ಣದ ಸೊಬಗಿನ ಖಣಿಯೆ ಹೊಸ-
ರನ್ನದ ಬೊಂಬೆಯೆ ಜೋಜೋ || ೨ ||

ನಿಡುತೋಳ್ಗಳ ಪಸರಿಸುತಿರೆ ಗೋಪಿಯ
ತೊಡೆಯ ಮೇಲ್ಮಲಗಿ ಬಾಯ್ದೆರೆಯೆ |
ಒಡಲೊಳಗೀರೇಳು ಭುವನವಿರಲು ಕಂಡು
ನಡುಗಿ ಕಂಗಳನು ಮುಚ್ಚಿದಳು ||

ಸಡಗರಿಸುತ ತಾನರಿಯದಂತೆಯೆ
ಹೊಡೆಮರಳಿ ಮೊಗವ ನೋಡುತಲಿ ।
ಕಡಲಶಯನ ಶ್ರೀಪುರಂದರವಿಠಲನು
ಬಿಡದೆ ನಮ್ಮೆಲ್ಲರ ರಕ್ಷಿಸುವ ॥ ೩ ॥

## ೧೬೯

## ಜೋಜೋ ಸುಳಾದಿ

### ಧ್ರುವತಾಳ

ಅಂಬುಧಿ ತೊಟ್ಟಿಲಾಗಿ ಆಲದೆಲೆಯಾಗಿ
ಅನಂತ ಮೃದುಹಾಸಿಗೆಯಾಗಿ ಅಯ್ಯಾ
ವೇದ ನೇಣುಗಳಾಗಿ ವೇದಾಂತದೇವಿಯರು
ಪಾಡಿ ಮುದ್ದಾಡಿ ತೂಗುವರಾಗಿ
ಆದಿಪುರುಷನಾತ, ಅಜಾತ ಅಜನಪಿತ ಅಂಬುಧಿ ತೊಟ್ಟಿಲಾಗಿ
ಅಗಮ್ಯ ಅಗೋಚರನೆ ಶಿಶುವು ಆಗಿ ಅಯ್ಯಾ
ಆ ನಂದನರು ಗೋಪಾಲರು
ಆ ಯಶೋದಾದಿ ಗೋಪಿಯರು
ಇನ್ನೆಂಥ ಪರಮಾನಂದವನುಂಬರೋ
ಪುರಂದರ ವಿಠಲನೊಬ್ಬನೇ ಬಲ್ಲನವ ॥ ೧ ॥

### ಮಟ್ಟತಾಳ

ಜೋಜೋಜೋ ಎನ್ನ ಸಿರಿಹರಿಮೂರುತಿ
ಜೋಜೋಜೋ ಎನ್ನ ಕಂದ ಗೋವಿಂದ
ಜೋಜೋಜೋ ಎನ್ನ ತಮ್ಮ ದಮ್ಮಯ್ಯ
ಜೋಜೋಜೋ ಎನ್ನ ಹೊನ್ನರನ್ನವೇ
ಜೋಜೋಜೋ ಎನ್ನ ಮರಿಯೆ ಬೊಮ್ಮದ ಮರಿಯೆ
ಜೋಜೋಜೋ ಎನ್ನ ಸಿರಿಯೆ ಸುರರ ಸಿರಿಯೆ
ಜೋಜೋಜೋ ಎನ್ನ ಸ್ವಾಮಿ ಸುರರಂತರ್ಯಾಮಿ
ಜೋಜೋಜೋ ಎನ್ನ ಪುರಂದರವಿಠಲ ॥ ೨ ॥

### ತ್ರಿವಿಡಿತಾಳ

ಮಂಥನ ಮಾಡಲೀಯೆ ಮಾಧವ ಮೊಸರು ಮಿಾಸಲು
ಇಂಥದುಂಟೇ ರಂಗ ಬಿಡುಬಿಡು ಕಂಡೆಯಾ ಕಡೆಗೋಲು
ಎಂಥವನೋ ನೀನು ಏಳುತ್ತಾಗಳೆ ಜಗಳ
ಇಂಥದುಂಟೇ ರಂಗ ಬಿಡುಬಿಡು ಕಂಡೆಯಾ ಕಡೆಗೋಲು
ಎಂಥವನೊ ನೀನಂಜದೆ ಎನ್ನಾಳಿದ ಪುರಂದರವಿಠಲ
ಇಂಥದುಂಟೆ ಬಿಡು ರಂಗಾ ಬಿಡುಬಿಡು ಕಂಡೆಯಾ ಕಡೆಗೋಲು ॥ ೩ ॥

### ಅಟತಾಳ

ಅಷ್ಟಮಹಿಷಿಯರು ಸಿಟ್ಟುಗುಟ್ಟಲಿ ಎನ್ನ
ಗೋಪಾಂಗನೆಯರು ನೂಕಿಸಲಿ ಎನ್ನ
ಸೋಳಸಾಸಿರ ಮಂದಿ ಆಳು ಮಾಡಲಿ ಎನ್ನ
ಸೋಳಸಾಸಿರ ಮಂದಿ ಕೀಳುಮಾಡಲಿ ಎನ್ನ
ಪುರಂದರವಿಠಲನ್ನ ಕಂಡಲ್ಲಿ ಬಿಡುವೆನೆ
ಮೇಲೆ ಬಂದುದು ಮತ್ತು ನೋಡಿಕೊಂಬೆನು ನಾನು
ಸೋಳಸಾಸಿರ ಮಂದಿ ॥ ೪ ॥

### ಆದಿತಾಳ

ದೇಹವ ಮಾಡಿದೆ ದೇಹಿಯ ಮಾಡಿದೆ
ದೇಹ ಸಂಬಂಧವ ಮಾಡಿದೆ ಕೂಡಿದೆ
ದೇಹವು ತಾನೆಂಬ ಭ್ರಮೆಯನು ಮಾಡಿದೆ
ಶ್ರೀಹರಿ ವೃಥಾಪ್ರಲಾಪ
ದೇವ ನೀನಾದೆಯೆಲೊ ದೇಹಿ ನಾನಾದೆನು
ಶ್ರೀಧರನಾಮಕ ಪುರಂದರವಿಠಲ ॥ ೫ ॥

### ಜತೆ

ಅನಂತ ಮೂರುತಿ ಅನಂತ ಕೀರುತಿ
ಅನಂತನಾಮಕ ಪುರಂದರವಿಠಲ ॥ ೬ ॥

## ಉದಯಗೀತ

### ೧೭೦

ರಾಗ— ಬಿಲಹರಿ ತಾಳ—ಝಂಪೆ

[1]ಮಾರುತನೆ ಏಳೆಂದು ಎಬ್ಬಿಸಿದಳಂಜನೆಯು
ಶ್ರೀರಾಮಸೇವೆಗೆ ತಡವಾಯಿತೇಳು ॥ ಪ ॥

ಸೇತುಗಟ್ಟಲು ಬೇಕು ಶರಧಿದಾಟಲು ಬೇಕು
ಮಾತೆಗೆ ಉಂಗುರವ ಕೊಡಲು ಬೇಕು ॥
ಪಾತಕಿ ರಾವಣನ ಶಿರವನರಿಯಲು ಬೇಕು
ಸೀತೆಪತಿ-ರಾಮರಿಗೆ ನಮಿಸಬೇಕು ॥ ೧ ॥

ಇಂತು ಕಳಿಯಲು ಬೇಕು ಅಜ್ಞಾತವಾಸವನು
ಪಂಥದಲಿ ಕೀಚಕರ ಒದೆಯ ಬೇಕು ॥
ತಂತ್ರದಲಿ ಗೆಲಬೇಕು ಶಕುನಿದುರ್ಯೋಧನರ
ಕುಂತಿನಂದನನೆಂದು ಹೆಸರಾಗಬೇಕು ॥ ೨ ॥

ಮಧ್ವರಾಯರು ಎಂದು ಪ್ರಸಿದ್ಧರಾಗಲು ಬೇಕು
ತಿದ್ದಿ ಹಾಕಲು ಬೇಕು ಸಕಲಗ್ರಂಥಗಳ ॥
ಅದ್ವೈತವಾದಿಗಳ ಗೆದ್ದು ಕೆಡಹಲು ಬೇಕು
ಮುದ್ದು ಪುರಂದರವಿಠಲ ದಾಸನೆನಿಸಲು ಬೇಕು ॥ ೩ ॥

### ೧೭೧

ರಾಗ—ಶ್ರೀರಾಗ ತಾಳ— ಅಟ

[2]ಕೋಳಿ ಕೂಗಿತಲ್ಲಾ—ಲಕ್ಷ್ಮೀ—
ಲೋಲನಲ್ಲದೆ ಅನ್ಯರಾರಿಲ್ಲವೆಂದು ॥ ಪ ॥

---

೧) ಇ ಮತ್ತು ಖ ಹಸ್ತಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತಿದೆ.
೨) ಅ. ಇದೊಂದೇ ಪ್ರತಿಯಲ್ಲಿ ಸಿಕ್ಕುತ್ತಿದೆ. ಇದ್ದ ಹಾಗೆ ಬರದಿದೆ.

ಮೊದಲ ಜಾವದಲಿ ಮುಕುಂದನೆಂದು ಕೂಗಿ
ಎರಡಲಿ ಶ್ರೀವೇಂಕಟಾದ್ರಿಯೆಂದು ||
ಉರಗಗಿರಿಯ ವಾಸ ಯಾದವಕುಲ ಗೊಲ್ಲ
ಚದುರ ಚಲ್ಲಪಿಲ್ಲಿ ರಾಯನಲ್ಲದಿಲ್ಲವೆಂದು || ೧

ಮೂರು ಜಾವದಲಿ ಮುರಾರಿಯೆಂದು ಕೂಗಿ
ನಾಕರಲ್ಲಿ ನಾರಾಯಣಯೆನಲು ||
ಕ್ಷೀರಾಬ್ಧಿಯ ವಾಸ ಲಕ್ಷ್ಮೀಪತಿ ಕೋ-
ನೇರಿವಾಸ ವೆಂಕಟಕೃಷ್ಣರಾಯನೆಂದು || ೨

ಪರಮಪುರುಷ ಮುಖ್ಯ ಆಧಾರಭೂತ
ಕರುಣದ ಪುಂಜನು ಜಗದಾದಿ ತಾ ||
ಕಮಲಸಂಭವ ಮುಖ್ಯ ಕಾರುಣ್ಯಮೂರುತಿ
ವಿಮಲಕಾಪುರ ತಿಮ್ಮರಾಯನಲ್ಲದಿಲ್ಲವೆಂದು || ೩

ರೆಕ್ಕೆಯ ಬಿಚ್ಚಿ ಪಸರಿಸಿ ಡಂಗುರಹೊಯ್ದು
ಕೊಕ್ಕನು ಮೇಲೆ ನೆಗಹಿಕೊಳುತ ||
ಚಕ್ಕನೆ ಕೇರಿಕೇರಿಯಗುಂಟ ಸಾಗುತ
ಮುಕ್ಕುಂದನಲ್ಲದೆ ಅನ್ಯರಾರಿಲ್ಲವೆಂದು || ೪

ಐದುಜಾವದಲಿ ಅನಂತನೆಂದು ಕೂಗಿ
ಆರರಲ್ಲಿ ಅಳಗಾದ್ರೀಶಯೆಂದು ||
ಏಳರಲ್ಲಿ ಕಾಶಿಯ ಬಿಂದುಮಾಧವ
ಎಂಟಕೆ ಪುರಂದರವಿಠಲರಾಯನೆಂದು || ೫ ||

## ೧೨೨

ರಾಗ--ಬಿಲಹರಿ      ತಾಳ--ಅಟ

ಈಗಲುಪ್ಪವಡಿಸಿದಳು ಇಂದಿರಾದೇವಿ
ಯೋಗರತಿನಿದ್ರೆತಿಳಿದು || ಪ ||

ಕಡೆಗಣ್ಣ ಕಪ್ಪ ಅಂಗೈಯಿಂದಲೊರಸುತ
ಸಡಿಲಿದ ತುರುಬ ಬಿಗಿದು ಕಟ್ಟುತ ||
ನಡುವಿನೊಡ್ಯಾಣವ ನಟನೆಯಿಂ ತಿರುವುತ
ಕಡಗ-ಕಂಕಣ-ಬಳೆ ಕರದಿ ಘಲ್ಲೆನುತ || ೧ ||

ಕೊರುಗುರಗಾಯವನು ಕೊನೆಬೆರಳಲೊತ್ತುತ
ಹಾರದ ತೊಡಕನು ಬಿಚ್ಚಿ ಹಾಕುತ ||
ಜಾರಿದ ಜಾಜಿದಂಡೆ ಸರವನೀಡಾಡುತ
ಮೋರೆಯ ಕಿರುಬೆವರ ಮುಂಜೆರಗಿಲೊರಸುತ || ೨ ||

ಕಕ್ಕಸಕುಚದೊಳಿರ್ದ ಕಸ್ತುರಿಯನೊರಸುತ
ಚಕ್ಕನೆ ಕನ್ನಡಿಯೊಳು ಮುಖನೋಡುತ ||
ಅಕ್ಕರದ ತಾಂಬೂಲ ಸರಸದಿಂದುಗುಳುತ
ಚೊಕ್ಕ ಪುರಂದರವಿಠಲನ ನೋಡಿ ನಗುತ || ೩ ||

## ೧೨೩

ರಾಗ—ಮೋಹನ      ತಾಳ – ಅಟ

ರಂಗನಾಯಕಸ್ವಾಮಿ ರಾಜೀವಲೋಚನ
ಬೆಳಗಾಯಿತೇಳೆನ್ನುತ
ಅಂಗನೆ ಲಕುಮಿ ತಾ ಪತಿಯನೆಬ್ಬಿಸಿದಳು
ಶೃಂಗಾರದ ನಿದ್ರೆ ಸಾಕೆನ್ನುತ || ಪ ||

ಪಕ್ಷಿರಾಜನು ಬಂದು ಬಾಗಿಲೊಳಗೆ ನಿಂದು
ಅಕ್ಷಿತೆರೆದು ಬೇಗ ಈಕ್ಷಿಸೆಂಬ ||
ಪಕ್ಷಿಜಾತಿಗಳೆಲ್ಲ ಚಿಲಿಪಿಲಿಗುಟ್ಟುತ
ಸೂಕ್ಷ್ಮದಲಿ ನಿನ್ನನು ಸ್ಮರಿಸುವುವೊ ಕೃಷ್ಣ || ೧ ||

ಸನಕ-ಸನಂದನ-ಸನತ್ಸುಜಾತರು ಬಂದು
ವಿನಯದಿ ಕೈಮುಗಿದು ಓಲೈಪರು ||
ಘನ ಶುಕ-ಶೌನಕ-ವ್ಯಾಸ-ವಾಲ್ಮೀಕರು
ನೆನೆದು ಕೊಂಡಾಡುವರೊ ಹರಿಯೇ || ೨ ||

ಸುರರು ಕಿನ್ನರರು ಕಿಂಪುರುಷರು ಉರಗರು
ಪರಿಪರಿಯಲಿ ನಿನ್ನ ಸ್ಮರಿಸುವರು ||
ಅರುಣನು ಬಂದುದಯಾಚಲದಲಿ ನಿಂದ
ಕಿರಣ ತೋರುವ ಭಾಸ್ಕರನು ಶ್ರೀಹರಿಯೇ || ೩ ||

ಪದುಮನಾಭನೆ ನಿನ್ನ ನಾಮಾಮೃತವನು
ಪದುಮಾಕ್ಷಿಯರು ತಮ್ಮ ಮನೆಯೊಳಗೆ ||
ಉದಯದೊಳೆದ್ದು ಸವಿದಾಡುತ ಪಾಡುತ
ದಧಿಯ ಕಡೆವರೇಳು ಮಧುಸೂದನ ಕೃಷ್ಣ || ೪ ||

ಮುರಮಥನನೆ ನಿನ್ನ ಚರಣದ ಸೇವೆಯು
ಕರುಣಿಸಬೇಕೆಂದು ತರುಣಿಯರು ||
ಪರಿಪರಿಯಿಂದಲಿ ಸ್ಮರಿಸಿ ಹಾರೈಪರು
ಪುರಂದರವಿಠಲ ನೀನೇಳೊ ಹರಿಯೇ || ೫ ||

## ೧೭೪

ರಾಗ—ಭೂಪಾಳಿ　　　　ತಾಳ—ಝಂಪೆ

ಉಪ್ಪವಡಿಸಯ್ಯ ಹರಿಯೇ ॥ ಪ ॥

ಏಳೈ ಹೃಷೀಕೇಶ ಏಳು ರವಿ-ಶಶಿನಯನ
ಏಳು ಪಶುಗಳ ಕಾಯ್ದು ಪಾಲಿಸಿದೆ ಗೋಕುಲವ
ಏಳು ಸುರವಂದಿತನೆ ಏಳು ಭೂಸತಿರಮಣ
ಉಪ್ಪವಡಿಸಯ್ಯ ಹರಿಯೇ ॥ ಅ.ಪ ॥

ಪಚ್ಚೆ ಮುಡಿವಾಳಗಳು ಅಚ್ಚ ಸೇವಂತಿಗೆಯು
ಬಿಚ್ಚುಮಲ್ಲಿಗೆ ಜಾಜಿ ಸಂಪಿಗೆಯು ಪುನ್ನಾಗ
ಅಚ್ಚರಿಯ ಬಕುಲ ಕೆಂಜಾಜಿ ಕೇತಕಿ ಕುಸುಮ
ಗುಚ್ಛಗಳ ಪಿಡಿದುಕೊಂಡು ॥
ಅಚ್ಚಜಾಣೆಯರು ಶ್ರೀಗಂಧ ಕಸ್ತೂರಿ ಪುನುಗು
ಬಿಚ್ಚು ಬಿಳಿಯೆಲೆಯಡಿಕೆ ಪಿಡಿದು ನಿಂತಿಹರಯ್ಯ
ಮುಚ್ಚುತಿವೆ ತಾರೆಗಳು ಹೆಚ್ಚುತಿವೆ ರವಿಕಿರಣ
ಅಚ್ಯುತನೆ ಉಪ್ಪವಡಿಸೋ ॥ ೧ ॥

ಚೆನ್ನೆಯರು ಚದುರೆಯರು ಸುಗಣಸಂಪನ್ನೆಯರು
ಪನ್ನೀರುತುಂಬಿರ್ದ ಪೊನ್ನ ತಂಬಿಗೆಗಳನು
ರನ್ನಗನ್ನಡಿಯನ್ನು ಪಿಡಿದು ನಿಂತಿರುವರೈ
ಪನ್ನಂಗಶಯನ ಏಳೈ ॥
ಮನ್ನಣೆಯ ನಾರದರು ಮೊದಲಾದ ಮುನಿನಿಕರ
ನಿನ್ನ ಮಹಿಮೆಗಳನ್ನು ಪಾಡಿ ನಲಿಯುವರಯ್ಯ
ಇನ್ನು ಏಳೇಳು ಉದಯದ ಸಮಯ ಸಿರಿಯರಸ
ಚೆನ್ನಿಗನೆ ಉಪ್ಪವಡಿಸೊ ॥ ೨ ॥

ದೇವದುಂದುಭಿ ಮೊಳಗೆ ದೇವಕನ್ನೆಯರೆಲ್ಲ
ದೇವಾಂಗ ವಸ್ತ್ರವನು ಪಿಡಿದು ನಿಂತಿಹರಯ್ಯ

ದೇವದೇವೇಶ ನಿಮ್ಮೋಲಗದ ಸಂಭ್ರಮಕೆ
ದೇವತೆಗಳೆಲ್ಲ ನೆರೆದು ||
ದೇವ ಪ್ರಹ್ಲಾದ ಬಲಿ ಮುಖ್ಯರನು ಕಾಯ್ದವನೆ
ದೇವ ಬ್ರಹ್ಮನ ಪಡೆದ ದೇವಗಂಗೆಯ ಪಿತನೆ
ದೇವ-ದೇವೋತ್ತಮನೆ ದೇವಾಧಿದೇವ ಪುರಂದರ
ವಿಠಲ ಉಪ್ಪವಡಿಸೋ || ೩ ||

೧೭೫

ರಾಗ--ಸಾವೇರಿ ತಾಳ—ಝಂಪೆ

[1]ಏಳಯ್ಯ ಬೆಳಗಾಯಿತು || ಪ ||

ಬೆಳಗಾಯಿತೇಳಯ್ಯ ಬಿಸಿಲು ಮೈದೋರುತಿದೆ
ಸುಳಿವುದೋರ್ಮೆ ನಿನ್ನ ಹಾರಯ್ಸಿನಿಂದಿಹರು
ತಳುವ ಮಾಡದಿರಯ್ಯ ಸ್ವಾಮಿ ತಿರುಮಲೆರಾಯ
ಸೆಳೆಮಂಚದಿಂದಲೇಳು || ಅ. ಪ ||

ವೇದವನು ತರಲೇಳು ಮಂದರವ ಹೊರಲೇಳು
ಭೇದಿಸುತ ಅಸುರರನು ಭೂಮಿಯ—ತರಲೇಳು
ಕಾದಿ ಹಿರಣ್ಯನ ಕರುಳ ಕೊರಳೊಳಗೆ ಧರಿಸೇಳು
ಕಾದು ಬಲಿ ಬಾಗಿಲೊಳಗೆ ||
ಭೇದದಲಿ ಭೂಮಿಯ ತ್ರಿಪಾದದಿಂದಳೆಯೇಳು
ಭೇಧಿಸುತ ಕ್ಷತ್ರಿಯರ ಕೊಡಲಿಯಿಂ ಕಡಿಯೇಳು
ಸಾಧಿಸುತ ಶರಧಿಯಲಿ ಸೇತುವೆಯ ಕಟ್ಟೇಳು
ನಂದಗೋಪನ ಉದರದಿ || ೧ ||

---

೧) ಈ ಹಾಡು ವಾರ್ಧಿಕ ಷಟ್ಪದಿಯಲ್ಲಿದೆ. ಇದರ ಮೊದಲಿನ ಎರಡು ನುಡಿಗಳು ಪ್ರಾಸಬದ್ಧವಾಗಿವೆ. ಆದರೆ ಮುಂದಿನ ಮೂರು ನುಡಿಗಳ ಪೂರ್ವಾರ್ಧ ಮತ್ತು ಉತ್ತರಾರ್ಧಗಳ ಪ್ರಾಸಗಳು ಬೇರೆಯಾಗಿವೆ. ದಾಸರು ಇದೊಂದು ಬಗೆಯ ರಚನೆಯೆಂದು ಮಾಡಿದರೊ ಅಥವಾ ಉತ್ತರಾರ್ಧಗಳು ಕಳೆದಿವೆಯೊ ತಿಳಿಯದಾಗಿದೆ.

ಪುರಮೂರ ಗೆಲಬೇಕು ಅರಿವೆಯನು ಕಳೆದೇಳು
ದುರುಳರನು ಕೊಲಬೇಕು ತುರಗವಾಹನನಾಗು
ಪಾಪಿಯ ಕೆಲಸಗಳ ಮಾಡಲುದ್ಯೋಗಿಸದೆ
ಮರೆತು ನಿದ್ರೆಯ ಗೈವರೆ ||

ಉರಿಗೈಯನಟ್ಟಿದರೆ ಹರನೋಡಿಬಂದಿಹನು
ಗಿರಿಜೆ ವರವನು ಬೇಡಬೇಕೆಂದು ನಿಂದಿಹಳು
ಸುರಪಾರಿಜಾತವನು ಕೊಂಡು ಸುರರಾಜ ಬಂ-
ದಿರುವನೇಳಯ್ಯ ಹರಿಯೆ || ೨ ||

ಅಲದೆಲೆಯಿಂದೇಳು ಮಾಲಕುಮಿ ಬಂದಿಹಳು
ಹಾಲುಗಡಲಿಂದೇಳು ಶ್ರೀದೇವಿನಿಂದಿಹಳು
ಕಾಲಹೆಡೆಯಿಂದೇಳು ಭೂದೇವಿ ಬಂದಿಹಳು
ಸಾಲಮಂಚಗಳಿಂದಲಿ ||

ಕ್ಷಿತಿನಾಥ ನೀನೇಳು ಸತ್ಯಭಾಮೆ ಬಂದಿಹಳು
ಮತಿವಂತ ನೀನೇಳು ಜಾಂಬವತಿ ಬಂದಿಹಳು
ಗತಿವಂತ ನೀನೇಳು ಶ್ರೀತುಳಸಿ ಬಂದಿಹಳು
ಏಕಾಂತ ಸೇವೆಯ ಮಾಡಲು || ೩ ||

ಅಂಬುರುಹದಿಂದ ಜನಿಸಿದ ಬ್ರಹ್ಮ ಬಂದಿಹನು
ಗಂಭೀರ ಗಾಯನದ ನಾರದನು ನಿಂದಿಹನು
ರಂಭೆ-ಮೇನಕೆ ಮೊದಲು ನರ್ತನಕೆ ಐದಿಹರು
ಶಂಬರಾರಿಪಿತನೆ ಏಳು ||

ರಾಜಸೂಯವಕೊಳಲು ವಾಯುಸುತ ಬಂದಿಹನು
ತೇಜಿಯನಾಟಕೆ ಅರ್ಜುನನು ಕರೆಯಬಂದಿಹನು
ಸಾಮಧರ್ಮಜ ಅಗ್ರಪೂಜೆ ಮಾಡುವೆನೆಂದು
ಪೂಜೆಯನೆ ಪಿಡಿದುಕೊಂಡು || ೪ ||

ದೇವ ನಿನ್ನಂಘ್ರಿಯನು ಪೂಜೆ ಮಾಡುವೆನೆಂದು
ಕಾವೇರಿ ಕೃಷ್ಣೆ ಗೌತಮಿ ಗಂಗೆ ಮಲಪಹರಿ
ಸಾವಧಾನದಿ ಯಮುನೆ ತುಂಗಾ ಸರಸ್ವತೀ ಭೀಮರಥಿ
ನೇತ್ರಾವತಿ ||

ದುರಿತಬಂಧನವನ್ನು ಪರಿಹರಿಸಿದೆಯೊ ಸ್ವಾಮಿ
ದುರಿತ ದುಷ್ಕರ್ಮವನು ದೇವ ಎಂದರೆ ಸುಡುವೆ
ದುರಿತ ತಾಪಕೆಚಂದ್ರ ನೀನೆನಿಸಿಕೊಂಡೆಯೊ
ಶ್ರೀಪುರಂದರವಿಠಲನೆ ||೫||

### ೧೭೬

ರಾಗ—ಬಿಲಹರಿ ತಾಳ—ಅಟ

[೧]ಏಳಯ್ಯ ಶ್ರೀಹರಿ ಬೆಳಗಾಯಿತು ||ಪ||

ಏಳು ದೇವಕಿತನಯ ನಂದನ ಕಂದ
ಏಳು ಗೋವರ್ಧನ ಗೋವಳರಾಯ ||
ಏಳು ಮಂದರಧರ ಗೋವಿಂದ ಫಣಿಶಾಯಿ
ಏಳಯ್ಯ ನಲಿದು ಉಪ್ಪವಡಿಸಯ್ಯ ||೧||

ಕ್ಷೀರಸಾಗರವಾಸ ಬೆಳಗಾಯಿತು ಏಳು
ಮೂರುಲೋಕದರಸು ಒಡೆಯ ಲಕ್ಷ್ಮೀಪತಿ ||
ವಾರಿಜನಾಭನೆ ದೇವದೇವೇಶನೆ
ಈರೇಳು ಲೋಕಕಾಧಾರ ಶ್ರೀಹರಿಯೇ ||೨||

ಸುರರು ದೇವತೆಗಳು ಅವಧಾನ ಎನುತಿರೆ
ಸುರವನಿತೆಯರೆಲ್ಲ ಆರತಿ ಪಿಡಿದಿರೆ ||
ನೆರೆದು ಊರ್ವಸಿ ಭರದಿ ನಾಟ್ಯಮಾಡಲು
ಕರುಣಿಸೊ ಪುರಂದರವಿಠಲ ನೀನೇಳೋ ||೩||

---

೧) ಆ. ಪ್ರತಿಯಲ್ಲಷ್ಟೇ ಸಿಕ್ಕುತ್ತಿದೆ.

## ೧೭೭

ರಾಗ—ಭೂಪಾಳಿ ತಾಳ — ಝಂಪೆ

ಏಳಯ್ಯ ಬೆಳಗಾಯಿತು ‖ ಪ ‖

ಏಳು ನಾರಾಯಣ ಏಳು ಲಕ್ಷ್ಮೀರಮಣ
ಏಳು ಶ್ರೀಗಿರಿಯೊಡೆಯ ವೆಂಕಟೇಶ ‖ ಅ. ಪ ‖

ದಾಸರೆಲ್ಲರು ಬಂದು ಧೂಳಿದರ್ಶನಗೊಂಡು
ಲೇಸಾಗಿ ತಾಳದಂಡಿಗೆಯ ಪಿಡಿದು ‖
ಕೇಶವನೆ ನಿಮ್ಮ ಸಿರಿನಾಮವನೆ ಸ್ಮರಿಸುತಲಿ
ವಾಸುದೇವನೆ ಉದಯದಲಿ ಪಾಡುತಿಹರು ‖ ೧ ‖

ಕಾಸಿದ್ದ ಹಾಲುಗಳ ಕಾವಡಿಯ ತುಂಬಿಟ್ಟು
ಲೇಸಾಗಿ ಕೆನೆಮೊಸರು ಬೆಣ್ಣೆಯನು ಮೆದ್ದು ‖
ಶೇಷಶಯನನೆ ಏಳು ಸಮುದ್ರ ಮಥನವ ಮಾಡು
ದೇಶ ಕೆಂಪಾಯಿತೇಳಯ್ಯ ಹರಿಯೇ ‖ ೨ ‖

ಅರಳು ಮಲ್ಲಿಗೆ ಜಾಜಿ ಪರಿಮಳದ ಪುಷ್ಪಗಳ
ಸುರರು ತಂದಿಹರಯ್ಯ ಸುಜನರೊಡೆಯ ‖
ಅರವಿಂದಲೋಚನನೆ ಕೋಳಿಕೂಗಿತು ಕೇಳು
ಪುರಂದರವಿಟ್ಠಲನೆ ಬೆಳಗಾಯಿತು ‖ ೩ ‖

## ೧೭೮

### ಉಗಾಭೋಗ

ಇಂದಿನ ದಿನವೇ ಶುಭದಿನವು
ಇಂದಿನ ವಾರವೆ ಶುಭವಾರ
ಇಂದಿನ ತಾರೆಯೆ ಶುಭತಾರೆ
ಇಂದಿನ ಯೋಗವೆ ಶುಭಯೋಗ
ಇಂದಿನ ಕರಣವೆ ಶುಭಕರಣ
ಇಂದು ಪುರಂದರವಿಟ್ಠಲರಾಯನ
ಸಂದರುಶನಫಲವೆಮಗಾಯಿತ್ತು !

ಶ್ರೀಕೃಷ್ಣಾರ್ಪಣಮಸ್ತು

# ಈ ಪರಿಶಿಷ್ಟದಲ್ಲಿ ಏನೇನಿದೆ?

೧) ಹಾಡುಗಳಿಗೆ ಸಂದರ್ಭ ಹೇಳಲಾಗಿದೆ,

೨) ಸಮಾಖ್ಯೆಗಳನ್ನು ಕೊಡಲಾಗಿದೆ.

೩) ಕಥಾಸಂದರ್ಭಗಳನ್ನು ಸೂಚಿಸಲಾಗಿದೆ.

೪) ಪಾರಿಭಾಷಿಕ ಶಬ್ದಗಳ ವಿವರಣೆಯಿದೆ.

೫) ಕಠಿನಶಬ್ದಗಳ ಅರ್ಥವನ್ನು ಹೇಳಲಾಗಿದೆ.

೬) ಅಲ್ಲಲ್ಲಿ ಸಂಬಂಧಿಸಿದ ಭೌಗೋಲಿಕ, ಐತಿಹಾಸಿಕ ಸಂಗತಿಗಳನ್ನು ವಿವರಿಸಲಾಗಿದೆ,

# ಹರಿಃ ಓಂ

## ೧ನೆಯ ಹಾಡು

ಶ್ರೀಪುರಂದರದಾಸರು ಮಧ್ವಮತಾನುಯಾಯಿಗಳು. ಮಾಧ್ವ (ದ್ವೈತ) ತತ್ತ್ವಶಾಸ್ತ್ರದಲ್ಲಿ ಶ್ರೀವಿಷ್ಣು ಸರ್ವೋತ್ತಮನಾದುದರಿಂದ, 'ವಂದೇ ವಿಷ್ಣುಂ ನಮಾಮಿ ಶ್ರಿಯಮಥಚ ಭುವಂ ಬ್ರಹ್ಮ ವಾಯುಂಚ ವಂದೇ... (ತಾರತಮ್ಯ ಸ್ತೋತ್ರ) ಎಂಬ ಪ್ರಮಾಣಕ್ಕನುಗುಣವಾಗಿ "ಶ್ರೀಪತಿಯು ನಮಗೆ ಸಂಪದವೀಯಲಿ" ಎಂದು ಮಂಗಳಾಚರಣವನ್ನು ದಾಸರು ಮಾಡಿರುವರು. ಅವರ ಸಮಕಾಲೀನರಾದ ಶ್ರೀಮದ್‌ವಾದಿರಾಜ ಶ್ರೀಪಾದಂಗಳು ಕೂಡ 'ಯುಕ್ತಿಮಲ್ಲಿಕೆಯಲ್ಲಿ ಇದೇ ಬಗೆಯಾಗಿ 'ಶ್ರೀಶಸ್ತೇ ಸುಶ್ರಿಯಂ ದದ್ಯಾತ್...' ಎಂದು ಮಂಗಳಾಚರಣವನ್ನು ಮಾಡಿರುವರು. ಮಂಗಳವನ್ನೇಕೆ ಮಾಡಬೇಕು ? ಅದಕ್ಕೆ ಪ್ರಮಾಣವೇನು ? ಎಂದರೆ "ಸಮಾಪ್ತಿಕಾಮೋ ಮಂಗಲಮಾಚರೇತ್" ಎಂದು ಅನುಮಿತಶ್ರುತಿಯು ಸಾರುತ್ತಿದೆ. (ತರ್ಕದೀಪಿಕಾ)

ವಿ. ಸೂ :— ಶ್ರೀಮಧ್ವಾಚಾರ್ಯರು, ಪರಮಾತ್ಮನಿಂದ ಮೊದಲುಮಾಡಿ ಮನುಷ್ಯೋತ್ತಮರ ವರೆಗೆ ಅವರವರ ಗುಣತಾರತಮ್ಯಾನುಸಾರವಾಗಿ ಸ್ಥಾನಭೇದಗಳನ್ನು ಪ್ರಾಚೀನ ಪ್ರಮಾಣಗಳಿಂದ ವಿವರಿಸಿರುವರು. ಇವುಗಳಿಗೆ 'ಕಕ್ಷ' ಎಂದು ಪರಿಭಾಷಾನಾಮವಿದೆ. ಒಟ್ಟು ೩೨ ಕಕ್ಷಗಳು.

**ಶ್ರೀಪತಿ** = ಲಕ್ಷ್ಮೀಪತಿ, ವಿಷ್ಣು (ಕಕ್ಷ ೧)

**ವಾಣೀಪತಿ** = ಚತುರ್ಮುಖನು. ಪರಮಾಯುಃ (ಕಕ್ಷ ೨)

**ಸುರರಗಣವನು ಪೊರೆಯೆ......**:—ಸಮುದ್ರಮಥನದ ಕಥೆಯನ್ನು ನೆನೆಸಿಕೊಳ್ಳಬೇಕು.

(ಭಾರತ ಆದಿಪರ್ವ ೧೮, ಭಾಗವತ ಎಂಟನೆಯ ಸ್ಕಂಧ)

**ಹರ** = ರುದ್ರದೇವರು; ಅಹಂಕಾರಾಭಿಮಾನಿಗಳು. ಬುದ್ಧಿಪ್ರೇರಕರು. (ಕಕ್ಷ ೫)

**ನಿತ್ಯಭೋಗ**=ಸಕಾಮಕರ್ಮಗಳ ಸತ್ಫಲ.

**ಪುರುಹೂತ**=ಇಂದ್ರ (ಕಕ್ಷ ೮).

**ವಿಘ್ನೇಶ**=ಗಣಪತಿ (ಕಕ್ಷ ೧೮)

(ಮತ್ಸ್ಯಪುರಾಣ ೧೫೩, ಸ್ಕಾಂದ, ಕೌಮಾರ ಖಂಡ ೨೮)

**ಅಶ್ವಿನಿಗಳು**=ಅಶ್ವಿನೀದೇವತೆಗಳು— ಅಧಿವ್ಯಾಧಿಗಳನ್ನು ಪರಿಹಾರ ಮಾಡಿ ಸಾಧನಕ್ಕೆ ಸಹಕಾರಿಗಳಾಗಿರುವವರು. (ಕಕ್ಷ ೧೮)

**ಸುಜ್ಞಾನ**= ಮೋಕ್ಷಜ್ಞಾನ.

**ಮಧ್ವರಾಯ**=ದ್ವೈತಮತಸ್ಥಾಪಕರಾದ ಶ್ರೀಮಧ್ವಾಚಾರ್ಯರು: ಇವರಿಗೆ ಸುಖತೀರ್ಥ, ಆನಂದತೀರ್ಥ, ಪೂರ್ಣಪ್ರಜ್ಞ, ಅಲವಬೋಧ. ಸರ್ವಜ್ಞ, ದಶಪ್ರಮತಿ ಮುಂತಾದ ಹೆಸರುಗಳಿವೆ.

**ಸುರರು**=ದೇವತೆಗಳು:—ಯಜ್ಞಸಾಧನಾಭಿಮಾನಿಗಳಾದ ದೇವತೆಗಳು (ಕಕ್ಷ ೧೯).

## ೨ನೆಯ ಹಾಡು

**ಎಣೆ**=ಸರಿ, ಸಮಾನ.

**ಎಲ್ಲಿ ಹರಿಕಥಾಪ್ರಸಂಗವೋ:**—ಸಂಸ್ಕೃತ ಮಂಗಳಾಚರಣದ ಕೊನೆಯ ಶ್ಲೋಕವೇ ಇದಕ್ಕೆ ಆಧಾರ.

**ಜಯಜಯಾಹರಿ....:**—'ತದೇವಲಗ್ನಂ ಸುದಿನಂ ತದೇವ' ಎಂಬ ಶ್ಲೋಕವನ್ನು ಸ್ಮರಿಸಿಕೊಳ್ಳಬೇಕು

## ೩ನೆಯ ಹಾಡು

ಇದರಲ್ಲಿ ದ್ವೈತಸಂಪ್ರದಾಯಕ್ಕನುಸರಿಸಿ ಆರೋಹಣಕ್ರಮದ ದೇವತಾ-ತಾರತಮ್ಯವಿದೆ,

**ಗಣನಾಥ**=ಗಣಪತಿ. (ಕಕ್ಷ ೧೮)

**ಪಾರ್ವತೀದೇವಿ**=ರುದ್ರದೇವರ ಹೆಂಡತಿ, ಮತಿಪ್ರೇರಕಳು, (ಕಕ್ಷ ೭)

**ಮುಕುತಿಪಥಕೆ ಮನವ ಈವ ಮಹಾರುದ್ರದೇವರು:**-ರುದ್ರರು ಅಹಂಕಾರತತ್ತ್ವಾಭಿಮಾನಿ ದೇವತೆಗಳಾದುದರಿಂದ, ಮಾನವನ ಮನಸ್ಸನ್ನು ಮುಕ್ತಿಯ ಹಾದಿಗೆ ಒಯ್ಯುವವರು. (ಕಕ್ಷ ೫)

**ಭಾರತೀದೇವಿ**=ವಾಯುಪತ್ನಿ, ಮನಸ್ಸಿನಲ್ಲಿ ಭಕ್ತಿಯನ್ನು ಪ್ರಚೋದಿಸುವವಳು. (ಕಕ್ಷ ೪)

**ಯುಕುತ ಶಾಸ್ತ್ರಗಳಲ್ಲಿ**=ಸಾತ್ತ್ವಿಕ ಶಾಸ್ತ್ರಗಳಲ್ಲಿ,(ಯುಕುತಿ ಶಾಸ್ತ್ರಗಳಲ್ಲಿ—ಎಂಬ ಪಾಠಾಂತರವೂ ಇದೆ. ಯುಕುತಿಶಾಸ್ತ್ರ=ಬ್ರಹ್ಮಮೀಮಾಂಸಾ ಶಾಸ್ತ್ರ.)

**ವನಜಸಂಭವನರಸಿ**=ಸರಸ್ವತಿ, ಚತುರ್ಮುಖಬ್ರಹ್ಮನರಾಣಿ. (ಕಕ್ಷ ೪)

**ಪವಮಾನ**=ವಾಯುದೇವರು. ಸತ್ಕರ್ಮಗಳನ್ನು ಮಾಡಿಸಿ ಸುಜ್ಞಾನ ಕೊಟ್ಟು ಸದ್ಗತಿಯ ನೀಡುವವರು. (ಕಕ್ಷ ೩)

**ರಮಾ**=ಲಕ್ಷ್ಮೀದೇವಿ, ವಿಷ್ಣುಪತ್ನಿ—ಇವಳು ನಿತ್ಯಮುಕ್ತಳು. ಉಳಿದ ದೇವತೆಗಳಿಗಿಂತಲೂ ಪರಮಾತ್ಮನ ಬಗೆಗೆ ಹೆಚ್ಚಿನ ಜ್ಞಾನವುಳ್ಳವಳು. ಪರಮಾತ್ಮನಿಗೆ ಸಕಲ ಭೋಗಗಳನ್ನರ್ಪಿಸಿ ಆತನ ಸೇವೆಯಲ್ಲಿ ರತಳಾದವಳು. ಪರಮಾತ್ಮನ ಆಜ್ಞೆಯಂತೆ ಸುಜೀವಿಗಳಿಗೆ ಕರ್ಮಾನುಸಾರ ಮಾನಸಿಕ ಆನಂದ ಸುಖಪ್ರದಳು. (ಕಕ್ಷ ೨)

## ೪ನೆಯ ಹಾಡು

ಈ ಹಾಡಿನಲ್ಲಿ ದಾಸರು, ಶ್ರೀಮದಾನಂದತೀರ್ಥರ ಪೀಠಸ್ಥ ಗುರು-ಪರಂಪರೆಯನ್ನು ಹೇಳಿದ್ದಾರೆ:

ಶ್ರೀಮನ್ನಾರಾಯಣ (ಹಂಸನಾಮಕಪರಮಾತ್ಮ)
|
ಚತುರ್ಮುಖಬ್ರಹ್ಮ
|
ಸನಕಾದಿಗಳು (ಬ್ರಹ್ಮನ ಮಾನಸಪುತ್ರರು)
|

ದುರ್ವಾಸರು (ದುರ್ವಾಸರ ವರೆಗೆ ಭಾಗವತಸಂಪ್ರದಾಯ
| ದವರು ಇದೇ ಪೀಳಿಗೆ ಹಿಡಿಯುತ್ತಾರೆ),
ಪರತೀರ್ಥರು
|
ಸತ್ಯಪ್ರಜ್ಞರು
|
ಪ್ರಾಜ್ಞತೀರ್ಥರು
|
ಅಚ್ಯುತಪ್ರೇಕ್ಷರು
|
ಪೂರ್ಣಪ್ರಜ್ಞರು

ಬ್ರಹ್ಮಾಂತಾ ಗುರವಃಸಾಕ್ಷಾತ್ ಇಷ್ಟಂ ದೈವಂ ಶ್ರಿಯಃಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತುಮೇ ಜನ್ಮಜನ್ಮನಿ ॥ ಎಂದು ಸಕಲ ಮಾಧ್ವರು, ನಿತ್ಯವೂ ಈ ಗುರುಪರಂಪರೆಯನ್ನು ಸ್ಮರಿಸುವ ರೂಢಿಯಿದೆ.

ಮಾಧ್ವಪೀಠಗಳಲ್ಲಿ ಪರಂಪರೆಯನ್ನು ಹೇಳುವ ಶ್ಲೋಕಗಳಿವು:

ಶ್ರೀಹಂಸಂ ಪರಮಾತ್ಮಾನಂ ವಿರಿಂಚಿಂ ಸನಕಾದಿಕಾನ್ ।
ದುರ್ವಾಸಸೋ ಜ್ಞಾನನಿಧೀನ್ಸ್ವೇಂದ್ರಪಾಪನತೀರ್ಥಕಾನ್ ॥ ೧ ॥

ಕೈವಲ್ಯತೀರ್ಥಾನ್ ಜ್ಞಾನೇಶಾನ್ ಪರತೀರ್ಥಾನ್ನಮಾಮ್ಯಹಮ್ ।
ಸತ್ಯಪ್ರಜ್ಞಾನ್ ಪ್ರಾಜ್ಞತೀರ್ಥಾನ್ ಅನ್ಯಾನ್ ತದ್ವಂಶಜಾನಪಿ ॥ ೨ ॥

ಪುರೈವ ಕೃಷ್ಣಸಿದ್ಧಾನ್ನಭುಕ್ತ್ಯಾ ಶೋಧಿತ ಮಾನಸಂ ।
ಅಚ್ಯುತಪ್ರೇಕ್ಷತೀರ್ಥಂಚ ಮಧ್ವಾರ್ಯಾಣಾಂ ಗುರುಂ ಭಜೇ ॥ ೩ ॥

ಲಸತು ಶ್ರೀಮದಾನಂದತೀರ್ಥೇಂದುರ್ನೋ ಹೃದಂಬರೇ ।
ಯದ್ವಚಶ್ಚಂದ್ರಿಕಾ ಸ್ವಾಂತಸಂತಾಪಂ ವಿನಿಕೃಂತತಿ ॥ ೪ ॥

ಈ ಶ್ಲೋಕಗಳೇ ಮೇಲಿನ ಹಾಡಿಗೆ ಆಧಾರ,

## ೩ನೆಯ ಹಾಡು

ಇದರಲ್ಲಿ ದ್ವೈತಮತದ ಮೂಲತತ್ತ್ವಗಳಾದ ೧) ಜಗತ್ಸತ್ಯತ್ವ ೨) ವಿಷ್ಣುಸರ್ವೋತ್ತಮತ್ವ, ೩) ಪಂಚಭೇಧ ಮತ್ತು ೪) ದೇವತಾ ತಾರತಮ್ಯ ಗಳನ್ನು ವರ್ಣಿಸಿರುವರು.

ಪಂಚಭೇದಕ್ಕೆ ಶ್ರೀಮದಾಚಾರ್ಯರು 'ಶ್ರೀಮದ್ವಿಷ್ಣುತತ್ತ್ವನಿರ್ಣಯ' ದಲ್ಲಿ ಆಧಾರವಾಗಿ ಕೆಳಗಿನ '**ಪರಮಶ್ರುತಿ**' ಯನ್ನು ಉದಾಹರಿಸಿದ್ದಾರೆ:

> ಜೀವೇಶ್ವರಭಿದಾಚೈವ ಜಡೇಶ್ವರಭಿದಾ ತಥಾ ।
> ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ ।
> ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ ।
> ಸೋಽಯಂ ಸತ್ಯೋಹ್ಯನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ ॥
> ನಚ ನಾಶಂ ಪ್ರಯಾತ್ಯೇಷಃ ನಚಾಸೌ ಭ್ರಾಂತಿಕಲ್ಪಿತಃ
> ಕಲ್ಪಿತಶ್ಚೇನ್ನಿವರ್ತೇತ ನಚಾಸೌ ವಿನಿವರ್ತತೇ ॥
> ದ್ವೈತಂ ನವಿದ್ಯತೇ ಇತಿ ತಸ್ಮಾದಜ್ಞಾನಿನಾಂ ಮತಂ ।
> ಮತಂ ಹಿ ಜ್ಞಾನಿನಾಮೇತನ್ಮಿತಂ ತ್ರಾತಂಚ ವಿಷ್ಣುನಾ ।
> ತಸ್ಮಾತ್ ಸತ್ಯಮಿತಿ ಪ್ರೋಕ್ತಂ ಪರಮೋ ಹರಿರೇವತು ॥

೧ **ಕೃತ್ಯತಿಳಿದು**= ಪರಮಾತ್ಮನ ಲೀಲೆಗಳನ್ನು ತಿಳಿದುಕೊಂಡು.

**ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ:—** ತಾರತಮ್ಯದ ಮೂಲಕ ವಿಷ್ಣು ಸರ್ವೋತ್ತಮನೆಂದು ಸಾರಿರಿ.

**ಸರ್ವತ್ರ**=ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ.

**ಪಂಚಭೇದ**= ೧) ಜೀವ-ಈಶಭೇದ, ೨) ಜೀವ-ಜೀವಭೇದ. ೩) ಜೀವ-ಜಡಭೇದ ೪) ಜಡ-ಜಡಭೇದ, ೫) ಜಡ-ಈಶಭೇದ.

(ಇಲ್ಲಿಂದ ಆರೋಹಣ ತಾರತಮ್ಯವು ಪ್ರಾರಂಭವಾಗುವುದು.)

| | |
|---|---|
| ಮಾನುಷೋತ್ತಮರು. | (ಕಕ್ಷ ೩೨) |
| ಕ್ಷಿತಿಪರು | (ಕಕ್ಷ ೩೧) |
| ಮನುಜಗಂಧರ್ವರು | (ಕಕ್ಷ ೩೦) |
| ದೇವಗಂಧರ್ವರು | (ಕಕ್ಷ ೨೯) |
| ಜಾನ (ಚಿರ) ಪಿತೃಗಳು | (ಕಕ್ಷ ೨೮) |
| ಅಜಾನಜಕರ್ಮಜ ದೇವತೆಗಳು | (ಕಕ್ಷ ೨೭) |

೨೬ ರಿಂದ ೧೯ರ ವರೆಗಿನ ಕಕ್ಷೆಗಳನ್ನು ದಾಸರು ಹೇಳಿಲ್ಲ.

ದಾನವಾರಿತತ್ತ್ವೇಶರು=ಇಪ್ಪತ್ತುನಾಲ್ಕು ತತ್ತ್ವಾಭಿಮಾನಿ ದೇವತೆಗಳು-ಬೇರೆ ಬೇರೆ ಕಕ್ಷದಲ್ಲಿದ್ದಾರೆ.

| | | |
|---|---|---|
| ೩ | ಗಣಪ ಮುಂತಾದವರು | (ಕಕ್ಷ ೧೮) |
| | ಮಿತ್ರ ಮುಂ. | (ಕಕ್ಷ ೧೭) |
| | ಸಪ್ತಋಷಿಗಳು ಮುಂ. | (ಕಕ್ಷ ೧೬) |
| | ವಹ್ನಿ ಮುಂ. | (ಕಕ್ಷ ೧೫) |
| | ನಾರದ ಮುಂ. | (ಕಕ್ಷ ೧೪) |
| | ವರುಣ ಮುಂ. | (ಕಕ್ಷ ೧೩) |
| | ಇನಜ(ಯಮ) ಸೂರ್ಯ, ಚಂದ್ರ ಶತರೂಪಾ | (ಕಕ್ಷ ೧೨) |
| | ಪ್ರವಹ ವಾಯು | (ಕಕ್ಷ ೧೧) |
| ೪ | ದಕ್ಷ, ಅನಿರುದ್ಧ, ಗುರು, ಶಚಿ, ರತಿ, ಸ್ವಾಯಂಭು, (ಇವರು ಆರ್ವರು) | (ಕಕ್ಷ ೧೦) |
| | ಕಕ್ಷಪ್ರಾಣ (ಅಹಂಕಾರಿಕ ಪ್ರಾಣದೇವರು) | (ಕಕ್ಷ ೯) |
| | ಕಾಮ, ಇಂದ್ರ, | (ಕಕ್ಷ ೮) |
| | ೭-೬ ಕಕ್ಷಗಳನ್ನು ಹೇಳಿಲ್ಲ. | |
| ೫ | ಮಹಾರುದ್ರ, ಗರುಡ, ಶೇಷ, | (ಕಕ್ಷ ೫) |
| | ಸರಸ್ವತೀ, ಭಾರತೀ | (ಕಕ್ಷ ೪) |
| ೬ | ಬ್ರಹ್ಮ ವಾಯು, | (ಕಕ್ಷ ೩) |
| | ಶ್ರೀರಮಾ (ಲಕ್ಷ್ಮೀದೇವಿ,) | (ಕಕ್ಷ ೨) |
| ೭ | ಶ್ರೀಹರಿ (ಹನುಮಹೃತ್ಪದ್ಮವಾಸ) | (ಕಕ್ಷ ೧) |

**ವಿ. ಸೂ:**— ಮುಮುಕ್ಷುಗಳು ವಾಯುವಿನ ಅಂತರ್ಯಾಮಿಯಾದ ಪರಮಾತ್ಮನನ್ನು ಚಿಂತಿಸಬೇಕು. ವಾಯುದೇವರು ಸರ್ವದುರಿತಗಳನ್ನು ನಾಶ ಮಾಡುವ ಸಾಮರ್ಥ್ಯವುಳ್ಳವರು ' ಆಖಣಾಶ್ಮರು ' (ಛಾಂದೋಗ್ಯ-ಎರಡನೆಯ ವಲ್ಲಿ).

ಮಹಾಭಾರತ ತಾತ್ಪರ್ಯನಿರ್ಣಯದ ೧ನೆಯ ಅಧ್ಯಾಯದ " ಸತ್ಯಾ ವಿಷ್ಣೋರ್ಗುಣಾಸ್ಸರ್ವೇ ಸತ್ಯಾ ಜೀವೇಶಯೋರ್ಭಿದಾ–ಎಂಬ ೩೮ನೆಯ ಶ್ಲೋಕ

ದಿಂದ, ಜ್ಞಾನ-ಮುಕ್ತಿರ್ನಚಾನ್ಯಥಾ— ಎಂಬ ೮೧ನೆಯ ಶ್ಲೋಕದ ವರೆಗಿನ ಶ್ಲೋಕಗಳು ಇದಕ್ಕೆ ಆಧಾರವಾಗಿವೆ.

## ೬ನೆಯ ಹಾಡು

ದಾಸವರ್ಯರು ಮಂಗಲಾಚರಣವನ್ನು ಮಾಡಿದನಂತರ ಭಗವಂತನ ಉಪಾಸನೆಯನ್ನು ಪ್ರಾರಂಭಿಸುತ್ತಾರೆ. ಇದು ಭಗವತ್ಪೂಜೆ. ಪೂಜಾಂಗವಾಗಿ, ಆದಿಯಲ್ಲಿ ಗುರುನಮಸ್ಕಾರ ಮಾಡುವುದು ವೈದಿಕಪರಂಪರೆ. ಶ್ರೀಮಧ್ವಾಚಾರ್ಯರು:

> ಸ್ಮೃತ್ವಾಗುರುಂ ಪೂರ್ವಗುರುಮಾದಿಮೂಲಗುರೂಂಸ್ತಥಾ।
> ದೇವತಾಂ ವಾಸುದೇವಂಚ ವಿದ್ಯಾಭ್ಯಾಸೀತು ಸಿದ್ಧಿಭಾಕ್ ॥

ಎಂದು ತಂತ್ರಸಾರದಲ್ಲಿ, ಗುರುಗಳಿಂದ ವಾಸುದೇವನ ವರೆಗೆ ಸಾಧಕರು ತಾರತಮ್ಯದಂತೆ, ನಮಸ್ಕರಿಸಬೇಕೆಂದು ಹೇಳಿದ್ದಾರೆ. ಈ ಪರಂಪರೆಯಂತೆಯೇ ದಾಸರು ಪ್ರಾರ್ಥನಾರೂಪವಾದ ಪೂಜೆಯನ್ನು ಪ್ರಾರಂಭಿಸುತ್ತಾರೆ. ತಮ್ಮ ದೀಕ್ಷಾಗುರುಗಳಾದ ಶ್ರೀವ್ಯಾಸರಾಜ ಶ್ರೀಪಾದಂಗಳವರನ್ನು ಪ್ರಾರ್ಥಿಸುತ್ತಾರೆ. ಅದೇ ಈ ಸುಳಾದಿಯು.

(ಶ್ರೀವ್ಯಾಸರಾಯರು ೨೨-೮-೧೪೪೭ರಿಂದ ೧೫೩೯ರ ವರೆಗೆ ಜಗತ್ತಿನಲ್ಲಿ ಧರ್ಮೋಪದೇಶಗೈದರು.)

೧. **ಸುಕೃತ**=ಒಳ್ಳೆಯ ಕಾರ್ಯ; ಪುಣ್ಯ: **ಶ್ರೀಶ**=ವಿಷ್ಣು.

೨. **ತಂತ್ರ**:— ಮಂತ್ರಸಹಿತವಾಗಿ ಮಾಡತಕ್ಕ ಆಗಮೋಕ್ತಕ್ರಿಯೆಗಳು.

**ಉರಗನ ಉಪವಾಸ**:— ಉಪ್ಪೇಕರಹಿತವಾದ ಕ್ರಿಯೆ. (ಅಥವಾ ವೈರಾಗ್ಯ)

**ಪರ**:— ಸರ್ವೋತ್ತಮ.

**ಮಹಾಮಂತ್ರ**:— ಅಷ್ಟಮಹಾಮಂತ್ರಗಳು ಪ್ರಸಿದ್ಧವಿವೆ:— ೧) ಪ್ರಣವ ೨) ಮಾತೃಕಾ ೩) ಅಷ್ಟಾಕ್ಷರ ೪) ವ್ಯಾಹೃತಿ ೫) ದ್ವಾದಶಾಕ್ಷರ ೬) ಗಾಯತ್ರಿ ೭) ಪುರುಷಸೂಕ್ತ ೮) ವಿಷ್ಣುಮಂತ್ರ.

ಈ ಮಂತ್ರಗಳನ್ನು ಗುರೂಪದೇಶ ಪಡೆದು ನ್ಯಾಸಸಹಿತವಾಗಿ ಜಪಿಸಬೇಕೆಂದ
ತಂತ್ರಸಾರದಲ್ಲಿ ಹೇಳಿದೆ.

೩ **ಅಂಕಿತ:**— ತಪ್ತಮುದ್ರಾಂಕಿತ, ಗುರುಗಳಿಂದ ಕೊಡಲ್ಪಟ್ಟ ಹೆಸರು
ಗ್ರಂಥಕರ್ತನ ಸಂಕೇತಪದ.

**ಚಕ್ರಾಂಕಿತವನು ಮಾಡಿ**=ತಪ್ತಮುದ್ರೆಯನ್ನು ಕೊಟ್ಟು,
**ಪುರಂದರ ವಿಟ್ಠಲ ಎಂಬ ಅಂಕಿತವೆನಗಿತ್ತ:**—'ಪುರಂದರ ವಿಟ್ಠಲ
ಅಂಕಿತವನ್ನು ಗುರುಗಳು ಕೊಟ್ಟರೆಂದು ದಾಸರೇ ಹೇಳಿದ್ದಾರೆ.

೪ ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ ಎಂಬ ನ್ಯಾಯಶಾಸ್ತ್ರದ
ಮಹಾಗ್ರಂಥಗಳನ್ನು ಶ್ರೀವ್ಯಾಸರಾಯರು ರಚಿಸಿ, ದ್ವೈತಸಿದ್ಧಾಂತ
ವನ್ನು ತರ್ಕಬದ್ಧವಾಗಿ ಮಂಡಿಸಿದರು. ಚಂದ್ರಿಕಾಗ್ರಂಥದ ಮಹಿಮೆಯ
ಮೂಲಕ ಶ್ರೀವ್ಯಾಸರಾಯರಿಗೆ '**ಚಂದ್ರಿಕಾಚಾರ್ಯ**' ಎಂಬ
ಬಿರುದು ಬಂದಿತು.

**ಮಾಯಾವಾದಿ ಮೊದಲಾದಿಪ್ಪತ್ತೊಂದು:**— ಶ್ರೀಮಧ್ವಾಚಾರ್ಯ
ರಿಗಿಂತ ಮೊದಲು, ಮಾಯಾವಾದಿ (ಅದ್ವೈತ) ಮೊದಲಾದ ಇಪ್ಪತ್ತೊಂದು
ಭಾಷ್ಯಕಾರರು ಭಾಷ್ಯ ರಚಿಸಿದ್ದರೆಂದೂ, ಅವುಗಳನ್ನು ಶ್ರೀಮಧ್ವಾಚಾರ್ಯರು
ಖಂಡಿಸಿದರೆಂದೂ ಇಲ್ಲಿ ಹೇಳಿದ್ದಾರೆ.

**ಮುದ್ರಿಸು**=ಕಟ್ಟು **ನಾಯಕ**=ಶ್ರೇಷ್ಠ

೫ **ಅವತಾರ:**-ದೇವತೆಗಳೆಲ್ಲರೂ ಅಂಶದಿಂದ ಬೇರೆ ರೂಪ (ತಾಳುವುದೇ)
ಹೊಂದುವುದೇ ಅವತಾರವು.

**ಅಂಶ:**— ಅಂಶದಲ್ಲಿ ಎರಡು ವಿಧ. ೧ ಸ್ವರೂಪಾಂಶ. ೨ ಭಿನ್ನಾಂಶ.

**ಸ್ವರೂಪಾಂಶ:**— ಮತ್ಸ್ಯಾದಿ ಅವತಾರಗಳು. **ಭಿನ್ನಾಂಶ:**—
ದೇವತೆಗಳು. ಅಂಶಿಯಲ್ಲಿಯ ಕೆಲ ಗುಣಗಳು ಅಂಶದಲ್ಲಿರುತ್ತವೆ. ಅಂಶದಲ್ಲಿರುವ
ಎಲ್ಲ ಗುಣಗಳು ಅಂಶಿಯಲ್ಲಿರುವುವು. ಇಂದ್ರ ಅಂಶಿ; ಅರ್ಜುನ ಅಂಶ. ಇಂದ್ರ
ನಲ್ಲಿ ಅರ್ಜುನನ ಎಲ್ಲ ಗುಣಗಳಿದ್ದುವು. ಅರ್ಜುನನಲ್ಲಿ ಇಂದ್ರನ ಎಲ್ಲ ಗುಣಗಳಿರ
ಲಿಲ್ಲ.

**ಆವೇಶ:**- ಯಾವುದೇ ದೇವತೆಯ ಕೆಲಕಾಲದ ಅಸ್ತಿತ್ವ. ವ್ಯಾಸರಾಯರು ಶೇಷಾವೇಶರೂ ಪ್ರಹ್ಲಾದನ ಅವತಾರಿಗಳೂ ಎಂದು ದಾಸರು ಹೇಳಿದ್ದಾರೆ.

**ದೇಶಾಧಿಪತಿ**=ವಿಜಯನಗರದ ಕೃಷ್ಣದೇವರಾಯ, (೧೫೦೯—೨೯)

**ಕುಹುಯೋಗ:**— (೮—೨—೧೫೨೧)

> ರಾಹುಣಾರ್ಕಾರ್ಕಿ ಭೂಪುತ್ರಾಃ । ಯದಾ ಚಾಂಡಾಲತಾಂ ಗತಾಃ ॥
> ಯಸ್ಯದ್ವಾದಶಗಾಸ್ಸದ್ಯಃ । ಸರಾಜಾ ನಶ್ಯತಿ ಧ್ರುವಂ ॥

ಎಂದು 'ಜ್ಯೋತಿಸ್ಸಾರ' ಸಂಗ್ರಹಕಾರರು ಕುಹುಯೋಗದ ವಿವರವನ್ನು ಹೇಳಿದ್ದಾರೆ.

**ಅರ್ಥ:—** ರಾಹು, ಸೂರ್ಯ, ಶನಿ, ಮಂಗಳಗ್ರಹಗಳು, ವಿಷಘಳಿಗೆಯಲ್ಲಿ ಚಾಂಡಾಲತ್ವವನ್ನು ಪಡೆದು ಶೂನ್ಯಚಂದ್ರತಿಥಿ (ಅಮಾವಾಸ್ಯೆ) ಯಲ್ಲಿ ಮಕರರಾಶಿಯಲ್ಲಿ ಸಂಧಿಸುವರು, ಇದು ರಾಜನಿಗೆ ಅನಿಷ್ಟಕರವಾದುದು. ಈ ಅವಧಿಯಲ್ಲಿ ರಾಜರು ಸಿಂಹಾಸನವನ್ನೇರಬಾರದೆಂದು ಕಟ್ಟಳೆಯಿದೆ, ಆಗ ವ್ಯಾಸರಾಯರು ವಿಜಯನಗರದ ಸಿಂಹಾಸನವನ್ನೇರಿ ಕೃಷ್ಣದೇವರಾಯನ ಕುಹುಯೋಗವನ್ನು ನಿವಾರಿಸಿದರು, (ವ್ಯಾಸಯೋಗಿ ಚರಿತಂ)

**ವ್ಯಾಸಾಬ್ಧಿ**— (ಮದನಪಲ್ಲಿ—ಆಂಧ್ರಪ್ರದೇಶ) = ವ್ಯಾಸಸಮುದ್ರ. ದೊಡ್ಡ ಕೆರೆಗಳಿಗೆ ಕನ್ನಡದಲ್ಲಿ ಸಮುದ್ರ, ಸಂದ್ರ, ಸಾಗರಗಳೆಂಬ ಹೆಸರುಗಳಿವೆ. ಉದಾ:— ನಾಗಸಂದ್ರ, ಹನುಮಸಾಗರ,

**ಕಾಶೀದೇಶ:**— (ಉತ್ತರಪ್ರದೇಶ) ಕಾಶಿ ಪ್ರಸಿದ್ಧ ಕ್ಷೇತ್ರ.

**ಲೇಶ**=ಸ್ವಲ್ಪ. **ವೆಗ್ಗಳ**=ಶ್ರೇಷ್ಠ.

ಈ ಶ್ಲೋಕದಲ್ಲಿ ಶ್ರೀವ್ಯಾಸರಾಯರ ವಿದ್ಯಾಗುರುಗಳೂ ಆಶ್ರಮ-ಗುರುಗಳೂ ಆದ ಶ್ರೀಪಾದರಾಯರ (೧೪೬೨-೧೫೮೦) ಹೆಸರನ್ನು ದಾಸರು ಹೇಳಿದ್ದಾರೆ. ಈ ಪರಂಪರೆಯ ಮಠವು ಮುಳಬಾಗಿಲಿನಲ್ಲಿದೆ. ಶ್ರೀಪಾದರಾಯರಿಗೆ 'ನಾರಾಯಣಯೋಗಿ' ಎಂದು ಹೆಸರು ಇದ್ದಿತೆಂದು ಪುರಂದರದಾಸರು ಹಾಡಿದ್ದಾರೆ. (ನಮಃ ಶ್ರೀಪಾದರಾಜಾಯ—ಎಂದು, ದಾಸಕೂಟದ ಪರಂಪರೆಯಲ್ಲಿ ಶ್ರೀಪಾದರಾಯರಿಗೆ ಅಗ್ರಸ್ಥಾನವಿದೆ.)

**ವಿಜಯೀಂದ್ರರು—** (೧೫೧೪-೧೫೯೫) ಶ್ರೀವ್ಯಾಸರಾಯರ ಶಿಷ್ಯರು. ಶ್ರೀರಾಯರ ಮಠದ ಶ್ರೀಸುರೇಂದ್ರರು ತಮ್ಮ ಮಠಕ್ಕೆ ಇವರನ್ನು ಕೊಡಬೇಕೆಂದು ಕೇಳಲು, ಶ್ರೀವ್ಯಾಸರಾಯರು ಒಪ್ಪಿ ಪುತ್ರಭಿಕ್ಷೆ ನೀಡಿದರು. ಶ್ರೀವಿಜಯಿಂದ್ರರು. ಕ್ರಿ.ಶ. ೧೫೩೯ರಲ್ಲಿ ಆಶ್ರಮವನ್ನು ಸ್ವೀಕರಿಸಿ, ಶ್ರೀರಾಯರ ಮಠದ ಸಿಂಹಾಸನಾರೂಢರಾದರು, ಗುರುಗಳಾದ ಶ್ರೀವ್ಯಾಸರಾಯರಂತೆ ಸುವಿಖ್ಯಾತ ವಿದ್ವಾಂಸರು. ಇವರು ಸಂಸ್ಕೃತದಲ್ಲಿ ೧೦೪ ಗ್ರಂಥಗಳನ್ನು ರಚಿಸಿರು ವರು. ಇಷ್ಟು ಗ್ರಂಥಗಳನ್ನು ತಮ್ಮ ಕಾಲದಲ್ಲಿ ಬೇರೆ ಯಾವ ಯತಿಗಳೂ ಬರೆದಿಲ್ಲ. ಅಪ್ಪಯ್ಯದೀಕ್ಷಿತರೇ ಮೊದಲಾದ ವಿದ್ವಾಂಸರನ್ನು ಜಯಿಸಿ, ದ್ವೈತ ಸಿದ್ಧಾಂತದ ದುಂದುಭಿಯನ್ನು ಮೊಳಗಿಸಿದರು.

**ಶ್ರೀವಾದಿರಾಜರು:—** (೧೪೮೦-೧೬೦೦) ಸೋದೆಮಠದ ಶ್ರೀವಿಷ್ಣು ತೀರ್ಥರ ಪರಂಪರೆಯಲ್ಲಿ ಬಂದ ಯತಿಗಳು. ಶ್ರೀವ್ಯಾಸರಾಯರಲ್ಲಿ ವಿದ್ಯಾಭ್ಯಾಸ ಮಾಡಿ, ಉದ್ದಾಮ ಪಾಂಡಿತ್ಯ ಪಡೆದರು. ತಮ್ಮ ಕಾಲದ ಶೃಂಗೇರಿಮಠದ ಯತಿಗಳನ್ನು ಜಯಿಸಿದರು. ಶೈವ, ಜೈನ, ಪಾಶುಪತಾದಿ ಮತಗಳನ್ನು ಖಂಡಿಸಿ ಹರಿಸರ್ವೋತ್ತಮತ್ವವನ್ನು ಪ್ರಸ್ಥಾಪಿಸಿದರು, ಇವರು ರಚಿಸಿದ ಗ್ರಂಥಗಳು ಸಂಸ್ಕೃತದಲ್ಲಿ ಉಚ್ಚಪದವನ್ನು ಹೊಂದಿವೆ. ಅವುಗಳಲ್ಲಿ 'ಯುಕ್ತಿಮಲ್ಲಿಕೆ' ಪ್ರಧಾನವಾದುದು. ಶ್ರೀಗುರುರಾಜೀಯ ಸುಧಾಟಿಪ್ಪಣಿ, ತತ್ತ್ವಪ್ರಕಾಶಿಕಾ, ಭಗವದ್ಗೀತೆಗಳ ಟಿಪ್ಪಣಿಗಳು ಹೆಸರುಪಡೆದಿವೆ. ಲಕ್ಷಾಭರಣವೆಂಬ ಮಹಾಭಾರತ ಟಿಪ್ಪಣಿ, ಮಹಾಭಾರತ ತಾತ್ಪರ್ಯನಿರ್ಣಯ, ತಂತ್ರಸಾರ ಟೀಕಾ, ಪ್ರಮೇಯಸಂಗ್ರಹ, ರುಕ್ಮಿಣೀಶವಿಜಯ, ಸರಸಭಾರತೀವಿಲಾಸ, ತೀರ್ಥಪ್ರಬಂಧ, ಪಾಷಂಡಮತಖಂಡನ, ಏಕಾದಶೀ ನಿರ್ಣಯ—ಮೊದಲಾದ ಗ್ರಂಥಗಳನ್ನಲ್ಲದೆ, ಶಿವಸ್ತುತಿ, ದಶಾವತಾರಸ್ತೋತ್ರ ಮುಂತಾದುವನ್ನೂ ಕನ್ನಡದಲ್ಲಿ ಸ್ತ್ರೀಯರಿಗೆ ಸಾಧನೆಗಾಗಿ ಅನೇಕ ಕೃತಿಗಳನ್ನೂ, ವೈಕುಂಠವರ್ಣನೆ, ಗುಂಡಕ್ರಿಯೆ, ಲಕ್ಷ್ಮೀಶೋಭಾನೆ, ಸಾವಿರಾರು ಕೀರ್ತನೆ, ಸುಳಾದಿ, ಸ್ವಪ್ನಗದ್ಯ, ಭ್ರಮರಗೀತೆ ಮೊದಲಾದುವುಗಳನ್ನೂ ರಚಿಸಿ ಜನಾಂಗವನ್ನು ಮೇಲಕೆತ್ತಲು ಯತ್ನಿಸಿದ ಮಹಾನುಭಾವರು.

೭ **ಬ್ರಹ್ಮಣ್ಯರು:—**ವ್ಯಾಸರಾಯರ ಆಶ್ರಮಗುರುಗಳು. (೧೪೬೦-೧೪೭೮)

ವ್ಯಾಸರಾಯರನ್ನು ಹುಟ್ಟಿದಂದಿನಿಂದ ಪಾಲನೆ ಪ್ರೋಷಣೆ ಮಾಡಿದವರು. (ಬಂಗಾರದ ತಳಿಗೆಯಲ್ಲಿ ಮಗುವನ್ನು ಪಡೆದ ಕಥೆ ಸ್ಮರಿಸಿಕೊಳ್ಳಬೇಕು.)

**ಸುರೇಂದ್ರರು:**— ರಾಯರ ಮಠದ ಪೀಠಸ್ಥರು, ಶ್ರೀವ್ಯಾಸರಾಯರ ಸಮಕಾಲೀನರು.

**ಪರಮಗುರುಗಳು** — ಗುರುಗಳ ಗುರುಗಳು.

೮ ಶ್ರೀವ್ಯಾಸರಾಯರಿಗೆ ನ್ಯಾಯಶಾಸ್ತ್ರಪಾಂಡಿತ್ಯ, ರಾಜಾಶ್ರಯ ಹಾಗು ಪೀಠದ ಬಲಗಳಿದ್ದ ಮೂಲಕ, ತಮ್ಮ ಸಮಕಾಲೀನರಾದ ಅನ್ಯಮತೀಯರಾದ—ಕಾಶಿಯ ಗದಾಧರಮಿಶ್ರನನ್ನು ಸೋಲಿಸಿ ಶಿಷ್ಯನನ್ನು ಮಾಡಿಕೊಂಡರು. ಕಾಶಿಯ ಮಿಶ್ರಪಕ್ಷಧರ ಮತ್ತು ದಕ್ಷಿಣದ ವಾಜಪೇಯ ನರಸಿಂಹ, ಲಿಂಗಣಮಿಶ್ರ ಮೊದಲಾದ ನೂರೆಂಟುಜನ ವಿದ್ವಾಂಸರನ್ನು ವಾದದಲ್ಲಿ ಜಯಿಸಿ, **'ಹರಿಯೇ ಸರ್ವೋತ್ತಮನು'** ಎಂದು ಡಂಗುರ ಸಾರಿದರೆಂದು ದಾಸರು ಬಾಯಿತುಂಬ ಹೊಗಳಿದ್ದಾರೆ. ದ್ವೈತಮತದ ಸಾರರೂಪವಾಗಿರುವ, ಕೆಳಗಿನ ಶ್ಲೋಕವನ್ನು ವ್ಯಾಸರಾಯರೇ ರಚಿಸಿರುವರೆಂದು, ಶ್ರೀಚೈತನ್ಯರು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುತ್ತಾರೆ:

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ತ್ವತಃ ।
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂಗತಾಃ ।
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

೯ **ಮಾನಸಪೂಜೆ**— ಮಾನಸಿಕ ಉಪಚಾರಗಳಿಂದ ಪರಮಾತ್ಮನನ್ನು ಏಕಾಗ್ರತೆಯಿಂದ ಮನದಲ್ಲಿಯೇ ಸೇವಿಸುವುದು.

ಕೆಳಗೆ ಕಾಣಿಸಿದ ವಿಷಯವು ಶ್ರೀವ್ಯಾಸರಾಜಕೃತ ಶ್ರೀಪಾದರಾಯಸ್ತೋತ್ರದಲ್ಲಿ ಉಲ್ಲೇಖಿತವಾಗಿದೆ:

ಶ್ರೀಪಾದರಾಯರಿಗೆ ಕನಸಿನಲ್ಲಿ, ಪಂಢರಪುರಕ್ಕೆ ಬಂದು ನನ್ನನ್ನು ಕರೆದುಕೊಂಡು ಹೋಗು ಎಂದು ಪರಮಾತ್ಮನ ಆದೇಶವಾಯಿತು. ಅದರಂತೆ ಶ್ರೀಪಾದರಾಯರು ಅಲ್ಲಿಗೆ ಹೋಗಿ ಭೀಮರಥಿಯ ಮರಳುದಂಡೆಯಲ್ಲಿ ಶೋಧಿಸಿದಾಗ ಅವರಿಗೆ ಎರಡು ಸಂಪುಟಗಳು ದೊರೆತುವು. ಒಂದರ ಮುಚ್ಚಳದ

ಶ್ರೀಪಾದರಾಜರಿಗೆ ತೆರೆಯಲು ಬಂದಿತು. ಅದರಲ್ಲಿ ರಂಗವಿಟ್ಠಲನ ಪ್ರತಿಮೆ ಇದ್ದಿತು. ಅದು ಈಗಲೂ ಅವರ ಮಠದಲ್ಲಿ ಪೂಜೆಗೊಳ್ಳುತ್ತಿದೆ. ಇನ್ನೊಂದು ಸಂಪುಟದ ಮುಚ್ಚಳವನ್ನು ತೆಗೆಯಲಿಕ್ಕೆ ಬಾರದುದರಿಂದ, ಅದನ್ನು ಹಾಗೆಯೆ ಪೂಜಿಸುತ್ತಿದ್ದರು, ಒಂದು ದಿನ ಶ್ರೀವ್ಯಾಸರಾಯರು ಅದನ್ನು ಪೂಜಿಸುವ ಸಂದರ್ಭವೊದಗಿದಾಗ, ಮುಚ್ಚಳವು ಸುಲಭವಾಗಿ ತೆರೆಯಿತು. ಅದರಲ್ಲಿ ಗೋಪಾಲಕೃಷ್ಣನ ಮೂರ್ತಿ ಇದ್ದಿತು, ಶ್ರೀಪಾದರಾಜರು ಇದನ್ನು ಕಂಡು 'ಇದೇ ನಿಮ್ಮ ಕೃತಿಗಳ ಅಂಕಿತವಾಗಲಿ' ಎಂದು ಆಶೀರ್ವಾದ ಮಾಡಿದರು. ಆ ಶ್ರೀಕೃಷ್ಣನ ವಿಗ್ರಹವು ಈಗಲೂ ಸೋಸಲೆಮಠದಲ್ಲಿದೆ.

## ೭ನೆಯ ಹಾಡು

ದ್ವೈತಸಿದ್ಧಾಂತಸ್ಥಾಪಕರಾದ ಶ್ರೀಮದಾನಂದತೀರ್ಥರ ಮಹಿಮೆಯನ್ನು ದಾಸರು ಈ ಪದ್ಯದಲ್ಲಿ ವರ್ಣಿಸಿರುವರು.

೧ **ಸುಲಭ:—** ಪರಮಾತ್ಮನು ನೈಜಭಕ್ತರಿಗೆ ಕರುಣೆಯಿಂದ ಆಯಾಸವಿಲ್ಲದೆ ಒಲಿಯುವನೆಂಬುದೇ ಈ ಶಬ್ದದ ಮಥಿತಾರ್ಥವು.

**ಅನ್ಯಸ್ಮಾತ್ ಸೌಲಭ್ಯಂ ಭಕ್ತೌ**

(ನಾರದ ಭಕ್ತಿಸೂತ್ರ ೫೮)

**ತಾನು ಇಲ್ಲದೆ:—** "ಯಸ್ಮಿನ್ ಉತ್ಕ್ರಾಂತೇ ಉತ್ಕ್ರಾಂತೋ ಭವಿಷ್ಯಾಮಿ" (ಛಾಂದೋಗ್ಯ. ಉ.) ಶ್ರೀಮಧ್ವಾಚಾರ್ಯರು ವಾಯುದೇವರ ಅವತಾರವಾದುದರಿಂದ, ವಾಯುದೇವರು ಇದ್ದಲ್ಲಿ ಪರಮಾತ್ಮನು ವಾಸಿಸುವನೆಂದೂ ಅವರು ಹೋದೊಡನೆ ಅವನೂ ಹೋಗುವನೆಂದೂ—ಹೇಳಿರುವರು.

**ನಾನಾಜೀವಿಗಳ ಒಳಹೊರಗೆ:—'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ||** (ನಾರಾಯಣೋಪನಿಷತ್ ೧೨-೧)

೧ "ತದೇಜತಿ ತನ್ನೈಜತಿ, ತದ್ದೂರೇ ತದ್ವಂತಿಕೇ |
ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯಬಾಹ್ಯತಃ || (ಈಶಾವಾಸ್ಯ ೫)

೨ ತದ್ಧಾವತೋಽನ್ಯಾನತ್ಯೇತಿಷ್ಠತಿ || (ಈ. ವಾ. ಉ. ४)

೩ ಯಸ್ಮಿನ್ ಸರ್ವಾಣಿ ಭೂತಾ-
ನ್ಯಾತ್ಮೈವಾಭೂದ್ವಿಜಾನತಃ (ಈ. ವಾ. ಉ. ೭)

೨ **ಪನ್ನಗಪತಿ ಗರುಡ ರುದ್ರ-ಇಂದ್ರಾದ್ಯರಿಗೆ ಮೀರಿದ--**
**ಜಗದುತ ವಶಗಂ ಕಿಂಕರಾಃ ಶಂಕರಾದ್ಯಾಃ।**

(ವಾಯುಸ್ತುತಿ-೩೨)

**ಪನ್ನಗಪತಿ**=ಶೇಷ.

**ಘನ್ನವಾದ ಶ್ರುತಿತತಿ... ತೋರಿದ**=ಪವಿತ್ರವಾದ ವೇದಪ್ರಮಾಣ ಗಳಿಂದ ಜೀವನು ಪರಮಾತ್ಮನಿಂದ ಭಿನ್ನನೆಂದು ತಿಳಿಸಿದ. ಭಕ್ತರಲ್ಲಿ ಎರಡು ವಿಧ. ಭಿನ್ನ, ಅಭಿನ್ನರೆಂದು. ವಾಯುದೇವರು ಅಭಿನ್ನಭಕ್ತರು.

**ಭಾರಣೆ**=ಮಹಿಮೆ, ಗೌರವ,

**ಮೂರೇಳು ಭಾಷ್ಯ**=೨೧ ಭಾಷ್ಯಗಳು.

೧) ಭಾರತೀವಿಜಯ, (೨ ಸಚ್ಚಿದಾನಂದಭಟ್ಟ. ೩) ಬ್ರಹ್ಮಘೋಷ, ೪) ಶತಾನಂದ, ೫) ಉದ್ವರ್ತ, ೬) ವಿಜಯ, ೭) ರುದ್ರಭಟ್ಟ, ೮) ವಾಮನ, ೯) ಯಾದವಪ್ರಕಾಶ, ೧೦) ರಾಮಾನುಜ, ೧೧) ಭರ್ತೃಪ್ರಪಂಚ, ೧೨) ದ್ರವಿಡ, ೧೩) ಬ್ರಹ್ಮದತ್ತ, ೧೪) ಭಾಸ್ಕರ, ೧೫) ವಿಶಾರದ, ೧೬) ವೃತ್ತಿಕಾರಕ, ೧೭) ಜಯಭಟ್ಟ, ೧೮) ವಿಷ್ಣುಕ್ರಾಂತ, ೧೯) ವಾದೀಂದ್ರ, ೨೦) ಮಾಧವಭಟ್ಟ, ೨೧) ಶಂಕರ.

(ಹರಿಕಥಾಮೃತಸಾರ, ಭಾ. ೧ ಪದ್ಯ ೮).

## ೮-೯ನೆಯ ಹಾಡುಗಳು

ಮಹಾಗಣಪತಿ ಆಕಾಶಾಭಿಮಾನಿದೇವತೆ. 'ಓಂ. ಪ. ಆಕಾಶಾತ್ಮನೇ ಮಹಾಗಣಪತಯೇ ನಮಃ (ತತ್ತ್ವನ್ಯಾಸ)' ವಿಶ್ವನಾಮಕ ಪರಮಾತ್ಮನೇ ಇವನ ಅಂತರ್ಯಾಮಿ. ಈ ವಿಶ್ವನು ಗಜಮುಖನು. ಈ ವಿಶ್ವನ ವಿಶೇಷ ಉಪಾಸನೆ ಮಾಡಿರುವುದರಿಂದಲೇ ಗಣಪತಿ ಗಜಮುಖನಾಗಿರುವನು. "ವಿನಾಯಕಸ್ತು ವಿಶ್ವಸ್ಯ ಧ್ಯಾನಾದ್ವೈ ಗಜವಕ್ತ್ರತಾಮ್" ಎಂಬ ಮಹಾಯೋಗದ ವಚನವನ್ನು ಪ್ರಮಾಣ ಕೊಟ್ಟು ಮಾಂಡೂಕ್ಯ ಭಾಷ್ಯದಲ್ಲಿ ಶ್ರೀಮದಾಚಾರ್ಯರು ಈ ವಿಷಯ ನಿರೂಪಿಸಿರುವರು. ಗಣಪತಿಯು ಯಿಂದ ವಿಘ್ನಗಳ ಪರಿಹಾರವಾಗಿ ತ್ವರೆಯಿಂದಲೇ ಇಷ್ಟಾರ್ಥಗಳು ಲಭಿಸು

ಪವು. ಶ್ರೀಮದಾಚಾರ್ಯರು "ಧ್ಯೇಯೋ ವಿಘ್ನಹರಃ ಕಾಮದಸ್ತ್ವ
ರಯಾ ಹ್ಯಯಂ" (ತಂತ್ರಸಾರ) ಹೇಳಿರುವರು. ಆದ್ದರಿಂದಲೇ "ಸರ್ವ ವಿಘ್ನ
ಹರಸ್ತಸ್ಮೈ ಮಹಾಗಣಾಧಿಪತಯೇ ನಮಃ" ಎಂದು ಪ್ರಸಿದ್ಧವಾಗಿದೆ.

## ೮ನೆಯ ಹಾಡು

**ಸಕಲ ಸುರರಿಂಗೆ....ಅಧಿಕಾರವ:** ಎಲ್ಲ ತತ್ವಾಭಿಮಾನಿ ದೇವತೆಗಳ
ಲ್ಲಿದ್ದು, ಅವರವರಿಗೆ ಶಕ್ತಿಯನ್ನು ಕೊಟ್ಟು, ಶ್ರೀಹರಿ ಎಲ್ಲ ಕಾರ್ಯಗಳನ್ನು
ನೆರವೇರಿಸುವನು.

ತತ್ರತತ್ರಸ್ಥಿತೋ ವಿಷ್ಣುಃ ತತ್ ಶಕ್ತೀಃ ಪ್ರಬೋಧಯನ್ । ಏಕ ಏವ
ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥

(ಬ್ರ. ಸೂ. ಭಾ.)

## ೯ನೆಯ ಹಾಡು

**೧ ಹಿಂದೆ ರಾವಣ ತಾನು ವಂದಿಸದೆ...:—** ತಾಯಿಯ
ಪೂಜೆಯ ಸಲುವಾಗಿ ರಾವಣನು ಶಿವನ ಆತ್ಮಲಿಂಗವನ್ನು ಪಡೆಯಲು ಮೊದಲು
ಗಣಪತಿಯನ್ನು ಪೂಜಿಸದೆ, ಗೋಕರ್ಣಕ್ಷೇತ್ರದಲ್ಲಿ ತಪಸ್ಸು ಮಾಡಿ ಶಿವಲಿಂಗ
ವನ್ನು ಪಡೆದು ತಿರುಗಿ ಬರುತ್ತಿದ್ದನು. ಶಿವನಿಗಿದು ಒಪ್ಪಿತವಿರಲಿಲ್ಲ; ಅಸಮಾ
ಧಾನವಾಯಿತು. ಆಗ ಶ್ರೀವಿಷ್ಣುವಿನ ಪ್ರೇರಣೆಯಿಂದ ಗಣಪತಿ ಬ್ರಹ್ಮ
ಚಾರಿಯ ವೇಷವನ್ನು ಧರಿಸಿ ರಾವಣನ ಬಳಿ ಬಂದನು. ಆಗ ರಾವಣನಿಗೆ
ಮೂತ್ರಬಾಧೆಯಾಗಲು ಶಿವಲಿಂಗವನ್ನು ಗಣಪತಿಯ ಕೈಯಲ್ಲಿ ಕೊಟ್ಟು
ಹೋದನು. ಗಣಪತಿ ಅದನ್ನು ಹೊರಲಾರದೆ, 'ಇವನ್ನು ಹೊರಲು ನನಗೆ
ಸಾಧ್ಯವಿಲ್ಲ, ಬೇಗ ಬನ್ನಿ' ಎಂದು ಕೂಗಿ, ಲಿಂಗವನ್ನು ಕೆಳಗೆ ಇಟ್ಟನು. ಲಿಂಗವು
ಭೂಗತವಾಯಿತು. ಮಾಡಿದ ತಪವೆಲ್ಲವೂ ಹಾಳಾಯಿತು.

(ಆನಂದರಾಮಾಯಣ–ಸಾರಕಾಂಡ ೯)

೨ **ಅಂದಿನಾ ಬಗೆಯರಿತು....ರಾಜ್ಯವನು:**

" ಏವಮುಕ್ತಸ್ತು ಕೃಷ್ಣೇನ ಸಾನುಜಃ ಪಾಂಡುನಂದನಃ ॥

ಪೂಜಯಾಮಾಸ ದೇವಸ್ಯ ಪುತ್ರಂ ತ್ರಿಪುರಘಾತಿನಃ
ಶತ್ರುಸಂಘಂ ನಿಹತ್ಯಾಜೌ ಪ್ರಾಪ್ತವಾನ್ ರಾಜ್ಯಮೋಜಸಾ।"

(ಭವಿಷ್ಯೋತ್ತರಪುರಾಣ ೪೪-೪೫)

ಉಮೆನಂದನ=ಗಣಪತಿ

## ೧೦ನೆಯ ಹಾಡು

೧ **ನಿಟಿಲನೇತ್ರ**=ರುದ್ರ-ಹಣೆಗಣ್ಣುಳ್ಳವ, **ಕಟಿ**=ನಡು, **ಸೂತ್ರ**=ಉಡುದಾರ,

೨ **ಬಟ್ಟ**=ದುಂಡಗಾದ. **ತುಡುಗೆ**=ಆಭರಣ,

೩ **ಕುಕ್ಷಿಮಹ**=ದೊಡ್ಡಹೊಟ್ಟೆ, **ಪಕ್ಷಿವಾಹನ**=ಗರುಡವಾಹನ, ವಿಷ್ಣು. **ಇಕ್ಷುಚಾಪ**=ಕಾಮ (ಕಬ್ಬುಬಿಲ್ಲಾಗಿ ಉಳ್ಳವ)

## ೧೧ನೆಯ ಹಾಡು

೧ **ಗಜವದನ**=ಗಣಪತಿ, **ಗೌರಿ**=ಪಾರ್ವತಿ.

## ೧೨ನೆಯ ಹಾಡು

೧ **ಚಂದ್ರಚೂಡ**= ತಲೆಯಲ್ಲಿ ಚಂದ್ರನುಳ್ಳವ. (ಶಿವ)

(ವಿಷ್ಣು ಪುರಾಣ ೧-೯)

ಇಲ್ಲಿ ಶಾಪಗ್ರಸ್ತನಾದ ಚಂದ್ರನು ಮೊರೆಹೋಗಲು ಶಿವನು ಅವನನ್ನು ಪುರಸ್ಕರಿಸಿದ ಕಥೆ ಇದೆ. (ಲಿಂ. ಪು. ೫೮-೫೯)

**ಮೃಗಧರ**=ಜಿಗುರೆ ಕೈಯಲ್ಲಿ ಉಳ್ಳವ. ವೇದವು ಮೃಗರೂಪವಾಗಿ ಶಿವನ ಹಿಡಿಯೊಳಗಡಗಿದುದರಿಂದ ಅವನಿಗೆ ಮೃಗಧರನೆಂಬ ಹೆಸರುಂಟಾಯಿತು.

**ಪಿನಾಕ**=ಶಿವನ ಬಿಲ್ಲಿನ ಹೆಸರು.

**ಪಿನಾಕಧರ**=ಶಿವ.

**ಗಂಗಾಧರ**=ಜಡೆಯಲ್ಲಿ ಗಂಗೆಯನ್ನು ಧರಿಸಿದವ :

ಸಗರನ ಮರಿಮಗನಾದ ಭಗೀರಥನು ತನ್ನ ಅಜ್ಜಂದಿರನ್ನು ಉದ್ಧಾರ ಮಾಡುವುದಕ್ಕಾಗಿ, ಗಂಗೆಯನ್ನು ಭೂಮಿಗೆ ತರಬೇಕೆಂದು ತಪಸ್ಸು ಮಾಡಿದನು. ಗಂಗೆಯ ಪ್ರವಾಹದ ವೇಗ ತಡೆಯಲು ಶಿವನನ್ನು ಒಲಿಸಿ ಅವನ ಸಹಾಯದಿಂದ ಗಂಗೆಯನ್ನು ಭೂಮಿಗೆ ತಂದನು (ಭಾಗವತ ೯-೯).

**ಗಜಚರ್ಮಾಂಬರಧರ**:—ಗಜಾಸುರನು ಮಹಿಷಾಸುರನ ಮಗ. ಶಿವ ನಿಂದ ವರ ಪಡೆದು ದೇವತೆಗಳನ್ನು ಪೀಡಿಸಲಾಗಿ ಶಿವನು ಇವನನ್ನು ಕೊಂದನು. ಇವನ ಅಪೇಕ್ಷೆಯಂತೆ ಶಿವನು ಇವನ ಚರ್ಮವನ್ನು ಹೊದ್ದುಕೊಂಡಿರುವುದರಿಂದ ಗಜಚರ್ಮಾಂಬರಧರನೆಂಬ ಹೆಸರು ಪಡೆದನು (ಮತ್ಸ್ಯ, ೧೫೨)

**ನಂದಿವಾಹನ**=ಶಿವ; **ನಂದಿ**=ಶಿವನ ವಾಹನ.

ಶಿಲಾದ ಮುನಿಯ ಮಗನಾಗಿ ಅವತರಿಸಿದ; ಶಿವನ ಸಲುವಾಗಿ ತಪಸ್ಸು ಮಾಡಿ ಅವನ ವಾಹನವಾದ (ಲಿಂ. ಪು. ೪೩-೪೫)

**ಕಂದರ್ಪನ....ಉಗ್ರನು ನೀನೆ**=ಶಿವ

ವಜ್ರಾಂಗ ಹಾಗೂ ವರಾಂಗಿಯರ ಮಗನಾದ ತಾರಕಾಸುರನ ಪೀಡೆಗೆ ಬೇಸತ್ತು ದೇವತೆಗಳು ಬ್ರಹ್ಮನನ್ನು ಮೊರೆಹೊಕ್ಕರು. ಶಿವನ ಮಗನಾದ ಕಾರ್ತಿಕೇಯನಿಂದ ಇವನ ಸಂಹಾರವಾಗುವುದು. ಅದಕ್ಕಾಗಿ ಶಿವ-ಪಾರ್ವತಿಯರ ಮಿಲನವಾಗುವಂತೆ ಏರ್ಪಾಡುಮಾಡಿರೆಂದು ಅವನು ಹೇಳಿದನು. ದೇವತೆಗಳ ಬಿನ್ನಹ ಮನ್ನಿಸಿ ಮನ್ಮಥನು ಶಿವನ ಮೇಲೆ ಯುದ್ಧಕ್ಕೆ ಹೊರಟನು. ಶಿವನು ಇವನನ್ನು ತನ್ನ ಹಣೆಗಣ್ಣಿನಿಂದ ಸುಟ್ಟನು. (ಸ್ಕಾಂದ. ಮಾಹೇಶ್ವರ ಖಂಡ-೧೫)

**ಉಗ್ರ**=ಭಯಂಕರ; ಶಿವನ ಒಂದು ಹೆಸರು,

**ಅಂದು......ನೀನೆ**:—ದೇವಾಸುರರು ಕೂಡಿ ಅಮೃತಮಥನ ಮಾಡುವಾಗ ಕಾಲಕೂಟ ವಿಷ ಹುಟ್ಟಲು, ಶಿವನು ಅದನ್ನು ನುಂಗಿ ಲೋಕದ ಪೀಡೆಯನ್ನು ಕಳೆದನು.

(ಭಾಗವತ ೮-೬)

**ಶ್ರೀರಾಮನ ಪೊಂದಿ ಪೊಗಳುವನು ನೀನೆ:**— ಶ್ರೀರಾಮನು ಶ್ರೀಹರಿಯ ಅವತಾರವಾದುದರಿಂದ. ಶಿವನು ಅವನ ಭಕ್ತನೂ ಅಹುದು. (ಶಿವನ ಕಕ್ಷೆ ೫) ಇದಲ್ಲದೆ ರಾಮಾಯಣದ ಕಥೆಯನ್ನು, ಪಾರ್ವತಿಯ ಅಪೇಕ್ಷೆಯಂತೆ ಪರಮಭಕ್ತಿಯಿಂದ ಶಿವನು ವಿಸ್ತರಿಸಿ ಹೇಳಿದ ವಿವರ, ರಾಮಾಯಣ ಬಾಲಕಾಂಡದಲ್ಲಿದೆ.

೨ **ಬಾಲಮೃಕಂಡ**=(ಮಾರ್ಕಂಡೇಯ):— ಮೃಕಂಡು ಹಾಗು ಮನಸ್ವಿನಿಯರ ಮಗ ಮಾರ್ಕಂಡೇಯ. ಇವನು ಅಲ್ಪಾಯುವಾಗಿಯೆ ಹುಟ್ಟಿದುದರಿಂದ, ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ೧೪ ಕಲ್ಪಗಳ ವರೆಗಿನ ದೀರ್ಘಾಯುಷ್ಯವನ್ನು ಪಡೆದ. ಇವನ ಅಲ್ಪಾಯುಷ್ಯ ತೀರಿದಾಗ ಕರೆಯಲು ಬಂದ ಯಮನನ್ನು ಶಿವನು ಹಿಂದಕ್ಕಟ್ಟುತ್ತಾನೆ.

(ಭಾ. ವನ–೧೩೦)

**ನೀಲಕಂಠ**=ಶಿವ

ಕಾಲಕೂಟವನ್ನು ಕುಡಿದ ಪರಿಣಾಮವಾಗಿ ಇವನ ಕಂಠವು ನೀಲವರ್ಣವಾಯಿತು. ಆದುದರಿಂದ ಇವನಿಗೆ ನೀಲಕಂಠನೆಂಬ ಹೆಸರು ಬಂದಿತು.

**ಶೂಲಪಾಣಿ**=ತ್ರಿಶೂಲ ಕೈಯಲ್ಲಿದ್ದವ (ಶಿವ)

**ನಾಲಾಯ**=(ತ್ಸ. ವಲಯ), ಪ್ರದೇಶ

**ಕಪಾಲಪಿಡಿದ ದಿಗಂಬರ ನೀನೆ**—ಬ್ರಹ್ಮನು ಶಿವನನ್ನು ನಿಂದಿಸಿದುದರಿಂದ. ಶಿವನು ಬ್ರಹ್ಮನ ಐದನೆಯ ತಲೆ (ಕಪಾಲ) ಯನ್ನು ಚಿವುಟಲು, ಅದು ಶಿವನ ಕೈಗೆ ಅಂಟಿಕೊಂಡಿತು. ಅದರೊಂದಿಗೆ ಶಿವನು ಭೈರವರೂಪದಿಂದ ಭಿಕ್ಷಾಟನೆ ಮಾಡುತ್ತ ತಿರುಗಿದನು. ಕೊನೆಗೆ ಕಾಶೀಕ್ಷೇತ್ರದಲ್ಲಿ ಸ್ನಾನಮಾಡಲು ಅದು ಕಳಚಿತು.

(ಮತ್ಸ್ಯ ೧೮೩ / ೮೪–೮೬)

**ದಿಗಂಬರ**=ಬರಿಯ ಬೆತ್ತಲೆ.

ಸ್ವಾಯಂಭೂ ಮನುವಿನ ಯಜ್ಞದ ಕಾಲದಲ್ಲಿ. ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠರೆಂಬ ವಾದ ನಡೆಯಿತು. ಅಲ್ಲಿದ್ದವರು ಇದನ್ನು ನಿರ್ಣಯಿಸಲು

ಭೃಗುವಿನ ಕಡೆಗೆ ಒಪ್ಪಿಸಿದರು. ಭೃಗು ಶಿವನ ಕಡೆಗೆ ಹೋದಾಗ, ನಂದಿ ಅ
ನನ್ನು ತಡೆದನು. ಶಿವನು ಕ್ರೀಡಾರತನಾಗಿದ್ದುದನ್ನು ನೋಡಿ 'ನಿನ್ನ ಲಿಂಗ
ಪೂಜೆಯಷ್ಟೆ ಆಗಲಿ' ಎಂದು ಭೃಗುವು ಶಾಪ ಕೊಟ್ಟನು.

(ಪದ್ಮ. ಉತ್ತರಕಾಂಡ. ೨೫

**ಜಾಲಮಾಡುವ**=ವಂಚನೆಮಾಡುವ

**ಗೋಪಾಲನೆಂಬ ಪೆಣ್ಣಿಗೆ**=ವಿಷ್ಣುವಿನ ಮೋಹಿನೀರೂಪಕ್ಕೆ

ನಿನ್ನ ಮೋಹಿನೀರೂಪವನ್ನು ನೋಡಬೇಕೆಂಬ ಆಶೆಯಾಗಿದೆಯೆಂದ
ವಿಷ್ಣುವಿಗೆ ಶಿವನು ಹೇಳಲು, ಆ ಮೋಹಿನೀರೂಪವನ್ನು ಕಂಡು ಶಿವನ
ಮರುಳಾದನು.

(ಭಾಗವತ ೮-೧೨

೩ **ಕುಂಭಪುರ**=ಕುಂಭಕೋಣಮ್:-- ಈ ಕ್ಷೇತ್ರವು ಮಾಯಾವರವಿ
ನಿಂದ ೨೦ ಮೈಲಿನ ಮೇಲಿದೆ. ಇದೊಂದು ಪ್ರಮುಖ ಕ್ಷೇತ್ರ. ಇ
ಕುಂಭೇಶ್ವರ ದೇವಸ್ಥಾನವಿದೆ. (ಮದ್ರಾಸು)

**ಕುಂಭಪುರನಿವಾಸ**=ಕುಂಭೇಶ್ವರ

**ಕರದಲಿ ವೀಣೆಯ ನುಡಿಸುವ:**—ಶಿವನು ಸಂಗೀತ ಹಾಗು ನಾಟ್ಯದ
ಅಧಿದೇವತೆ. ರುದ್ರವೀಣೆಯೆಂಬ ಇವನ ಹೆಸರಿನ ವೀಣೆಯೊಂದಿದೆ. ಇ
ನೊಬ್ಬ ಪ್ರಸಿದ್ಧ ಸಂಗೀತಗಾರ. ಇವನ ಹೆಸರು ಸಂಗೀತರತ್ನಾಕರದಲ್ಲಿ ಉಲ್ಲೇ
ಖಿಸಲ್ಪಟ್ಟಿದೆ.

**ಉರಗಭೂಷಣ**=ಸರ್ಪಾಭರಣ, ಶಿವ

(ಭಾರತ ಅನುಶಾಸನ. ೨೦೬

**ಪರಮವೈಷ್ಣವ**=ಪರಮ ವಿಷ್ಣುಭಕ್ತ.

**ಗರುಡ:**— ಕಶ್ಯಪ ಮತ್ತು ವಿನತಾ ಇವರ ಎರಡನೆಯ ಮಗ. ಮ
ತಾಯಿಗೆ ದಾಸಿಯಾಗಬೇಕಾಗಿ ಬಂದ ತನ್ನ ತಾಯಿಯನ್ನು, ಅವಳ ವಚನದಂತೆ
ಸ್ವರ್ಗದಿಂದ ಅಮೃತತಂದು ತಾಯ ಸೆರೆಬಿಡಿಸಿದನು.

(ಭಾರತ ಆದಿ ೨೫-೩೭-೩

ಇವನ ಲೋಕೋತ್ತರ ಸಾಮರ್ಥ್ಯವನ್ನು ಕಂಡು ಸಂತಸಗೊಂಡ ವಿಷ್ಣು, ಗರುಡನಿಗೆ ಸುಪರ್ಣ ಎಂಬ ಹೆಸರನ್ನು ಕೊಟ್ಟು ತನ್ನ ವಾಹನವನ್ನಾಗಿ ಮಾಡಿಕೊಂಡನು. ಅಲ್ಲದೆ ತನ್ನ ಧ್ವಜಚಿಹ್ನವನ್ನೂ ಮಾಡಿಕೊಂಡನು.

(ಭಾರತ ಆದಿ. ೩೩)

**ಗರುಡಗಮನ**=ವಿಷ್ಣು.

**ಗರುಡಗಮನ.. ಪ್ರಾಣಪ್ರಿಯನು ನೀನೇ:**— ಶಿವನು ಅಹಂಕಾರಾಭಿಮಾನಿಯಾದ ದೇವತೆ. ಇವನ ಅನುಗ್ರಹವಿಲ್ಲದೆ ವಿಷ್ಣುವಿನ ಅನುಗ್ರಹವಾಗಲಾರದು. ಶೈವಪುರಾಣಗಳಲ್ಲಿ ಶಿವನು ವಿಷ್ಣುವಿನ ಮಿತ್ರನೆಂದೆನಿಸಿಕೊಂಡಿದ್ದಾನೆ.

## ೧೩ನೆಯ ಹಾಡು

೧ **ಗಂಗೆಯ ಮುಂಡೆಯೊಳಿಟ್ಟ ದೊರೆಯ:**— (ಪದ ೧೨, ನುಡಿ ೧)

**ರುಂಡಮಾಲೆಸಿರಿಯ**=ರುಂಡಮಾಲೆಯ ಚೆಲುವುಳ್ಳ.

(ಭಾರತ, ಅನುಶಾಸನ, ೨೦೭)

**ಕೆಂಡಗಣ್ಣ**=(ಭಾರತ ಅನುಶಾಸನ, ೨೦೫)

**ಗಜಚರ್ಮಾಂಬರ**= (ಪದ ೧೨, ನುಡಿ ೧)

**ತ್ರಿಜಗನ್ಮೋಹಕನ:**— ಮೂರುಲೋಕಗಳಲ್ಲಿ ತ್ರಿವಿಧಜೀವಿಗಳಿಗೆ ಅವರವರ ಗುಣಾನುಸಾರವಾಗಿ ಮೋಹವನ್ನು ಉಂಟುಮಾಡುವವ.

**ಭುಜಗಕುಂಡಲ**=ನಾಗಕುಂಡಲ.

೨ **ಭಸಿತಭೂಷಿತ:**—(ಭಾರತ, ಅನುಶಾಸನ ೨೦೭)

**ಪಶು**=ಜೀವ. **ಪಶುಪತಿ**=ಸರ್ವಜೀವರ ಅಧಿಪತಿ.

(ಲಿಂಗಪುರಾಣ, ಉತ್ತರ ೯)

**ಶಶಿಶೇಖರ**=ಚಂದ್ರಚೂಡ (ಪದ ೧೨, ನುಡಿ ೨)

೩ **ಕಪ್ಪುಗೊರಳ**=ನೀಲಕಂಠ (ಪದ ೧೨, ನುಡಿ ೨)

**ಕಂದರ್ಪಪಿತ**=ವಿಷ್ಣು.

**ಕಂದರ್ಪಪಿತನ ಸಖ**=ಶಿವ. (ಪದ ೧೨, ನುಡಿ ೩)

**ಮುಪ್ಪುರ**=ತ್ರಿಪುರ:— ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ತಾರಕಾಸುರನ ಮೂವರು ಮಕ್ಕಳಿಗೆ ಮಯನು ಕಟ್ಟಿಕೊಟ್ಟ ಮೂರು ಪಟ್ಟಣಗಳು. ದೇವತೆಗಳ ಗೋಜಿಗೆ ಹೋಗಬೇಡಿರೆಂದು ಹೇಳಿದ ಮಯನ ಆಜ್ಞೆಯನ್ನು ಮೀರಿ ಶಿವನಿಂದ ಹತರಾದರು. ಬುದ್ಧರೂಪತಾಳಿ ವಿಷ್ಣು ಇವರ ಧರ್ಮವನ್ನು ನಾಶ ಮಾಡಿದನು, (ಭಾಗವತ ೭–೧೦)

**ಸರ್ಪಭೂಷಣ**=ಉರಗಭೂಷಣ.

**ರಾಮನಾಮಸ್ಮರನ**:— (ಪದ–೧೨, ನುಡಿ–೧)

**ಕಾಮನ ಗೆಲಿದವನ**:— (ಪದ–೧೨, ನುಡಿ–೧)

**ಪಂಪಾ=ಹಂಪೆ**:— ಹೊಸಪೇಟೆಯಿಂದ (ಜಿ. ಬಳ್ಳಾರಿ) ಈಶಾನ್ಯಕ್ಕೆ ೯ ಮೈಲಿನ ಮೇಲೆ ತುಂಗಭದ್ರಾ ತೀರದಲ್ಲಿದೆ. ಇಲ್ಲಿಯ ವಿರೂಪಾಕ್ಷೇಶ್ವರನು ಪುರಾಣಪ್ರಸಿದ್ಧನಾಗಿದ್ದಾನೆ. ಇದು ವಿಜಯನಗರದ ಅರಸರ ರಾಜಧಾನಿಯಾಗಿತ್ತು. (**ಪಂಪಾವಾಸಿ=ವಿರೂಪಾಕ್ಷೇಶ್ವರ**) **ತಾರಕ ಉಪದೇಶಿ**=ತಾರಕಮಂತ್ರವನ್ನು ಜೀವಿಗಳಿಗೆ ಉಪದೇಶಿಸಿ ಮುಕ್ತಿ-ಯೋಗ್ಯರನ್ನಾಗಿ ಮಾಡುವವ,

## ೧೪ನೆಯ ಹಾಡು

ಈ ಹಾಡಿನಲ್ಲಿ ಶ್ರೀಹರಿಯ ಹಾಸಿಗೆಯಾದ ಶೇಷದೇವರನ್ನು ಮಂಚದ ರೂಪಕದಿಂದ ಬಣ್ಣಿಸಲಾಗಿದೆ.

೧ **ಮಡು**=ಕ್ಷೀರಸಾಗರ (ಕಾಲಿಂದಿಯ ಮಡು)

**ಮೃಡನ ತೋಳಲಿ ನೆಲಸಿಹ**= (ಉರಗಭೂಷಣ)

**ಪೊಡವಿ ಹೊತ್ತಿಹ ಮಂಚ**=ಶೇಷ:— ಆದಿಶೇಷನ ಸಾವಿರ ಹೆಡೆಗಳಲ್ಲಿಯ ಒಂದು ಹೆಡೆಯ ಮೇಲೆ ಭೂಮಿ ನಿಂತಿದೆ.

**ಕಡಲಶಯನ**=ಕ್ಷೀರಸಾಗರ ವಾಸಿ, ವಿಷ್ಣು,

ಅನಂತಾಸನ, ಕ್ಷೀರಸಾಗರ, ವೈಕುಂಠ ಇವು ವಿಷ್ಣುವಿನ ಅನಾದಿಸ್ಥಾನಗಳು.

(ಭಾರತ ಆದಿ ೩೫–೩೬)

**ಶ್ರೀರಂಗ**:—ಶ್ರೀರಂಗವೆಂಬ ಹೆಸರಿನ ೧) ಆದಿರಂಗ (ಶ್ರೀರಂಗಪಟ್ಟಣ) ೨) ಮಧ್ಯರಂಗ=ಶಿವಸಮುದ್ರದಲ್ಲಿಯ ದೀಪ ೩) ಅಂತ್ಯರಂಗ=ಶ್ರೀರಂಗಂ ಎಂದು ಮೂರು ಕ್ಷೇತ್ರಗಳಿವೆ.

೨ **ಕಣ್ಣುಮೂಗಿನ ಮಂಚ**:—ಹಾವಿಗೆ ಕಿವಿಗಳಿಲ್ಲವೆಂಬುದು ಇದರಿಂದ ಧ್ವನಿತವಾಗುವುದು.

**ಹುಣ್ಣಿಮೆಯ ಚಂದ್ರಮನ... ಮಂಚ**:—ರಾಹು ಸರ್ಪಾಕಾರನಾಗಿ ಹುಣ್ಣಿಮೆಯ ದಿನ ಚಂದ್ರನನ್ನು ಅಡ್ಡಗಟ್ಟಿ ನುಂಗುವುದರಿಂದ ಗ್ರಹಣವಾಗುವು ದೆಂದು ನಂಬುಗೆ ಇದೆ.

(ಪದ್ಮ-ಬ್ರಹ್ಮಖಂಡ ೧೦)

**ಬಣ್ಣ ಬಿಳುಪಿನ ಮಂಚ**:— ಶೇಷನ ಮೈಬಣ್ಣ ಬಿಳುಪು.

**ಹೊನ್ನು ಕಾದಿಹ ಮಂಚ**:— ಹುಗಿದಿಟ್ಟ ನಿಧಿಯನ್ನು ಹಾವು ಕಾಯುವುದೆಂಬ ನಂಬಿಗೆ ನಮ್ಮಲ್ಲಿದೆ. (ಸರ್ಪಗಾವಲು)

**ಚೆನ್ನಿಗ ಪರೀಕ್ಷಿತನ...... ಮಂಚ**:— ಪರೀಕ್ಷಿತನು ಅರ್ಜುನನ ಮೊಮ್ಮಗ; ಅಭಿಮನ್ಯು-ಉತ್ತರೆಯರ ಮಗ. ಇವನು ಬೇಟೆಗಾಗಿ ಹೋದಾಗ ದಣಿದು,ಶಮೀಕ ಋಷಿಯ ಆಶ್ರಮಕ್ಕೆ ಹೋದನು.ಶಮೀಕನು ತಪಸ್ಸು ಮಾಡು ತ್ತಿದ್ದನು. ತನ್ನ ಮಾತನ್ನು ಕೇಳದುದಕ್ಕೆ ಸಿಟ್ಟಿಗೆದ್ದು ಪರೀಕ್ಷಿತ, ಸತ್ತ ಹಾವನ್ನು ಅವನ ಕೊರಳಿಗೆ ಹಾಕಿದ.ಅವನ ಮಗನಾದ ಶೃಂಗಿ ಇದನ್ನು ನೋಡಿ ಸಿಟ್ಟಿಗೆದ್ದು, ತನ್ನ ತಂದೆಗೆ ಅಪಮಾನ ಮಾಡಿದವನು ಇಂದಿಗೆ ಏಳು ದಿನದೊಳಗಾಗಿ ಹಾವು ಕಚ್ಚಿ ಸಾಯಲಿ—ಎಂದು ಶಾಪ ಕೊಟ್ಟ. ಪರೀಕ್ಷಿತನು ಎಷ್ಟೆಷ್ಟು ಪ್ರಯತ್ನ ಪಟ್ಟರೂ ಶಾಪವು ಹುಸಿಯಾಗದೆ, ಕೊನೆಗೆ ತಕ್ಷಕನೆಂಬ ಹಾವಿನಿಂದ ಮೃತ- ನಾದನು.

(ಭಾರತ— ಆದಿ. ೪೨–೫೧)

**ಗಾಳಿನುಂಗುವ ಮಂಚ**:—ಹಾವು ಅಲ್ಪಾಹಾರಿಯಾಗಿರುವುದರಿಂದ, ಗಾಳಿಯಿಂದ ಜೀವಿಸುವುದೆಂದು ಜನರು ನಂಬುತ್ತಾರೆ. ಅಂತೆಯೇ ಇದಕ್ಕೆ ' ವಾತಾಶನ ' ಎಂಬ ಹೆಸರಿದೆ.

**ನಾಲಗೆ ಎರಡುಳ್ಳ ಮಂಚ**:— ತನ್ನ ತಾಯಿಯ ವಿಮೋಚನೆಗಾಗಿ

ಗರುಡ ಅಮೃತ ತರಲು ಸ್ವರ್ಗಕ್ಕೆ ಹೋಗಿ, ಅಲ್ಲಿ ದೇವತೆಗಳ-ಸಂಗ
ಹೋರಾಡಿ ಅಮೃತಕಲಶವನ್ನು ತರುತ್ತಾನೆ. ಇದು ಇಂದ್ರನಿಗೆ ಸೇರುವ
ಗರುಡನು ನಾಗರಿಗೆ ಸ್ನಾನಮಾಡಿ ಬಂದು ಅಮೃತ ಸೇವಿಸಿರೆಂದು ಹೇಳಲು
ಅವರು ಅತ್ತ ಹೋದಾಗ, ಇಂದ್ರನು ಆ ಕಲಶವನ್ನು ಮಾಯವಾಡಿದನು
ತಿರುಗಿ ಬಂದ ನಾಗರು, ಹುಲ್ಲಿನ ಮೇಲೆ ಬಿದ್ದ ಅಮೃತ ನೆಕ್ಕಿದುದರಿಂದ, ಅವ
ನಾಲಗೆ ಎರಡು ಸೀಳಾದುವು.

(ಭಾರತ-ಆದಿ-೧

**ಕಾಳಗದಲಿ ಕಿರೀಟಿಯ ಮುಕುಟ...ಮಂಚ**:—ಕರ್ಣಾರ್ಜುನ
ಯುದ್ಧನಡೆದಾಗ, ಕರ್ಣನು ಬಿಟ್ಟ ಸರ್ಪಾಸ್ತ್ರವು ಶ್ರೀಕೃಷ್ಣನ ಯುಕ್ತಿಯ
ಮೂಲಕ ಅರ್ಜುನನ ಕೊರಳಿಗೆ ತಾಗದೆ, ಅವನ ಕಿರೀಟವನ್ನು ಹಾರಿಸಿಕೊಂಡು
ಹೋಯಿತು (ಭಾರತ ಕರ್ಣ. ೭).

೪ **ಹಕ್ಕಿಗೆ ಹಗೆಯಾದ ಮಂಚ**=ಗರುಡ.

**ಎದೆ+ತಲ್ಲಣ**=ಎದೆಯನ್ನು ಒಡೆಯಿಸುವವ.

**ಸೊಕ್ಕು ಪಿಡಿದ ಮಂಚ**:— ಶ್ರೀಲಕ್ಷ್ಮೀ-ವೆಂಕಟೇಶರು ಏಕಾಂತದಲ್ಲಿ
ದ್ದಾಗ, ಶೇಷದೇವರನ್ನು ದ್ವಾರಪಾಲಕನ ಕೆಲಸದಲ್ಲಿ ನೇಮಿಸಿದರು. ಆ
ವಾಯುದೇವರು ದರ್ಶನಕ್ಕೆಂದು ಬರಲು, ಅವರನ್ನು ಒಳಗೆ ಬಿಡಲಿಲ್ಲ. ಇಬ್ಬ
ರಿಗೂ ಹೋರಾಟ ನಡೆಯಿತು. ಪರಮಾತ್ಮನಿಗೆ ಇದು ಗೊತ್ತಾಯಿತು. ಆಗ ಶ್ರೀ
ವೆಂಕಟೇಶನು ಶೇಷದೇವರಿಗೆ ವಾಯುವಿನ ಸಾಮರ್ಥ್ಯವನ್ನು ನಿದರ್ಶನಕ್ಕೆ
ತಂದುಕೊಟ್ಟು, ಅವನ ಅಹಂಕಾರವನ್ನು ಅಡಗಿಸಿದನು.

(ಭವಿಷ್ಯೋತ್ತರ. ವೆಂ. ಮ. ೨ ನೆಯ ಅಧ್ಯಾಯ

೫ **ಅಕಲಂಕ**=ಪರಿಶುದ್ಧವಾದ

**ಸಂಕರುಷಣ**=ಶೇಷ (ಶ್ರೀಹರಿಗೂ ಈ ಹೆಸರಿದೆ)

## ೧೫ನೆಯ ಹಾಡು

ವಿ. ಸೂ:— ಈ ಹಾಡಿನ ಮೂರು ನುಡಿಗಳಲ್ಲಿ ಅನುಕ್ರಮವಾಗಿ ಶ್ರೀಹನುಮ,
ಭೀಮ, ಮಧ್ವರ ಮಹಿಮೆಯ ವಿಷಯವು ಬರುತ್ತದೆ.

೧ **ಭಾರತೀದೇವಿ:**—ವಾಯುದೇವರ ಪತ್ನಿ (ಕಕ್ಷ ೪).

**ವಾನರಕುಲದೊಳಗೆ ಶ್ರೇಷ್ಠ:**— ಹನುಮಂತ

(ಕಪಿನಾಯಕನಾದ ಕೇಸರಿಯ ಮಗ. ವಾಯುದೇವರ ಒಂದನೆಯ ಅವತಾರ.)

**ಕಣ್ಣಿಲ್ಲದವಳು**=ಅಂಜನಾದೇವಿ: ಇವಳು ತನ್ನ ತಾಯಿ ಅಹಲ್ಯೆಯ ಶಾಪದಿಂದ ಕುರುಡಳಾದಳು. (ಆಂಧ್ರಭಾಷೆಯ ವಚನ ವಿಚಿತ್ರರಾಮಾಯಣ-) ಇವಳ ತಂದೆಯ ಹೆಸರು ಕುಂಜರ. ಇವಳು ಒಬ್ಬ ಅಪ್ಸರೆ. ಶಾಪದಿಂದ ಅಂಜನೆಯಾಗಿ ಹುಟ್ಟಿ ಕೇಸರಿಕಪಿಯನ್ನು ಮದುವೆಯಾದಳು,

(ಶಿವ. ಶತಸಂಹಿತಾ ೨೦; ಭವಿಷ್ಯ. ಪ್ರತಿಸರ್ಗ ೪-೧೩)

**ನಿನ್ನ ತೊರೆದು ಬ್ರಹ್ಮಚಾರಿಯಾದ:**—

ತ್ರೇತಾಯುಗದಲ್ಲಿ ಭಾರತೀದೇವಿ ತನ್ನ ಮೊದಲನೆಯ ಜನ್ಮದಲ್ಲಿ ಶಿವ-ಬ್ರಾಹ್ಮಣನ ಕನ್ಯೆಯಾಗಿ ಹುಟ್ಟಿ, ಅಲ್ಪಾಯುವಾಗಿ ತೀರಿದಳು. ಎರಡನೆಯ ಜನ್ಮದಲ್ಲಿ ನಲ-ದಮಯಂತಿಯರ ಮಗಳಾದ ಇಂದ್ರಸೇನೆಯಾಗಿ ಹುಟ್ಟಿ ಮೌದ್ಗಲ್ಯನೆಂಬ ಋಷಿಯ ಶಾಪದಿಂದ (ಶಚೀ, ಶ್ಯಾಮಲಾ, ಪಾರ್ವತೀ, ಉಷಾ ಇವು ಅಂಶಗಳಿಂದ ಕೂಡಿ) ದ್ರೌಪದಿಯಾಗಿ ಯಜ್ಞಕುಂಡದಲ್ಲಿ ಹುಟ್ಟಿದಳು. ತ್ರೇತಾಯುಗದಲ್ಲಿದ್ದ ಹನುಮಂತದೇವರಿಗೆ ಭಾರತಿಯ ಸಂಬಂಧ ಬರಲಿಲ್ಲ.

(ಭಾರತ ಆದಿ. ೨೧೨)

**ಹೆಣ್ಣಾಗಿ ಪೋಗಿ:**— (ರಾಮಾಯಣ- ಸುಂದರ. ೩೦-೩೬)

**ಉಣ್ಣ ಕರೆದರೆ ಎಂಜಲೆಡೆಯನೊಯ್ದವ:**—

ಈ ಕಥೆ ದಾಸಸಾಹಿತ್ಯದಲ್ಲಿ ಅನೇಕ ಕಡೆಗಳಲ್ಲಿ ಸಿಕ್ಕುತ್ತದೆ. ಆದರೆ ಇದರ ಮೂಲವು ಎಲ್ಲಿದೆಯೆಂಬುದು ಗೊತ್ತಾಗಲಿಲ್ಲ.

೨ **ಗುರುತಲ್ಪಗಾಮಿ**=ಚಂದ್ರ. ಚಂದ್ರನು ಗುರುವಿನ ಹೆಂಡತಿಯಾದ ತಾರಾದೇವಿಯೊಂದಿಗೆ ಸಂಬಂಧ ಬೆಳೆಸಿ ಗುರುವಿನ ಶಾಪಕ್ಕೆ ಗುರಿಯಾದ ಕಥೆ.

(ಭಾಗವತ ೯-೨೪; ಹರಿವಂಶ ೧-೨೫)

**ಅಸುರೆ**=ಹಿಡಿಂಬೆ. (ಭಾರತ. ಆದಿ. ೧೬೫–೧೬೮)

**ಹೊಟ್ಟೆಗೆಂತಲೆ ಹೋಗಿ ಭಿಕ್ಷದನ್ನವನುಂಡು:**— ಏಕಚಕ್ರನಗ
ದಲ್ಲಿರುವಾಗ ಭೀಮಸೇನನೇ ಮಧುಕರಿಯನ್ನು ಬೇಡಿ ತರುತ್ತಿದ್ದ. ಕುಂತಿ—ತಂ
ಅನ್ನದಲ್ಲಿ ಅರ್ಧವನ್ನು ಭೀಮಸೇನನಿಗೆ ಉಣ್ಣಲಿಕ್ಕೆ ಕೊಟ್ಟು—ಉಳಿದರ್ಧವನ
ತಾವೆಲ್ಲರೂ ಹಂಚಿಕೊಳ್ಳುತ್ತಿದ್ದರು. (ಭಾರತ. ಆದಿ. ೧೭೧–೧೭೮)

**ಅಟ್ಟುಹಾಕುವನಾಗಿ ದಿನವ ಕಳೆದ:**—ಪಾಂಡವರು ಅಜ್ಞಾತವಾ
ದಲ್ಲಿರುವಾಗ ಭೀಮನು ಬಾಣಸಿಗನಾಗಿದ್ದನು. (ಭಾರತ.ವಿರಾಟ.

೩ **ಮುಂಡೆ ಬೋಳಾಗಿ**=ಸಂನ್ಯಾಸಿಯಾಗಿ (ಮಧ್ವಾವತಾರ)

**ಬೋರೆ ಮರದ ಕೆಳಗಿದ್ದವಗೆ:**— ಶ್ರೀಮಧ್ವಾಚಾರ್ಯರು ತಮ
ಅವತಾರ ಕಾರ್ಯ ಮುಗಿಸಿ, ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ಶ್ರೀವೇದವ್ಯಾಸ
ಸನ್ನಿಧಿಯಲ್ಲಿ ಇರುವರೆಂಬುದು ಸುಮಧ್ವವಿಜಯದಲ್ಲಿ ಬಂದಿದೆ :

> ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂಚ ಕಲೌಯುಗೇ
> ಯತಿರೂಪಧರೋವಾಯುರ್ಭವಿಷ್ಯತಿ ನ ಸಂಶಯಃ ||
>
> ಹರಿವಂಶ

## ೧೬ನೆಯ ಹಾಡು

ಪರಶುಕ್ಲತ್ರಯರಲ್ಲಿ ಒಬ್ಬಳಾದ ಶಾರದಾದೇವಿಯ ಸ್ತೋತ್ರವಿದು. ಯುಕು
ಶಾಸ್ತ್ರಗಳಲ್ಲಿ ಮನಸ್ಸನ್ನು ಪ್ರಚೋದಿಸಿ, ಪರಮಾತ್ಮವಿಷಯಕವಾದ ಜ್ಞಾನವನ್ನು ನೀಡ
ವವಳು ಈ ದೇವಿ.

**ವಾಗ್ದೇವಿ** (ವಾಕ್+ದೇವಿ)= ವಾಣಿಯ ಅಭಿಮಾನಿ ದೇವತೆ
ಸರಸ್ವತಿ.

೧ **ಕಮಲಜ**=ಬ್ರಹ್ಮ.

ಸರಸ್ವತೀದೇವಿಯನ್ನು ಮನಃಪೂರ್ವಕವಾಗಿ ಆರಾಧಿಸಿದವರಿಗೆ ಸನ್ಮ
ತಿಯು ಉಂಟಾಗುವುದೆಂಬುದಕ್ಕೆ ದಾಸರಾಯರು ಇಲ್ಲಿ ಪ್ರಹ್ಲಾದನ ಕಥೆಯನ್ನು
ಉದಾಹರಣೆಗಾಗಿ ತೆಗೆದುಕೊಂಡಿದ್ದಾರೆ.

(ಭಾಗವತ ೭; ೪–೮. ವಿಷ್ಣುಪುರಾಣ ೧–೧೭)

**ವಿಪ್ಲವ**=ಸಂಕಟ, ಗಂಡಾಂತರ.

೨ ಈ ನುಡಿಯಲ್ಲಿ ಸರಸ್ವತಿಯ ಆರಾಧನೆಮಾಡದೆ ಇದ್ದುದರ ದುಷ್ಪರಿಣಾಮವನ್ನು ಉದಾಹರಣೆಯೊಂದಿಗೆ ವಿವರಿಸಲಾಗಿದೆ:

**ದಶಮುಖನ ಅನುಜ:—** ರಾವಣನ ತಮ್ಮ ಕುಂಭಕರ್ಣ. ಇವನು ತಪಸ್ಸಿನ ಪ್ರಾರಂಭದಲ್ಲಿ ವಾಗ್ದೇವಿಯನ್ನು ಸ್ಮರಿಸದೆ ಇದ್ದುದರಿಂದ, ಇವನಿಗೆ ವರಯಾಚನೆಯ ಕಾಲದಲ್ಲಿ, ನಿದ್ರೆಯನ್ನು ಬೇಡುವಂತೆ ಆ ದೇವಿಯು ನಾಲಗೆಯಲ್ಲಿ ನಿಂತು ಪ್ರೇರಿಸಿದಳು. (ರಾಮಾಯಣ ಉತ್ತರ ಕಾಂಡ ೧೦)

೩ ಇದರಲ್ಲಿ ವಾಗ್ದೇವಿಯ ಭಜನೆಯ ಫಲವನ್ನು ಹೇಳಲಾಗಿದೆ:—

ಈ ದೇವಿ ಉತ್ತಮವಾದ ವಾಕ್‌ಶುದ್ಧಿಯನ್ನು ಕೊಟ್ಟು, ಯಾವಾಗಲೂ ಶ್ರೀಹರಿಯ ಸೇವೆಯಲ್ಲಿಟ್ಟು (ಪರತತ್ತ್ವದ ಕಥಾಮೃತವನ್ನು) ಪರಮಾತ್ಮನ ವಿಷಯಕವಾದ ಜ್ಞಾನವನ್ನು ದಯೆಪಾಲಿಸುವಳು.

## ೧೭ನೆಯ ಹಾಡು

ದಾಸರು ಶೃಂಗೇರಿಗೆ ಯಾತ್ರೆಮಾಡಿದಾಗ, ಅಲ್ಲಿಯ ಶ್ರೀಶಾರದಾದೇವಿಯನ್ನು ಪ್ರಾರ್ಥಿಸಿದುದನ್ನು ಈ ಕೀರ್ತನೆಯಲ್ಲಿ ನೋಡಬಹುದು.

೧ **ಅಕ್ಷರಕ್ಷರವಿವೇಕವ:—** (೧) ವಾಗಭಿಮಾನಿಯಾದುದರಿಂದ ಅಕ್ಷರ-ರಕ್ಷರಗಳ ಸಂಬಂಧ ಮತ್ತು ಪ್ರಕಾರಗಳನ್ನು ತಿಳಿಸುವವಳು.

(೨) **ಅಕ್ಷರ**=ನಿತ್ಯನಾದ ಶ್ರೀಮನ್ನಾರಾಯಣ, **ಕ್ಷರ**=ನಾಶಹೊಂದತಕ್ಕ. ಜಡ-ಜೀವಗಳ ಸರಿಯಾದ ಜ್ಞಾನವನ್ನು ದಯೆಪಾಲಿಸುವವಳು.

**ಕುಕ್ಷಿಯೊಳ್ ಈರೇಳು ಲೋಕವ: —** ಇದರ ಮೂಲಕಥೆ ನಮಗೆ ತಿಳಿದಿಲ್ಲ.

೨ **ಶೃಂಗಾರಪುರ**=ಶೃಂಗೇರಿ

ಶಿವಮೊಗ್ಗ ಜಿಲ್ಲೆಯಲ್ಲಿದೆ. ಇಲ್ಲಿಯ ಮಠವು ಆದ್ಯ ಶಂಕರಾಚಾರ್ಯರ ಆದ್ಯ ಪೀಠವಾಗಿದ್ದು ತುಂಗಾನದಿಯ ತೀರದಲ್ಲಿದೆ. ಇಲ್ಲಿ ಆಚಾರ್ಯರು ಶಾರದಾದೇವಿಯನ್ನು ಪ್ರತಿಷ್ಠಾಪಿಸಿದ್ದಾರೆ.

೩ **ಸರ್ವಾಲಂಕಾರಮಯ ಮೂರುತಿ:**— ಇದರಲ್ಲಿ ದಾಸರು ಶ್ಲೇಷ
ವನ್ನು ತೋರಿಸಿದ್ದಾರೆ. ಎಲ್ಲ ಆಭರಣಗಳಿಂದ ಕೂಡಿದವಳು—ಅಲ್ಲದೆ
ಇವಳು ವಾಣೀದೇವಿಯಾದುದರಿಂದ, ಎಲ್ಲ ಕಾವ್ಯಾಲಂಕಾರಗಳನ್ನು
ಹೊಂದಿದವಳು.

## ೧೮ನೆಯ ಹಾಡು

ದಾಸರಾಯರು ಸಂಗೀತ, ಸಾಹಿತ್ಯ, ನರ್ತನ ಮೊದಲಾದ ಎಲ್ಲ ಕಲೆಗಳಲ್ಲಿಯೂ
ಬಲ್ಲಿದರು; ಆ ಕಲೆಗಳನ್ನು ನಾಡಿನ ಜನರ ಪ್ರಯೋಜನಕ್ಕೆ ಒದಗಿಸಬೇಕೆಂಬ ಅಪೇಕ್ಷೆ
ಯುಳ್ಳವರು; ಆದುದರಿಂದ ಆ ಕಲೆಗಳ ಅಭಿಮಾನಿ ದೇವತೆಯಾದ ಸರಸ್ವತಿಯನ್ನು
'ದಿವ್ಯಮತಿಯನ್ನು ಕೊಡು' ಎಂದು ಬೇಡಿಕೊಂಡಿದ್ದಾರೆ. ಕಲೆಯ ಕೊನೆಯ ಗುರಿಯು
ಶ್ರೀಹರಿಯ ಸಾಕ್ಷಾತ್ಕಾರವೇ ಎಂಬುದನ್ನು ದಾಸರು ಇಲ್ಲಿ ಪ್ರಕಟಪಡಿಸಿದ್ದಾರೆ.

೧ **ಮೃಡ**=ಶಿವ: **ಹರಿಹಯ**=ಇಂದ್ರ.

ತಾರತಮ್ಯದಂತೆ ಸರಸ್ವತಿಯು ಇಂದ್ರ-ರುದ್ರರಿಗಿಂತ ಮೇಲಿನ ಕಕ್ಷದವಳು.

**ನಾಮ:**— ಶ್ರೀಹರಿಯ ನಾಮವನ್ನೆ ತಮ್ಮ ನಾಲಗೆಯಿಂದ ನುಡಿಸು
ವಂತೆ ದಾಸರು ಪ್ರಾರ್ಥಿಸಿದ್ದಾರೆ.

೩ **ಪತಿತಪಾವನೆ**=ಪಾಪಿಗಳನ್ನು ಉದ್ಧರಿಸುವವಳು.

**ವಿತತ**=ಎಲ್ಲೆಲ್ಲಿಯೂ ವ್ಯಾಪಿಸಿದ.

## ೧೯ನೆಯ ಹಾಡು

ಶ್ರೀಸರಸ್ವತಿಯ ವ್ಯಕ್ತಸ್ವರೂಪದ ವರ್ಣನೆಯನ್ನು ಇದರಲ್ಲಿ ದಾಸರು ಸುಂದರ
ವಾಗಿಯೂ ವಿವರವಾಗಿಯೂ ಮಾಡಿದ್ದಾರೆ.

೧ **ಸಲಿಲಜೋದ್ಭವ**=ಬ್ರಹ್ಮ.

ಸರಸ್ವತಿಯು ಬ್ರಹ್ಮನ ಬಾಯಲ್ಲಿ ಮನೆಮಾಡಿರುವಳೆಂಬುದು ಪೌರಾ
ಣಿಕ ಸಮಯ.

**ಅಂದುಗೆ**=ನೂಪುರ, ಪಾದದ ಆಭರಣ.

**ಪೆಂಡೆಯಭೇದ** : ಕಾಲಿನ ಆಭರಣ ವಿಶೇಷ
**ಜಂಘೆ**=ಕಣಕಾಲು.
**ಜಾನು**=ಮೊಣಕಾಲು.

ಈ ನುಡಿಯಲ್ಲಿ ದಾಸರು ಸರಸ್ವತಿಯ ಅಡಿಯಿಂದ ಮುಡಿಯ ವರೆಗಿನ ವರ್ಣನೆಯನ್ನು ಆರಂಭಿಸಿದ್ದಾರೆ.

೨ **ಕನಕವಸನ**=ಹೊಂಬಣ್ಣದ ಸೀರೆ.
**ಜಘನ**=ನಡುವಿನ ಹಿಂಬದಿ
**ಮಣಿದಾಮ**=ರತ್ನದ ಉಡೆದಾರ
**ತನುಜಠರ**=ತೆಳುವಾದ ಹೊಟ್ಟೆ
**ಉದ್ದಂಡ**=ಶ್ರೇಷ್ಠ

೩ **ಕರಿರಾಜಪೋತ**=ಆನೆಯ ಮರಿ
**ಭಾರ**=ಪರಿಪುಷ್ಟತೆ
**ನಾಸಾಭರಣ**=ಮೂಗುತಿ
**ಶ್ರವಣ**=ಕಿವಿ
**ಬಿಸಜದಳ**=ಕಮಲದ ಎಸಳು (ಬಿಸ=ದೇಟು, ನಾಳ)
**ಕರ್ಣಾಂತ**=ಕಿವಿಯವರೆಗೆ
**ಶಶಿಸೂರ್ಯರ ಆಭರಣ**=ತಲೆಯಲ್ಲಿ ಇರಿಸುವ ಆಭರಣ.
**ಮೂರ್ಧಜ**=ತಲೆಗೂದಲು

೪ **ಜಡೆಬಂಗಾರ**=ಹೆರಳು ಬಂಗಾರ
**ರಾಗುಟಿ**=ತಲೆಯ ಆಭರಣ
**ಭಾರ**=ಹೊಣೆ

## ೨೦ನೆಯ ಹಾಡು

ಇದು ಉಗಾಭೋಗ.

೧ **ನಿಜಗತಿಯ**=ಮೋಕ್ಷವನ್ನು

## ೨೧ನೆಯ ಹಾಡು

ಶ್ರೀವಾಯುದೇವರ ಸ್ತೋತ್ರ ಮತ್ತು ಮಾಹಾತ್ಮ್ಯವರ್ಣನೆಗಳು ಈ ಕೀರ್ತ
ಯಿಂದ ಮೊದಲಾಗುವುವು. ಹನುಮ-ಭೀಮ-ಮಧ್ವ ಇವು ಶ್ರೀವಾಯುದೇ
ೞ ಅವತಾರಗಳೆಂಬುದನ್ನು ಈ ಮೊದಲೆ ಹೇಳಲಾಗಿದೆ. ಈ ಅವತಾರಕ್ರಮದಲ್ಲಿಯೇ ಇ
ಕೀರ್ತನೆಗಳನ್ನು ಸಂಕಲಿಸಲಾಗಿದೆ.

(ಹನುಮದವತಾರ—೨೧ರಿಂದ೨೪ರ ವರೆಗಿನ ಪದ್ಯಗಳು)

**ಮುಖ್ಯಪ್ರಾಣ:**— ಮೂಲವಾಯುದೇವರು.

ವಾಯುದೇವರು ಮುಖ್ಯಪ್ರಾಣರೆಂಬುದನ್ನು—

**ಛಾಂದೋಗ್ಯ:**— (೫-೧-೬ ರಿಂದ ೧೫ರ ವರೆಗಿನ ಮಂತ್ರಗಳ

**ಷಟ್ಪ್ರಶ್ನೆ**— ( ೨-೧—೨-೩ ಮಂತ್ರಗಳು )

**ಬೃಹದಾರಣ್ಯಕ** — (೮-೧ ರಿಂದ ೧೪ ಮಂತ್ರಗಳು)

**ಐತರೇಯ**— (೨-೧-೪ ಮಂತ್ರಗಳು) ಇವು ಸೋದಾಹರಣವಾ
ಸಿದ್ಧಪಡಿಸಿರುತ್ತವೆ.

ಇಲ್ಲಿ ಹನುಮಂತದೇವರನ್ನೇ ಮುಖ್ಯಪ್ರಾಣನೆಂದು ಸಂಬೋಧಿಸಲಾಗಿದೆ.

**ತಂದೆ ನೀನೆ ಎನಗೆ ತಾಯಿ ನೀನೆ:**—

ಮಾತರ್ಮೇ ಮಾತರಿಶ್ವನ್...ಮತ್ಯಾಮಯಾನಾಂ ॥

(ವಾಯುಸ್ತುತಿ ೧೪

ಇದೇ ಭಾವವೇ ಮುಂದಿನ ಎರಡು ನುಡಿಗಳಲ್ಲಿಯೂ ಬೆಳೆದು ನಿಂತಿದೆ:

**ಏಕಾಂತಭಕ್ತ:**— ಶ್ರೀಕೃಷ್ಣನು ಉದ್ಧವನಿಗೆ ಏಕಾಂತಭಕ್ತನ ಲಕ್ಷಣ
ಗಳನ್ನು ವಿವರಿಸಿದ್ದಾನೆ.

(ಭಾಗವತ ೧೧-೧೧-೧೧-೧೭) ಮತ್ತು ನಾರದಭಕ್ತಿಸೂತ್ರ-೬೭-ಭಕ್ತಾ
ಏಕಾಂತಿನೋ ಮುಖ್ಯಾಃ)

## ೨೨ನೆಯ ಹಾಡು

ಪರಮಾತ್ಮನನ್ನೂ ರಮಾದೇವಿಯನ್ನೂ ಬಿಟ್ಟರೆ ದೇವತೆಗಳಲ್ಲಿ ವಾಯುದೇವರ
ಶ್ರೇಷ್ಠರು; ಅಲ್ಲದೆ ಶ್ರೀಹರಿಗೆ ಅತ್ಯಂತ ಪ್ರಿಯರಾದವರು. ವಾಯುದೇವರ ಬಲವ

ಯನ್ನು ಪಡೆದರೆ ಶ್ರೀಹರಿಯು ಮೆಚ್ಚಿ ಭಕ್ತನಿಗೆ ನೈಜಸಿದ್ಧಿಯನ್ನು ಕೊಡುವವನು. ಆದುದರಿಂದ ಹನುಮಂತನ (ವಾಯುದೇವರ) ಒಲುಮೆಗಾಗಿ ದಾಸರು ಈ ಸುಳಾದಿಯನ್ನು ರಚಿಸಿ ಸಜ್ಜನರಿಗೆ ಒದಗಿಸಿದ್ದಾರೆ.

೧ **ಬಲಗೊಳ್ಳು**=ಪ್ರದಕ್ಷಿಣೆ ಮಾಡು, ಬೆಂಬಲವನ್ನು ಪಡೆ

**ನವವಿಧಭಕುತಿ:—**

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥

(ಭಾಗವತ— ೭, ಅಧ್ಯಾಯ ೫, ಶ್ಲೋಕ ೨೩)

೨ **ಹನುಮಂತನ ಕಾಣದೆ ವಾಲಿ ಬಳಲಿದ**
**ಹನುಮಂತನ ಕಂಡು ಸುಗ್ರೀವ ಬದುಕಿದ**

(ರಾಮಾಯಣ ಕಿಷ್ಕಿಂಧಾ; ೧೬ ಭಾರತ ತಾತ್ಪರ್ಯ ನಿರ್ಣಯ ೫-೪೬-೪೭)

೩ **ಇತ್ತನು ಬೊಮ್ಮಪದವಿ ಹನುಮಂತಗೆ:—** (ವಾಯುಸ್ತುತಿ ೨೧)

೪ **ಹಬ್ಬಿದ**=ಎತ್ತರವಾಗಿ ನಿಂತ.

ಅರ್ಜುನನ ಧ್ವಜಾಗ್ರಕ್ಕೆ ಹನುಮಂತನು ಬಂದು ನೆಲೆನಿಂತ ಕಥೆಯು (ಭಾರತ. ವನ- ೧೫೧/೧೭ ೧೮). ಭೀಮಸೇನನು ದ್ರೌಪದಿಯ ಅಪೇಕ್ಷೆಯಂತೆ ಸೌಗಂಧಿಕಾಕುಸುಮವನ್ನು ತರಲು ಹೋದಾಗ, ಅರಣ್ಯದಲ್ಲಿ ರಾಮಧ್ಯಾನದಲ್ಲಿ ಕುಳಿತ ಹನುಮಂತನು ಭೆಟ್ಟಿಯಾಗುವನು. ಆಗ ಅವನಿಂದ ಅರ್ಜುನನ ಧ್ವಜಾಗ್ರಕ್ಕೆ ಬರುವಂತೆ ಭೀಮಸೇನನು ಬೇಡಿಕೊಂಡು ಒಪ್ಪಿಸುವನು. ಇದರ ಪರಿಣಾಮವಾಗಿ ಕೌರವರೊಂದಿಗೆ ಆದ ಯುದ್ಧದಲ್ಲಿ ಹನುಮಂತನು ಧ್ವಜದಲ್ಲಿದ್ದು ಅರ್ಜುನನಿಗೆ ಜಯವನ್ನು ಸಾಧಿಸಿಕೊಟ್ಟನು.

**ಸಬ್ಬಲ**=ಸರ್ವಬಲ (ದಾಸರು ಮಾಡಿಕೊಂಡ ತದ್ಭವರೂಪ)

**ರೋಮಕೋಟಿಲಿಂಗ:—**

ಹನುಮಂತದೇವರ ಒಂದೊಂದು ರೋಮದಿಂದ ಕೋಟಿಲಿಂಗಗಳು ಮೂಡಿದ ಕಥೆಯು, ದಕ್ಷಿಣದೇಶದಲ್ಲಿ ಪ್ರಚಾರದಲ್ಲಿರುವ ಮಹಾಭಾರತದಲ್ಲಿ

ಬರುತ್ತದೆ. ಇದನ್ನು ಕನ್ನಡ ಕವಿ ಕುಮಾರವ್ಯಾಸನು ತನ್ನ ಕೃತಿಯಲ್ಲಿ ಸ್ವೀಕರಿ
ದ್ದಾನೆ. ಅದರ ವಿಷಯ ಹೀಗಿದೆ:—

ರಾಜಸೂಯಯಾಗದ ಕಾಲದಲ್ಲಿ,ಶ್ರೀಕೃಷ್ಣನು ಧರ್ಮರಾಜನಿಗೆ ಉಜ್ಜ್ವ
ಶುದ್ಧಿಗಾಗಿ ಪುರುಷಾಮೃಗವನ್ನು ತರಲು ಹೇಳುತ್ತಾನೆ. ಆಗ ಅಣ್ಣನ ಅಪ್ಪ
ಯಂತೆ ಭೀಮಸೇನನು ಆ ಮೃಗವನ್ನು ತರಲು ಹೊರಡುವನು. ದಾರಿಯಲ್ಲಿ ಭೇ
ಯಾದ ಹನುಮಂತನು,ಪುರುಷಾಮೃಗದ ಉಗ್ರಶೈವಭಕ್ತಿಯನ್ನು ಭೀಮಸೇನನಿ
ವಿವರಿಸಿ, ಅದನ್ನು ಹಸ್ತಿನಾವತಿಯ ವರೆಗೆ ಕರೆತರಲು ಉಪಾಯವೆಂದು, ತ
ರೋಮಗಳನ್ನು ಕೊಡುವನು. ಆ ರೋಮವನ್ನು ನೆಲಕ್ಕೆ ಚೆಲ್ಲಿದಾಗ ಕೋ
ಲಿಂಗಗಳು ಉದ್ಭವಿಸುತ್ತಿದ್ದುವು. ಪುರುಷಾಮೃಗದಿಂದ ಈ ಲಿಂಗಗಳ ಪೂ
ಮಾಡಿಸುತ್ತ ಭೀಮಸೇನನು ಅದನ್ನು ಹಸ್ತಿನಾವತಿಯ ಪುರದ್ವಾರದ ವರೆಗ
ಕರೆತರುವನು. (ಕುಮಾರವ್ಯಾಸ ಭಾರತ-ಸಭಾಪರ್ವ

**ಭೀಮ**=ಭಯಂಕರಾಕಾರವುಳ್ಳವ.

**ಭೀಮ ಬೆಳೆದನು ಬ್ರಹ್ಮಾಂಡಕ್ಕೆ**= (ಭಯಂಕರನಾಗಿ)

ಶ್ರೀರಾಮ-ರಾವಣರ ಸಮರಕಾಲದಲ್ಲಿ ರಾವಣನು ರಥದಲ್ಲಿ ಕುಳಿ
ಯುದ್ಧ ಮಾಡುತ್ತಿದ್ದನು; ಶ್ರೀರಾಮನಿಗೆ ರಥವಿರದ್ದರಿಂದ ನೆಲದಮೇ
ನಿಂತು ಯುದ್ಧ ಮಾಡುತ್ತಿದ್ದನು, ಇದನ್ನು ಕಂಡ ಹನುಮಂತ ಬೃಹದ್ರೂ
ಪವನ್ನು ತಾಳಿ, ರಾಮ-ಲಕ್ಷ್ಮಣರನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡನು.

(ಭಾರತ ತಾತ್ಪರ್ಯ ನಿರ್ಣಯ ೮-೯

## ೨೩ನೆಯ ಹಾಡು

**ಒದ್ದೆ**=ಅಪಜಯಗೊಳಿಸಿದೆ, ನಾಶಮಾಡಿದೆ.

**ಬದ್ಧಾಂಜಲಿ**=ಮುಗಿದ ಕೈ. ಒಡ್ಡಿದ ಬೊಗಸೆ.

**ಹೃದ್ಯದಿ**=ಹೃತ್ಪೂರ್ವಕವಾಗಿ.

೧ **ಅಕ್ಷಯ**=ರಾವಣನ ಮಗ (ಅಕ್ಷಕುಮಾರ)

ಹನುಮಂತನು ಅಶೋಕವನವನ್ನು ನಾಶಗೊಳಿಸಿದಾಗ, ಅವನನ್ನು ಹಿಡಿಯಲು ಬರುವ ರಾಕ್ಷಸವೀರರನ್ನೂ ಅಕ್ಷಯಕುಮಾರನನ್ನೂ ಹನುಮಂತನು ನಾಶಗೊಳಿಸಿದ. (ರಾಮಾಯಣ–ಸುಂದರ. ೪೭)

**ಮಂಜುಳ**=ಸವಿಯಾದ. ಮಧುರವಾದ

**ಮುದ್ರಿಕೆಯಿತ್ತ**— (ರಾಮಾಯಣ–ಸುಂದರ. ೩೦–೩೬)

**ಧೀರಸಮೀರ**=ವಾಯುದೇವರ ಪೂರ್ಣಾಂಶವಿದ್ದುದರಿಂದ ಈ ಹೆಸರು ಬಂದಿದೆ.

೨ **ಈರೇಳು ಜಗದೊಳಗೆ:**— ೨೨ನೆಯ ಪದ್ಯದ ಪ್ರಾರಂಭದ ವಿವರಣೆಯನ್ನು ನೋಡಿರಿ.

೩ **ಪಾಂಚಜನ್ಯ ಪುರಂದರವಿಠಲ:**—ಪಾಂಚಜನ್ಯ ಶಂಖವನ್ನು ಕೈಯಲ್ಲಿ ಒಡಿದ ಶ್ರೀಹರಿ.

**ಪಾಂಚಜನ್ಯ**=ಪಂಚಜನನೆಂಬ ರಾಕ್ಷಸನ ಅಸ್ಥಿಯಿಂದ ಮಾಡಿಕೊಂಡ ಶಂಖ. ಪಂಚಜನನು ಪ್ರಹ್ಲಾದನ ತಮ್ಮನಾದ ಸಂಹ್ಲಾದ ದೈತ್ಯನ ಮಗ. ಶಂಖರೂಪನಾಗಿ ಸಮುದ್ರದಲ್ಲಿ ಇರುತ್ತಿದ್ದ. ಶ್ರೀಕೃಷ್ಣನ ಗುರುವಾದ ಸಾಂದೀಪನಿಯ ಮಗನನ್ನು ಇವನು ಅಪಹರಿಸಿದ್ದನು. ಕೃಷ್ಣನು ಇವನನ್ನು ಕೊಂದನು. (ಭಾಗವತ ೬. ೧೮–೧೪)

## ೨೪ನೆಯ ಹಾಡು

ಇದರಲ್ಲಿ ಹನುಮಂತನ ವಿವಿಧ ಪರಾಕ್ರಮಗಳ ಕಥನಗಳನ್ನು ದಾಸರು ಹಾಡಿದ್ದಾರೆ.

೧ **ಅಂಜನೆಯ ಆತ್ಮದಿಂದುದಿಸಿ:**— [illegible] ಕೇಸರಿಯ ಹಾಗು [illegible] ಅಂಜನೆಯ ಮಗ. [illegible]

[illegible]

**ಕಂಜಸಖಮಂಡಲಕೆ ಕೈದುಡುಕಿದೆ:—**

ಹನುಮಂತನು ಹುಟ್ಟುತ್ತಲೆ, ಸೂರ್ಯಬಿಂಬವನ್ನು ಫಲವೆಂದು ಕಂಡು ಅದನ್ನು ಹಿಡಿಯಲು ಅಂತರಿಕ್ಷಕ್ಕೆ ನೆಗೆದನು. ಆಗ ಇಂದ್ರನು ಇವನನ್ನು ವಜ್ರಾ-ಯುಧದಿಂದ ಹೊಡೆಯಲಾಗಿ ಒಂದು ಕೆನ್ನೆಗೆ ಏಟು ತಗುಲಿ ಅದು ಸೊಟ್ಟಗಾಯಿತು. ಈ ಕಾರಣದಿಂದ ಇವನಿಗೆ ಹನುಮಂತನೆಂಬ ಹೆಸರು ಬಂದಿತು.

(ರಾಮಾಯಣ—ಕಿಷ್ಕಿಂಧಾ. ೬೬)

**ಭುಂಜಿಸಿ ಈರೇಳು ಜಗವ ಉಳುಹಿದೆ**=(ಸಮುದ್ರಮಥನ ಕಾಲದಲ್ಲಿ ಹೊರಟ ಕಾಲಕೂಟವಿಷವು ಲೋಕವನ್ನೇ ಬಾಧಿಸುತ್ತಿರಲು, ಶ್ರೀಹರಿಯ ಆಜ್ಞೆಯಿಂದ ವಾಯುದೇವರು ಅದರ ಉಗ್ರತೆಯನ್ನು ಪರಿಹಾರ ಮಾಡಿದರು.) ವಿಷದ ಬಹು ಅಂಶವನ್ನು ಸ್ವೀಕರಿಸಿ ನೀನು ಜಗತ್ತನ್ನು ಉಳಿಸಿದೆ.

(ಭಾಗವತ ಸ್ಕಂಧ ೮—೭. ವಿಷ್ಣುಪುರಾಣ, ೧—೯)

**ಪ್ರಭಂಜನ**=ವಾಯು

೨ **ರೋಮಕೋಟಿಲಿಂಗ**= (ಪದ ೨೨ ಜರ ಟಿ. ನೋಡಿರಿ)

೩ **ಆಳಾಗಿ ನೀ ಮೆರೆದೆ**= (ರಾಮಾಯಣ ಕಿಷ್ಕಿಂಧಾ, ೨—೪)

**ಧೂಮಧಾಮ**=ಹೊಗೆಯ ಮನೆ, ನಾಶ.

೪ ರಾವಣನು ರಣದಲ್ಲಿ ಲಕ್ಷ್ಮಣನ ವಕ್ಷಸ್ಥಳಕ್ಕೆ ಶಸ್ತ್ರಾಯುಧದಿಂದ ಹೊಡೆದು ಮೂರ್ಛೆಗೊಳಿಸಿದ. (ರಾಮಾಯಣ ಯುದ್ಧ. ೬೪, ೧೦೧)

೫ **ಶ್ರೀಮದಾಚಾರ್ಯಕುಲದವನೆನಿಸಿದೆ:—** ಹನುಮಂತದೇವರು ಮುಂದೆ ಮಧ್ಯಗೇಹರ ಕುಲದಲ್ಲಿ ಹುಟ್ಟಿದರು.

**ಸೌಮ್ಯಮನದಾಳು**=ಸಮಾಧಾನ ಮನಸ್ಸಿನ ಸೇವಕ.

## ೨೫ನೆಯ ಹಾಡು

೧ **ಸದೆ**=ನಾಶಮಾಡು.

**ಜೀವೇಶರೈಕ್ಯವು ಜಗತು ಮಿಥ್ಯವೆಂದು:—** ಅದ್ವೈತವಾದದ ಮೂಲತತ್ತ್ವಗಳು.

ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋಬ್ರಹ್ಮೈವನಾಪರಃ ॥

೨ **ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇ ಎಂಬ:—** ವಿಶಿಷ್ಟಾದ್ವೈತ ಮತದ ತತ್ತ್ವಗಳು. ಇದಕ್ಕೆ ಶ್ರೀವೈಷ್ಣವ ಮತ, ರಾಮಾನುಜ ಮತಗಳೆಂಬ ಬೇರೆ ಹೆಸರುಗಳಿವೆ. ಇಲ್ಲಿ ಜೀವ ಮತ್ತು ಈಶಭೇದವಿದ್ದರೂ, ಮೋಕ್ಷಸ್ಥಿತಿ ಯಲ್ಲಿ ಜಗತ್‌ಕರ್ತೃತ್ವ ಮತ್ತು ಲಕ್ಷ್ಮೀಪತಿತ್ವಗಳನ್ನು ಬಿಟ್ಟು ಉಳಿದ ೩ ಅಂಶ ಗಳಲ್ಲಿ ಭೇದವಿಲ್ಲವೆಂಬುದೇ ಮತದ ವಾದ.

೩ **ತಾರತಮ್ಯ ಪಂಚಭೇದ:—**ಹಾಡು ೫ರ ಟಿಪ್ಪಣಿ ನೋಡಿರಿ.

**ಮಾರುತ ಮತ**=ದ್ವೈತಮತ. ಶ್ರೀಮಧ್ವಾಚಾರ್ಯರು ವಾಯು ದೇವರ ಅವತಾರವಾದುದರಿಂದ, ಅವರು ಪ್ರತಿಪಾದಿಸಿದ ಮತವು ಮಾರುತ ಮತವೆನಿಸುತ್ತಿದೆ.

೪ **ಅನೇಜದೇಕಂ ಮನಸೋಜವೀಯೋ—**
ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ॥
ತದ್ಧಾವತೋನ್ಯಾನತ್ಯೇತಿ ತಿಷ್ಠ
ತ್ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ (ಈಶಾವಾಸ್ಯ ೪)

ಈ ನುಡಿಗೆ ಆಧಾರ.

**ಹರಿಯ ಮನೋಗತವರಿತು ಮಾಡುವೆನೆಂದು:—** ಪರಮಾತ್ಮನ ಸಂಕಲ್ಪವನ್ನನುಸರಿಸಿ ವಾಯುದೇವರು ಕಾರ್ಯಪ್ರವೃತ್ತರಾಗುತ್ತಾರೆ.

## ೨೬ನೆಯ ಹಾಡು

ಈ ಪದದಲ್ಲಿ ದಾಸರು ಹನುಮಂತನ ದಾಸ್ಯಭಾವದ ನುಡಿಯನ್ನು ದೃಷ್ಟಾಂತ ಕೊಟ್ಟು ವರ್ಣಿಸಿದ್ದಾರೆ.

೧ **ಸೇವಕತನದ ರುಚಿಯೇನಳಿದೆಯೊ:—** ಪರಮಾತ್ಮನ ಭಕ್ತಿಯ ಮಹತ್ತ್ವವನ್ನು ಹೇಗೆ ಪೂರ್ಣವಾಗಿ ಅರಿತುಕೊಂಡಿರುವೆ ?

**ದೇವ ಹನುಮರಾಯ ವೈರಾಗ್ಯಭಾಗ್ಯ ಬೇಡಿ:**— ಹನುಮ
ದೇವರು ರಾಮದೇವರಲ್ಲಿ ವೈರಾಗ್ಯವನ್ನು ಬೇಡಿದ ವಿಷಯ ಮಧ್ವವಿಜ
೧-೧೬ ರಲ್ಲಿ ಬಂದಿದೆ.

**ಪದದಿ ಪಾಷಾಣವ ಪೆಣ್ಣುಮಾಡಿದ:**— ಶಾಪಗ್ರಸ್ತಳಾದ ಅ
ಲ್ಯೆಯ ಕಥೆ (ರಾಮಾಯಣ-ಬಾಲ. ೪೮)

೨ **ಕ್ಷಣದೊಳು ಸಂಜೀವನಗಿರಿ ತಂದಾಗ:**— (ರಾಮಾಯಣ-ಯು
೫೪, ೧೦೧) ಲಕ್ಷ್ಮಣನು ಯುದ್ಧದಲ್ಲಿ ಮೂರ್ಛೆಹೋದಾಗ,ಹನುಮಂತ
ಸಂಜೀವಿನಿಯನ್ನು ತಂದನೆಂಬ ಕಥೆ ಬರುತ್ತದೆ.

**ವಿನಯದ ವಿಭೀಷಣಗೆ ರಾಜ್ಯಪದವಿಯನಿತ್ತ:**—ಪೌಲಸ್ತ್ಯಮ
ಮತ್ತು ಕೈಕಸೆಯರ ನಾಲ್ಕನೆಯ ಮಗ ವಿಭೀಷಣ. ರಾವಣ-ಕುಂಭಕರ್ಣರ ತಮ
ಶೂರ್ಪಣಖಿ ಇವನ ತಂಗೆ. ಮಿಕ್ಕವರೆಲ್ಲ ಆಸುರೀಭಾವದವರಾದರೂ ಇವ
ಭಗವದ್ಭಕ್ತ. ಎಂತಲೆ ರಾಮ-ರಾವಣರ ಯುದ್ಧ ಪ್ರಾರಂಭವಾದಾಗ, ಇವ
ಶ್ರೀರಾಮನ ಬಳಿಗೆ ಬಂದು ಆತನ ಆಶ್ರಯದಲ್ಲಿ ನಿಂತ. ರಾವಣವಧೆಯಾ
ಬಳಿಕ ಲಂಕೆಯ ಸಿಂಹಾಸನವು ಇವನಿಗೆ ದೊರೆಯಿತು. (ರಾಮಾಯ
ಯುದ್ಧ. ೧೧೫)

೩ **ನಿರ್ವ್ಯಾಜಭಕುತಿ:**— ಪ್ರತಿಫಲದ ಆಶೆಮಾಡದೆ ತೋರಿವ ಭ
ಅಥವಾ ನಿರ್ಹೇತುಕವಾದ ಭಕ್ತಿ. (ಭಾರತ ತಾತ್ಪರ್ಯನಿರ್ಣಯ
೨೪೨-೨೪೩ ಮತ್ತು ೨೪೭).

## ೨೭ನೆಯ ಹಾಡು

**ಘಟಿಕಾಚಲ:**— ಶೋಲಿಂಗರ್ ನಿಲ್ದಾಣದಿಂದ ೬ ಮೈಲು ದ
ದಲ್ಲಿದೆ (ಆಂಧ್ರ ಪ್ರದೇಶ). ಇಲ್ಲಿ ಎದುರುಬದುರಾಗಿರುವ ಎರಡು ಬೆಟ್ಟಗಳ
ಒಂದರ ಮೇಲೆ ಶ್ರೀನರಸಿಂಹದೇವರ ದೇವಾಲಯವಿದ್ದು, ಅದರ ಎದುರಿಗಿರ
ಬೆಟ್ಟದ ಮೇಲೆ ಹನುಮಂತ ದೇವರ ಗುಡಿ ಇದೆ. ಇದೊಂದು ಪ್ರಸಿದ್ಧ ಕ್ಷೇ
ದಾಸರು ಕ್ಷೇತ್ರಯಾತ್ರೆಗೆಂದು ಹೋದಾಗ, ಇಲ್ಲಿಯ ಹನುಮಂತ ದೇವರ
ಕಣ್ಣಾರೆ ಕಂಡು ಹಾಡಿದ ಕೀರ್ತನೆಯಿದು.

**ಪಠನೆ:**— ಸ್ತೋತ್ರ

**ಉತ್ಕಟದಿ**=ನಿರ್ಧಾರದಿಂದ

**ಚತುರಯುಗದಿ**=ನಾಲ್ಕು ಯುಗಗಳಲ್ಲಿ (ಕೃತ, ತ್ರೇತಾ, ದ್ವಾಪರ, ಕಲಿ.)

**ಚತುರಮುಖನಯ್ಯನ**=ಶ್ರೀಹರಿಯ

**ಚತುರಮೂರ್ತಿ**=ನಾಲ್ಕು ಮೂರ್ತಿ—ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ.

**ಚತುರತನದಿ**=ಜ್ಞಾನಪೂರ್ವಕ ಭಕ್ತಿಯಿಂದ

**ಚತುರ್ಮುಖವಾಣಿ**=ಬ್ರಹ್ಮನ ವಾಣಿ—ವೇದ

**ಚತುರ್ವಿಧಫಲ**=ಧರ್ಮ, ಅರ್ಥ, ಕಾಮ, ಮೋಕ್ಷ

೨ **ಸರಸಿಜಭವಗೋಸುಗ**=ಬ್ರಹ್ಮದೇವರ ಸಲುವಾಗಿ

(ಇದು ಸ್ಥಳಪುರಾಣವಾಗಿರಬಹುದು.)

**ಕರ್ಮಕದೂರ**=ಕರ್ಮಾಸಕ್ತಿರಹಿತ.

**ಚಕ್ರತೀರ್ಥಸರ**=ಚಕ್ರತೀರ್ಥಸರೋವರ

(ಅಲ್ಲಿರುವ ಸರೋವರದ ಹೆಸರು)

**ನರಹರಿ**=ನರಸಿಂಹ. ಈ ದೇವರ ಗುಡಿ ಎದುರಿಗಿನ ಬೆಟ್ಟದ ಮೇಲಿದೆ.

**ಸ್ಥಿರಯೋಗಾಸನ**=ಸಿದ್ಧಾಸನ

೩ **ಪಂಕ**=ದೋಷ, ಪಾಪ

**ಬಿಂಕ**=ಅಭಿಮಾನ.

## ೨೮ನೆಯ ಹಾಡು

೧ **ಮಾಮರುತ ಭಾಪುರೆ**=ಭಲೆ ಭಲೆ

**ಹುಟ್ಟುತಲೆ ಹೊನ್ನ ಕಚ್ಚುಟವ ಕುಂಡಲವೆರಸಿ:**— ಹುಟ್ಟು ತ್ತಾಗಲೆ ಹನುಮಂತ ದೇವರಿಗೆ ಕರ್ಣಕುಂಡಲ, ಹೊನ್ನಿನ ಕೌಪೀನ [illegible] ಇದ್ದುವು. (ತತ್ತ್ವಸಂಖ್ಯಾನ, ರಾಮಾಯಣ ಕಿಷ್ಕಿಂಧಾ [illegible])

**ಕಚ್ಚುಟೆ**=ಕೌಪೀನ, ಲಂಗೋಟಿ.

**ದಿಟ್ಟ ಹರಿದಾಡಿ**=ಅವನಲ್ಲಿ ಪೂರ್ತಿಯಾಗಿ ದೃಷ್ಟಿ ನೆಲಸಿ

**ಅಜನ ಪಟ್ಟಕೆ ಅನುವಾದ** = (ವಾಯುಸ್ತುತಿ ೨೧) ಬ್ರಹ್ಮಪಟ್ಟ[illegible] ಅಧಿಕಾರಿಯಾದ (ತಾತ್ಪರ್ಯ ನಿರ್ಣಯ ೮-೨೪೮).

ಕಲ್ಪಕಲ್ಪಗಳಲ್ಲಿ ದೇವತೆಗಳು ತಮ್ಮ ಮೇಲಿನ ಸ್ಥಾನಕ್ಕೆ ಏರುವರು.

೨ **ಕುಂಭಿನಿ**=ಮಗಳು

**ಸಖ**=ವಾಯುಸಖ=ಅಗ್ನಿ

೩ **ಅತಿದುರುಳ....ರಥವಾದೆ ಒಡೆಯನಿಗೆ**— (ತಾತ್ಪರ್ಯನಿರ್ಣಯ ೮-[illegible]

೪ **ಒಡೆಯ ಉಣ ಕರೆಯೆ......ಸವಿದುಂಡು**—(ಪದ ೧೫ ಟಿಪ್ಪಣಿ ನೋಡಿರಿ)

೫ **ಪ್ರತಿಯಿಲ್ಲದೆ**=ಸರಿಯಿಲ್ಲದೆ.

## ೨೯ನೆಯ ಹಾಡು

೨೯ ಮತ್ತು ೩೦ ಈ ಎರಡು ಹಾಡುಗಳಲ್ಲಿ ಭೀಮಾವತಾರ ಮಾಹಾತ್ಮ್ಯವ[illegible] ಇದೆ.

೧ **ಅಡ್ಡಯಿಪರು**=ಎದುರಿಸುವವರು, ತಡೆಯುವವರು.
**ತತ್ತರಿ**=ಒಂದೇಸವನೆ ಹೊಡೆ. (ಭಾರತ. ಕರ್ಣ, ೮೭)
**ಮುಂಕೊಂಡು**=ಮುಂದುವರಿದು ನಿಂತು
**ಅಂಗಯಿಸು**=ಬಯಸು.

೨ **ಘುಡುಘುಡಿಸುತ...ತುಂಡಿಸುವಾಗ** (ಭಾರತ, ಶಲ್ಯ ೫೮-೫೯)
**ಹಲಧರ**=ಬಲರಾಮ, ನೇಗಿಲವನ್ನು ಹಿಡಿದವ.

೩ **ಸಂಧಿಗೆ**=ಕೀಲಕೀಲಕ್ಕೆ. (ಭಾರತ ವಿರಾಟ, ೨೪ ೨೭)

## ನಾಣ್ಣುಡಿಗಳು

**ವಾರಿಧಿ ಮೇರೆದಪ್ಪಲು ನಿಲ್ಲಿಸುವರಾರು ?**

**ಆನೆಯು ಕೈಯ ಕಬ್ಬಿಗೆ ಅಂಗಯಿಸುವರಾರು ?**
**ಬಡವನ ಕೋಪ ದವಡಿಗೆ ಮೃತ್ಯುವಲ್ಲವೇ ?**
ಇವು ಅರ್ಥಾಂತರನ್ಯಾಸಕ್ಕೆ ಉತ್ತಮ ಉದಾಹರಣೆಗಳಾಗಿವೆ.

## ೩೦ನೆಯ ಹಾಡು

೧ **ಭಾರತಿಗೆ ಕಾಂತನೊ:—** ದ್ರೌಪದಿ ಸೋಮವಂಶದ ದ್ರುಪದ ರಾಜನ ಮಗಳು. ಯಜ್ಞಕುಂಡದಲ್ಲಿ ಹುಟ್ಟಿದುದರಿಂದ ಇವಳು ಅಯೋನಿಜೆ. ಇವಳಿಗೆ ಕೃಷ್ಣೆಯೆಂಬ ಹೆಸರು ಇದೆ. ಇವಳನ್ನು ಸ್ವಯಂವರದಲ್ಲಿ ಗೆದ್ದು ಪಾಂಡವರು ಮದುವೆಯಾದರು. ಇಡಿಯ ಭಾರತ ಯುದ್ಧವು ದ್ರೌಪದಿಗಾದ ಅಪಮಾನದ ಸೇಡು ತೀರಿಸಿಕೊಳ್ಳುವುದರ ಇತಿಹಾಸವಾಗಿದೆ. ಇವಳು ಭಾರತೀದೇವಿಯ ಅವತಾರವಾಗಿದ್ದಾಳೆ.

(ಪದ, ೧೫, ಸು. ೧ ನೋಡಿರಿ.)

**ಶ್ರೀಮಂತನೊ**=ಪ್ರಭಾವಶಾಲಿಯೊ

**ರಾಮಚಂದ್ರನ ಪ್ರಾಣನೊ:—** ಹನುಮದವತಾರದಲ್ಲಿ ಈತನು (ಭೀಮನು) ರಾಮಚಂದ್ರನ ಅತ್ಯಂತ ಪ್ರೀತಿಯ ಭಕ್ತನಾಗಿದ್ದನು.

೨ **ಬಂಡಿಯನ್ನವನುಂಡನೊ....ಕೊಂಡನೊ:—** ಪಾಂಡವರು ಕುಂತಿಯೊಂದಿಗೆ ಅರಗಿನ ಮನೆಯಿಂದ ಪಾರಾಗಿ ಹೊರಟು, ವೇಷ ಬದಲಿಸಿ ಏಕಚಕ್ರ ನಗರದಲ್ಲಿ ಇರುತ್ತಿದ್ದರು. ಅಲ್ಲಿಯ ಜನರಿಗೆ ಪೀಡಾಕಾರಿಯಾಗಿದ್ದ ಬಕನೆಂಬ ಅಸುರನನ್ನು ಭೀಮಸೇನ ಸಂಹರಿಸಿದನು.

(ಭಾರತ. ಆದಿ; ೩೧; ೧೬೧; ೧೬೪)

೩ **ಸೌಗಂಧಿಕವ ತಂದನೊ—** (ಭಾ. ವನ, ೧೪೬–೧೫೩)

೪ **ವೈಷ್ಣವಾಗ್ರಗಣ್ಯ:—** ವಿಷ್ಣುಭಕ್ತರಲ್ಲಿ ಶ್ರೇಷ್ಠ: ವಾಯುದೇವರು ತಮ್ಮ ಮೂರೂ ಅವತಾರಗಳಲ್ಲಿ ವೈಷ್ಣವಾಗ್ರಗಣ್ಯರೆನಿಸಿಕೊಂಡಿದ್ದಾರೆ.
**ಸಂಚಿತಾಗ್ರಪುಣ್ಯ**=ಪೂರ್ವಪುಣ್ಯವನ್ನು ಬಲಿಸಿಕೊಂಡವ.
**ದೇವವರೇಣ್ಯ**-ದೇವತೆಗಳಲ್ಲಿ ಶ್ರೇಷ್ಠ (ವಾಯುದೇವರು ತತ್ವ ೩ ರಲ್ಲಿದ್ದಾರೆ)

೫ **ಮಧ್ವಶಾಸ್ತ್ರವ ರಚಿಸಿದನೊ:**— ವಾಯುದೇವರು ಮೂರನೆ ಅವತಾರದಲ್ಲಿ ಶ್ರೀಮಧ್ವಾಚಾರ್ಯರಾಗಿ ದ್ವೈತಶಾಸ್ತ್ರವನ್ನು ರ ದರು.

**ಉಡುಪಿಕೃಷ್ಣನ ನಿಲಿಸಿದನೊ:**—(ಮಧ್ವವಿಜಯಸರ್ಗ ೬.ಶ್ಲೋಕ

ವಿ. ಸೂ.— ೬೧–೪೯ರ ವರೆಗಿನ ಹಾಡುಗಳಲ್ಲಿ ದಾಸರು ಹನುಮ, ಭೀಮ, ಮ ಈ ಮೂರೂ ಅವತಾರಗಳು ಒಂದೇ ಎಂಬ ಭಾವವನ್ನು ರೂಪಿಸಿದ್ದಾರೆ.

## ೩೧ನೆಯ ಹಾಡು

೩೧ ರಿಂದ ೩೪ರ ವರೆಗಿನ ಹಾಡುಗಳು ಶ್ರೀಮಧ್ವಾಚಾರ್ಯರ ಮಾಹಾತ್ಮ್ಯೆಯ ವರ್ಣಿಸುತ್ತವೆ.

ಈ ಹಾಡಿನ ಪಲ್ಲವಿ, ಅನುಪಲ್ಲವಿಗಳಲ್ಲಿ ಶ್ರೀಪುರಂದರದಾಸರು ತಮ ಪರಮಗುರುಗಳಾದ ಶ್ರೀಮದಾಚಾರ್ಯರಲ್ಲಿರುವ ತಮ್ಮ ಉತ್ಕಟ ಭಕ್ತಿಯನ ಪ್ರಕಟಿಸಿದ್ದಾರೆ.

೧ **ಜಗತು........ಅಗುಣನು ಪರಬೊಮ್ಮನು:**— ಅದ್ವೈತಶಾಸ್ತ ತತ್ತ್ವಗಳು.

**ನಿಗಮಶಾಸ್ತ್ರ**=ವೇದಶಾಸ್ತ್ರ

**ಜಗತು ಸತ್ಯ ಸಗುಣಬ್ರಹ್ಮ:**—ದ್ವೈತಶಾಸ್ತ್ರದ ಮೂಲತತ್ತ್ವಗಳು

೨ **ಹರಿಸರ್ವೋತ್ತಮ:**— ೨-೩ ಈ ನುಡಿಗಳಲ್ಲಿ ಅವರೋಹಣ ತ ತಮ್ಯವನ್ನು ಹೇಳಲಾಗಿದೆ. (ಕಕ್ಷ ೧ ರಿಂದ ೧೦ನೆಯ ಕಕ್ಷದ ವರೆಗಿನ ಆ ರೋಹಣ ತಾರತಮ್ಯಕ್ರಮವು ಬಂದಿದೆ).

೩ **ದ್ವಿಪದಿ**=ಇಂದ್ರ ಮತ್ತು ಕಾಮ.

ವಿ. ಸೂ: ದ್ಯುಪತಿ (ಇಂದ್ರ) ಎಂಬ ಪಾಠಾಂತರವಿದ್ದರೆ ಚೆನ್ನಾಗಿತ್ತು. ಯ ಪ್ರತಿಯಲ್ಲಿಯೂ ಸಿಕ್ಕುವುದಿಲ್ಲ.)

**ಅಪರ್ಣಾ**=ಪಾರ್ವತಿ

**ಅಪವರ್ಗದ**=ಮೋಕ್ಷಕೊಡುವವ, ಶ್ರೀಹರಿ

೪ **ಒಂದೊಂದು ಯುಗದಲಿ:—**

ಕೃತಯುಗದಲ್ಲಿ=ಮೂಲವಾಯುದೇವರು. ಇವರು ಸಂಕರ್ಷಣ ನಾಮಕ ಪರಮಾತ್ಮ ಮತ್ತು ಜಯಾ ಎಂಬವರ ಮಗ.

(ಗರುಡ, ಬ್ರಹ್ಮ ೧೬-೨೦-೨೧)

ತ್ರೇತೆಯಲ್ಲಿ=ಹನುಮಂತ

ದ್ವಾಪರದಲ್ಲಿ=ಭೀಮ

ಕಲಿಯುಗದಲ್ಲಿ=ಶ್ರೀಮಧ್ವಾಚಾರ್ಯರು

ಹೀಗೆ ರೂಪತಾಳಿ ಪರಮಾತ್ಮನ ಸೇವೆ ಮಾಡಿದರು.

೫ **ಕ್ರಮತತ್ತ್ವ**=ತಾರತಮ್ಯತತ್ತ್ವ.

**ಹಿಮಗಿರಿಯಿಂದ ಸೇತುವೆಯ ಪರ್ಯಂತ ಭ್ರಮಿಸುತ:—**

ಆಚಾರ್ಯರು ದಿಗ್ವಿಜಯಯಾತ್ರೆಗೈಯುತ್ತ ಇಡಿಯ ಭಾರತವನ್ನು ುತ್ತಾಡಿದರು. (ಮಧ್ವವಿಜಯ—೫-೬ ಸರ್ಗಗಳು)

**ಕಮಲನಾಭನಮೂರ್ತಿ**=ಶ್ರೀಕೃಷ್ಣನ ಮೂರ್ತಿ (ಉಡುಪಿ)

೬ **ರೌಪ್ಯಪುರ**=ಉಡುಪಿ (ಮಂಗಳೂರು ಜಿಲ್ಲೆ) (ವಾಯುಸ್ತುತಿ ೩೯)

**ಧಾತ್ರೀಮುದ್ರೆಯ ತೋರಿಸಿ:** - ಬಲಗೈಯ ಐದೂಬೆರಳುಗಳನ್ನು ಾಚಿ ಭೂಮಿಯನ್ನು ತೋರಿಸುವ ಹಸ್ತಸಂಕೇತ.

**ಭವಿಷ್ಯದ್‌ಬ್ರಹ್ಮ**=ವಾಯು. ಶ್ರೀಮಧ್ವಾಚಾರ್ಯರು ವಾಯುದೇವರ ವತಾರವಾದುದರಿಂದ. ಮುಂದೆ ಬರುವ ಕಲ್ಪದಲ್ಲಿ ಬ್ರಹ್ಮಪಟ್ಟಕ್ಕೆ ಏರು ವರು. (ವಾಯುಸ್ತುತಿ ೭)

**ಜೀವೋತ್ತಮ**=ವಾಯುದೇವರು.

**ಶ್ರೀಮದನಂತನೆ ಅನಂತಕಾಲಕೆ ಎಂದು**=ಶ್ರೀ[illegible] ನೆಂದು.

**ಯಮಕಭಾರತ**=ಶ್ರೀಮದಾಚಾರ್ಯರ ಒಂದು ಕೃತಿ: ಅಕ್ಷರಾಲಂಕಾ
ದಿಂದ ಕೂಡಿರುವುದರಿಂದ ಇದು ಯಮಕಭಾರತವೆನಿಸಿಕೊಳ್ಳುತ್ತಿದೆ.

(ಮಧ್ವವಿಜಯ ೧೫–೭

**ಪ್ರೇಮಿ**=ಉತ್ಕಟಪ್ರೇಮವುಳ್ಳ.

## ಅವರೋಹಣ ತಾರತಮ್ಯ

| | | | |
|---|---|---|---|
| ೧. | ಪರಮಾತ್ಮ | (ಸರ್ವೋತ್ತಮ) | (ಕಕ್ಷ ೧) |
| ೨. | ರಮಾದೇವಿ | | (ಕಕ್ಷ ೨) |
| ೩. | ವಿಧಿ=ಬ್ರಹ್ಮ<br>ಪ್ರಾಣ=ವಾಯು | | (ಕಕ್ಷ ೩) |
| ೪. | ಸರಸ್ವತಿ–ಭಾರತಿ | | (ಕಕ್ಷ ೪) |
| ೫. | ಗರುಡ, ಅನಂತ(ಶೇಷ), ರುದ್ರ | | (ಕಕ್ಷ ೫) |
| ೬. | ಆರು ದೇವಿಗಳು—(ಕೃಷ್ಣನ ಷಣ್ಮಹಿಷಿಯರು:— | | (ಕಕ್ಷ ೬) |
| | ಜಾಂಬವತಿ, ಭದ್ರಾ, ನೀಲಾ, ಕಾಳಿಂದಿ,ಮಿತ್ರವಿಂದಾ, ಲಕ್ಷಣಾ.) | | |
| ೭. | ಸೌಪರ್ಣಿ, ವಾರುಣಿ, ಅಪರ್ಣಾ | | (ಕಕ್ಷ ೭) |
| ೮. | ಇಂದ್ರ, ಕಾಮ (ದ್ವಿಪದಿ) | | (ಕಕ್ಷ ೮) |
| ೯. | ಅಹಂಕಾರಿಕ ಪ್ರಾಣದೇವರು | | (ಕಕ್ಷ ೯) |
| ೧೦. | ಮನ್ವಾದಿಗಳು | | (ಕಕ್ಷ ೧೦) |

(ಉಳಿದ ಕಕ್ಷಗಳನ್ನು ಬಿಟ್ಟುಕೊಟ್ಟಿದ್ದಾರೆ)

(ಭಾರತ ತಾತ್ಪರ್ಯನಿರ್ಣಯ ೧–೭೦—೭೫)

## ೩೨ನೆಯ ಹಾಡು

ಈ ಹಾಡಿನಲ್ಲಿ ವಾಯುದೇವರ ಮೂರೂ ಅವತಾರಗಳ ಮಾಹಾತ್ಮ್ಯ ವರ್ಣ
ಇದೆ.

೧ **ಹೊದ್ದಿ**=ಹೊಂದಿ
**ಭವಾಬ್ಧಿ**=ಸಂಸಾರಸಾಗರ

**ಬೀಜಾಕ್ಷರ**=ಸಾಮಾನ್ಯವಾಗಿ ಜಪಮಂತ್ರದ ಮೊದಲನೆಯ ಅಕ್ಷರ. ಉದಾ : ವಾಸುದೇವಾಯನಮಃ ಮಂತ್ರದ ಮೊದಲಿನ ಅಕ್ಷರವಾದ 'ವಾ' ಇದು ಬೀಜಾಕ್ಷರ.

**ಸದಮಲಾನಂದ**=ನಿರತಿಶಯಾನಂದ.

೨ **ಕಾಮವಿಲ್ಲದ**=ಫಲೇಚ್ಛಾರಹಿತ (ನಿಷ್ಕಾಮ)

**ವೈಶ್ವದೇವ** = ವೇದಾಧಿಕಾರವುಳ್ಳ ಗೃಹಸ್ಥರು ಮಾಡುವ ಪಂಚ ಮಹಾಯಜ್ಞಗಳಲ್ಲಿ ಒಂದು.

**ವೈಷ್ಣವ**=ವಿಷ್ಣುಭಕ್ತ (ರಮಾಬ್ರಹ್ಮಾದಯೋದೇವಾಃ ಸನಕಾದ್ಯಾಃ ಶುಕಾದಯಃ । ಶ್ರೀನೃಸಿಂಹಪ್ರಸಾದೋಽಯಂ ಸರ್ವೇ ಗೃಹ್ಣಂತು ವೈಷ್ಣವಾಃ)

**ಆರೋಗಣೆ**=ಊಟ.

೩ **ತೀರ್ಥ ತುಳಸಿದಳವ ಮೆಲ್ಲುವಾಗ:**— ಊಟವಾದಮೇಲೆ ಕೈಕಾಲು ತೊಳೆದು ತೀರ್ಥತೆಗೆದುಕೊಂಡು ತುಳಸೀದಳವನ್ನು ತಿನ್ನಬೇಕೆಂಬುದು ವೈಷ್ಣವರ ಸಂಪ್ರದಾಯ.

## ೩೩ನೆಯ ಹಾಡು

ಈ ಹಾಡಿನಲ್ಲಿ ಶ್ರೀಮಧ್ವರಾಯರ ಮಹಿಮೆಯ ವರ್ಣನೆ ಇದೆ.

೧ **ಸನಕಾದಿ...ಪಾದಾಬ್ಜ:**— ಶ್ರೀಮಧ್ವರಾಯರು ವಾಯುದೇವರ ಅವತಾರವಾದುದರಿಂದ, ೧೯ ನೆಯ ಕಕ್ಷದಲ್ಲಿರುವ ಸನಕಾದಿಗಳಿಂದ ಪೂಜ್ಯರು.

**ಕಲಿಮಲದಿಂ....ಉದಿಸಿದೆ:** – (ಮಧ್ವವಿಜಯ ೨-೧)

೨ **ಗೋವಿತ್ತ ವಿಪ್ರಗೆ:**— (ಮಧ್ವವಿಜಯ ೨-೪೦)

ಶ್ರೀಮಧ್ವಾಚಾರ್ಯರು ಹುಟ್ಟಿದಾಗ ಕೂಸಿಗೆ ಕುಡಿಸಲು ಬೇಕಾದ ಹಾಲನ್ನು ಪೂರೈಸಲಿಕ್ಕೆ ಮಾಣಿತ್ತಿಲ್ಲಾಯಕಾಲದ ಕೊಡುವವರು (ಪ್ರಾಣಾಪಾನ ಜ್ಞರು) ಶ್ರೀಮಧ್ವಾಚಾರ್ಯರ ತಂದೆಯವರಿಗೆ (ನಡ್ಡಂತಿಲ್ಲಾಯಭಟ್ಟರು)

ಒಂದು ಎಳೆಗಂದಿ ಆಕಳನ್ನು ದಾನಕೊಟ್ಟರು. ಅದರ ಫಲವಾಗಿ ಆ ಬ್ರಾಹ್ಮಣ ಮಡಿದಬಳಿಕ, ತನ್ನ ಮಗನಿಗೆ ಮಗನಾಗಿ ಹುಟ್ಟಿಬಂದು ಮೋಕ್ಷಕ್ಕೆ ಕಾರಣವಾಗುವ ತತ್ತ್ವಜ್ಞಾನಪಡೆದನು.

**ಜೀವೇಶರು ಒಂದು ಎಂಬ ಮತ**=ಅದ್ವೈತಮತ.
**ಭೇದಿಸಿದೆ**=ಖಂಡಿಸಿದೆ.

೩ **ಸೂತ್ರ**=ವೇದಾಂತ (ಬ್ರಹ್ಮ) ಸೂತ್ರ.
**ವೇತೃಗಳಿಗೆ**=ಬಲ್ಲವರಿಗೆ.
**ಶಾಸ್ತ್ರದ ತಾತ್ಪರ್ಯ**=ದ್ವೈತಶಾಸ್ತ್ರದ ತಾತ್ಪರ್ಯ.
(ಮಹಾಭಾರತ ತಾತ್ಪರ್ಯ. ಭಾಗವತತಾತ್ಪರ್ಯ

**ಪ್ರಕರಣ**=ದಶಪ್ರಕರಣ (ತತ್ತ್ವಪ್ರತಿಪಾದಕ ಗ್ರಂಥಗಳು)

೪ **ಸುಜನರ ಹೃದಯದ.....ಹರಡಿದೆ.** (ಮಧ್ವವಿಜಯ ೧-೩)

೫ **ವ್ಯಾಸದೇವರು**=ಶ್ರೀವೇದವ್ಯಾಸರು. ವಿಷ್ಣುವಿನ ಒಂದು ಸ್ವರೂಪ ಇವರು ವೇದಗಳನ್ನು ಕ್ರಮಗೊಳಿಸಿ ಬ್ರಹ್ಮಸೂತ್ರಗಳನ್ನು ರಚಿಸಿದರು ಇದಲ್ಲದೆ ಇವರು ಅಷ್ಟಾದಶಪುರಾಣ, ಮಹಾಭಾರತ, ಹರಿವಂಶ ಭಾಗವತ ಮುಂ. ಗ್ರಂಥನಿರ್ಮಾಪಕರು. ಉತ್ತರಮೀಮಾಂಸಾಶಾಸ್ತ್ರ ದರ್ಶನಕಾರರು. (ಮಧ್ವವಿಜಯ ೭-೫೦)

## ೩೪ನೆಯ ಹಾಡು

ಈ ಹಾಡಿನಲ್ಲಿ ಶ್ರೀಮಧ್ವರಾಯರ ಮಹಿಮೆಯ ವರ್ಣನೆ ಬರುತ್ತದೆ.

೧ **ಮದನಜನಕ**=ಶ್ರೀಹರಿ

೨ **ಮಧ್ಯಗೇಹ**=ಶ್ರೀಮದಾಚಾರ್ಯರ ತಂದೆಯ ಹೆಸರು. (ಮೂಲ ತುಳು ಶಬ್ದವಾದ ನಡ್ಡಂತಿಲ್ಲಾಯರು ಎಂಬುದರ ಸಂಸ್ಕೃತರೂಪ).

೩ **ಮೋದತೀರ್ಥ**=ಆನಂದತೀರ್ಥ
**ದಿವ್ಯಶಾಸ್ತ್ರ**=ದ್ವೈತಶಾಸ್ತ್ರ

## ೩೫ನೆಯ ಹಾಡು

೩೫-೪೯ರ ವರೆಗಿನ ಹಾಡುಗಳಲ್ಲಿ ವಾಯುದೇವರ ಅವತಾರತ್ರಯದ ಮಾಹಾತ್ಮ್ಯ ವರ್ಣನೆಯಿದೆ.

ವಿ. ಸೂ: ವಾಯುದೇವರನ್ನು ಬಾಲಕನೆಂದು ಕಲ್ಪಿಸಿ ವಾತ್ಸಲ್ಯಭಾವದಿಂದ ಬಣ್ಣಿಸಿದ ಹಾಡು.

೧ **ಅಂಜನೆ........ಕೂಸು** – ಒಂದನೆಯ ಅವತಾರ (ಹನುಮ)

**ಲಂಕಾ**=ಸಿಂಹಳದ್ವೀಪ

**ವಿಷದ ಲಡ್ಡುಗೆ ಮೆದ್ದಿತು ಕೂಸು** (ಭಾರತ-ಆದಿ. ೧೩೭)

**ಉದ್ಧರಿಸಿತು**:— ಆಚಾರ್ಯರೆಲ್ಲರೂ ಮತೋದ್ಧಾರಕರೇ ಹೊರತು ಮತಸ್ಥಾಪಕರಲ್ಲ.

**ಉಡುಪಿಯಲ್ಲಿ ಬಂದು ನಿಂತಿತು ಕೂಸು**--(ಮಧ್ವವಿಜಯ ೨-೨೪)

## ೩೬ನೆಯ ಹಾಡು

ಇದರಲ್ಲಿ ದಾಸರು ಶ್ರೀವ್ಯಾಸರಾಯರಿಂದ ಪ್ರತಿಷ್ಠಾಪಿತವಾದ ಯಂತ್ರೋದ್ಧಾರ ಪ್ರಾಣದೇವರನ್ನು ಸ್ತುತಿಸಿರುತ್ತಾರೆ.

**ಮುಲಿವರ**=ಎದುರಿಸುವವರ,

**ಸಕಲವಿದ್ಯಾಪ್ರವೀಣ**:— ಹನುಮಂತನು ಸೂರ್ಯನಿಂದ ವ್ಯಾಕರಣ-ಸೂತ್ರ, ಸೂತ್ರವೃತ್ತಿ, ಭಾಷ್ಯ ಮತ್ತು ಸಂಗ್ರಹಗಳನ್ನು ಕಲಿತನು. (ಶಿವ, ಶತರುದ್ರಸಂಹಿತಾ ೨೦) ಇದಲ್ಲದೆ ಇವನು ಹನ್ನೊಂದನೆಯ ವ್ಯಾಕರಣಕಾರ. ವಾಗ್ಗೇಯಕಾರನೂ ಆಗಿದ್ದಾನೆ. (ಇವನ ಮತವನ್ನು ಉಳಿದ ವಾಗ್ಗೇಯಕಾರರು ಉದಾಹರಿಸುತ್ತಾರೆ.)

**ಏಕಾದಶೀಯರುದ್ರ** :— ( ಹರಿದಾಸಸಾಹಿತ್ಯದ ಅನೇಕ ಹಾಡುಗಳಲ್ಲಿ 'ಏಕಾದಶೀಯರುದ್ರ' ಎಂಬ ವಿಶೇಷಣ ಬಂದಿದೆ. ಅದಕ್ಕೆ ಯಾವ ಪುರಾಣವು ಆಧಾರವಾಗಿದೆಯೆಂಬುದು ನಮಗೆ ಗೊತ್ತಾಗಲಿಲ್ಲ. ಪರಾಶರಸ್ಮೃತಿ ಹನುಮದ್ವ್ರತದಲ್ಲಿಯೂ ಹನುಮಂತ ರುದ್ರರೂಪನೆಂಬ ಕಲ್ಪನೆ ಕಂಡುಬರುವುದಿಲ್ಲ.)

**ಮುದ್ರಾ**=ಮುದ್ರಿಕೆ.

೩ **ವೈಕುಂಠಸ್ಥಳದಿಂದ ಬಂದು**= ಇದೊಂದು ಸ್ಥಳಪುರಾಣದ ಕಥ
(ಯಂತ್ರೋದ್ಧಾರ ಪ್ರಾಣದೇವರ ಮೂರ್ತಿ ವೈಕುಂಠದಿಂದ ಬಂದುದು.)

**ಪಂಪಾಕ್ಷೇತ್ರ**=ತುಂಗಭದ್ರಾತೀರದಲ್ಲಿರುವ ಹಂಪೆ. (ಹೊಸಪೇ
ತಾ. ಬಳ್ಳಾರಿ, ಜಿ.)

**ಯಂತ್ರೋದ್ಧಾರಕ**=ಹಂಪೆಯಲ್ಲಿರುವ ಪ್ರಾಣದೇವರ ಹೆಸರು
ಕಪಿಬಂಧಬದ್ಧ ವರ್ತುಲದಲ್ಲಿರುವ ಸಮಭುಜವುಳ್ಳ ಎರಡು ತ್ರಿಕೋಣಗ
ನಟ್ಟನಡುವೆ ಈ ಮೂರ್ತಿಯನ್ನು ಪ್ರತಿಷ್ಠಾಪಿಸಿ, ಸುತ್ತಲೂ ಬೀಜಾಕ್ಷ
ಗಳನ್ನು ಕೆತ್ತಿದ್ದಾರೆ. (ವಿಜಯದಾಸರು:— ಸುತ್ತು ವಾನರಬದ್ಧ, ಮತ
ವಲಯಾಕಾರ. ಮಧ್ಯ ಚಿತ್ರಕೋಣ ಆರರೊಳು ನಿತ್ಯದಲ್ಲಿ ಮೆರೆವ...)

## ೩೭ನೆಯ ಹಾಡು

ಈ ಪದದಲ್ಲಿ ವಾಯುದೇವರ ಮೂರೂ ಅವತಾರಗಳ ವರ್ಣನೆ ಇದೆ.

೧ **ಅಭೀಷ್ಟ**=ಇಚ್ಛಿಸಿದುದು.

**ಒಂದು ಯುಗ**=ತ್ರೇತಾಯುಗ

**ಅಯೋಧ್ಯಾಪುರ**=ಪರಂಪರಾಗತವಾದ ಸಪ್ತಪುರಿಗಳಲ್ಲಿ ಇದು ಒಂ
ನೆಯದು; ಸೂರ್ಯವಂಶದವರ ರಾಜಧಾನಿ. ರಾಮಾಯಣದಲ್ಲಿ ಇದಕ
ಸಾಕೇತಪುರವೆಂಬ ಹೆಸರು ಉಲ್ಲೇಖಿಸಲ್ಪಟ್ಟಿದೆ. ಇದು ಸರಯೂ
ನದಿಯ ದಕ್ಷಿಣದಲ್ಲಿದೆ. ಉತ್ತರಭಾರತ ರೇಲ್ವೆಯ ನಿಲ್ದಾಣವೂ ಆಗಿದ
(ಉತ್ತರ ಪ್ರದೇಶ).

೨ **ವಾಯುಕುಮಾರ**:— ಕುಂತಿಗೆ ದುರ್ವಾಸರಿಂದ ದೊರೆತ ದೈವಿ
ಮಂತ್ರಗಳಲ್ಲಿ ವಾಯುವಿನ ಮಂತ್ರದಿಂದ ಹುಟ್ಟಿದವನು.

೩ **ಕಾಯಜಪಿತ**=ಕಾಮನ ತಂದೆ, ಕೃಷ್ಣ (ಶ್ರೀಹರಿ).

**ರಾಜಸೂಯಯಾಗವ ಮಾಡಿ**= (ಭಾರತ ಸಭಾ. ೩೬–೩೮)

**ಪ್ರಿಯಜನ ಮಂದಾರ**=ಭಕ್ತರಿಗೆ ಬೇಡಿದುದನ್ನು ಕೊಡುವವ.

**ಮಂದಾರ**=ಸ್ವರ್ಗದ ವೃಕ್ಷಗಳಲ್ಲಿ ಒಂದು. ಬೇಡಿದ ಇಷ್ಟಾರ್ಥವನ್ನು ಸಲ್ಲಿಸುತ್ತದೆಂದು ಪರಂಪರೆ ಹೇಳುತ್ತಿದೆ.

೪ **ಹರಿಗತಿಪ್ರಿಯನಾಗಿ:**— ವಾಯುದೇವರು ಯಾವಾಗಲೂ ಹರಿಗೆ ಅತಿ ಪ್ರಿಯರಾಗಿದ್ದಾರೆ. (ಪದ ನಾಲ್ಕು ನುಡಿ ೧)

೫ **ಲೆಂಕ**=ಸೇವಕ.

## ೩೮ನೆಯ ಹಾಡು

ವಾಯುದೇವರ ಮೂರೂ ಅವತಾರಗಳ ಸ್ಮರಣೆಯಿಂದ ನಿರ್ಭಯತೆ, ಪಾಪ ವಿಮುಕ್ತಿ ದೊರಕುತ್ತವೆಂದು ಈ ಪದ್ಯದಲ್ಲಿ ಹೇಳಲಾಗಿದೆ.

೧ **ಸಂಜೀವರಾಯ**=ಮುಖ್ಯಪ್ರಾಣದೇವರು

೨ **ರೋಮರೋಮಕೆ ಕೋಟಿಲಿಂಗವುದುರಿಸಿದ**=(ಪದ ೨೨ ಟಿ. ೫ ನೋಡಿರಿ).

## ೩೯ನೆಯ ಹಾಡು

ವಾಯುದೇವರ ಮೂರೂ ಅವತಾರಗಳ ಮಾಹಾತ್ಮ್ಯ ವರ್ಣನೆ ಇದೆ.

೧ **ಮಾರುತಿ**=ವಾಯುದೇವರ ಅವತಾರ

**ವನಧಿ**=ಸಮುದ್ರ

**ಮಹಿತನುಜೆ**=ಭೂಮಿಯ ಮಗಳು; ಸೀತೆ.

ಮಿಥಿಲಾ (ವಿದೇಹ) ನಗರದ ಜನಕ ಮಹಾರಾಜ, ಮಕ್ಕಳಿಲ್ಲದುದಕ್ಕಾಗಿ ಯಜ್ಞ ಮಾಡಬೇಕೆಂದಿರುವಾಗ, ಭೂಶೋಧನೆಯ ಕಾಲದಲ್ಲಿ ಸೀತಾದೇವಿ ದೊರೆತಳು. ಆದುದ ರಿಂದ ಸೀತಾದೇವಿ ಭೂಮಿಜೆ— ಮಹೀತನುಜೆ. (ರಾಮಾಯಣ— ಬಾಲಕಾಂಡ–೬೭)

೨ **ಬಕ:**—ಇವನು ಏಕಚಕ್ರನಗರದ ಅಧಿಪತಿ. ಅಲ್ಲಿ ವೇತ್ರವನದಲ್ಲಿ ಇ ದ್ದನು. ಭೀಮನು ಇವನನ್ನು ಮಲ್ಲಯುದ್ಧದಲ್ಲಿ ಕೊಂದನು.

(ಭಾರತ ಆದಿ ೬೧–೨೯; ೧೬೧–೧೬೪)

**ಹಿಡಿಂಬಕ:—** ಕಿಮ್ಮೀರನ ಒಡಹುಟ್ಟಿದವ. ಪಾಂಡವರು ಅರಗಿನ ಮ
ಯಿಂದ ಹೊರಬಿದ್ದು ಅರಣ್ಯ ಸೇರಿದಾಗ, ಭೀಮನನ್ನು ಕೆಣಕಿ ಅವನಿಂದ ಮರ
ಹೊಂದಿದನು. (ಭಾರತ ಆದಿ ೬೧, ೬೩, ೧೬೬)

೩ **ಜೀವೇಶರೊಂದು** (ಎಂಬ)=ಅದ್ವೈತವಾದ
**ಕುಭಾವಶಾಸ್ತ್ರ**=ಅಪಾರ್ಥಕಲ್ಪನೆಯನ್ನು ಹುಟ್ಟಿಸುವಂತಹ ವಾದ
**ಕೋವಿದ**=ಬಲ್ಲವ.
**ಸದ್ಭಾಷ್ಯ**=ದ್ವೈತಭಾಷ್ಯ

## ೪ನೆಯ ಹಾಡು

ಇದೊಂದು ಅಷ್ಟಕಜಾತಿಯ ಪದ್ಯ, ಒಂಬತ್ತನೆಯ ಪದ್ಯವು ಫಲಶ್ರುತಿರೂ
ವಾಗಿರುತ್ತದೆ.

ಈ ಹಾಡಿನಲ್ಲಿ ವಾಯುದೇವರ ಮೂರು ಅವತಾರಗಳ ವರ್ಣನೆ ಇದೆ.

೧ **ಶ್ರೀರಾಮಸಹಭೋಜನವನೀಯನೆ:** (ಪದ ೧೫, ಟಿ. ೧)
**ಹರಿವಿರಿಂಚಿ.....ಅಳಿಯಲಾಗ:—** (ಭಾರತ. ದ್ರೋಣ. ೨೦೨;
ಭಾಗವತ, ೭-೧

**ವಿರಿಂಚಿ**=ಬ್ರಹ್ಮ

ಇಲ್ಲಿ ರುದ್ರಾದಿ ದೇವರ ಮತ್ತು ವಾಯುದೇವರ ಸಾಮರ್ಥ್ಯತಾರತಮ್ಯವನ
ತೋರಿಸಿದ್ದಾರೆ —

ರುದ್ರದೇವರು ಹರಿ-ಬ್ರಹ್ಮರ ಸಹಾಯದಿಂದ ತ್ರಿಪುರವನ್ನು ಗೆದ್ದರ
ಆದರೆ ನೀನು ಏಕಾಕಿಯಾಗಿ ಸಮುದ್ರ ದಾಟಿ, ರಾಕ್ಷಸಕುಲವನ್ನು ನಾ
ಮಾಡಿ ಸೀತೆಗೆ ಉಂಗುರಕೊಟ್ಟು ತಿರುಗಿ ಬರುವ ಮಹಾಸಾಮರ್ಥ್ಯ
ತೋರಿಸಿದೆ.

೨ ಲಕ್ಷ್ಮಣನು ಶೇಷನ ಅವತಾರ. ರಾವಣನು ಅವನನ್ನು ಎಳೆಯಲ
ನೀನು ಅವನನ್ನು ರಾಮನ ಕಡೆಗೆ ಕರೆತಂದೆ:—ಇಲ್ಲಿ ಶೇಷದೇವರಿಗಿಂತಲ
ಹನುಮಂತನು ಬಲಿಷ್ಠನೆಂಬ ಸೂಚನೆಯಿದೆ,

೩ **ತನ್ನ ಜನನಿಯೊಬ್ಬಳಿಗೆ-ಸುಧೆಯು ತರಲು**-ವಿನತೆಯ ಮಗನಾದ ಗರುಡ ಮಲತಾಯಿಯಾದ ಕದ್ರುವಿನ ಹೇಳಿಕೆಯ ಪ್ರಕಾರ ಇಂದ್ರ ಲೋಕದಿಂದ ಅಮೃತ ತಂದನು. (ಭಾರತ. ಆದಿ ೫, ೩೨- ೩೪)

**ಸುಪರ್ಣ** = ಗರುಡ.

ಗರುಡನು ತಂದ ಅಮೃತದ ಉದ್ದೇಶ ಪೂರ್ಣವಾಗಲಿಲ್ಲ; ಆದರೆ ನೂರು ಯೋಜನದ ಗಿರಿಯನ್ನು ತಂದು ಲಕ್ಷ್ಮಣನನ್ನು— ಕಪಿಗಳನ್ನು ನೀನು ಬದುಕಿಸಿದೆ, ಗರುಡನಿಗಿಂತ ಹನುಮಂತನು ಶ್ರೇಷ್ಠನೆಂಬ ಸೂಚನೆ ಇದೆ.

**ಸಂಜೀವನಗಿರಿ** = ದ್ರೋಣಗಿರಿ.

**ಉನ್ನತ ಶತಯೋಜನಗಲದ....ಗಿರಿಯ ತಂದು.**

(ರಾಮಾಯಣ-ಯುದ್ಧ. ೧೦೨)

ಯುದ್ಧದಲ್ಲಿ ಲಕ್ಷ್ಮಣನಿಗೆ ಮೂರ್ಛೆ ಬರಲು ಹನುಮಂತನು ಜಾಂಬವಂತನ ಹೇಳಿಕೆಯಂತೆ ಸಂಜೀವಿನಿ ಗಿರಿಯನ್ನು ತಂದನು.

೪ **ತ್ರಿಕರಣ** = ದೇಹ, ಮಾತು (ವಾಕ್), ಮನಸ್ಸು
**ಪ್ಲವಗ** = ಕಪಿ.

**ನವಕನಕದ ಮಾಲೆ ಕೊರಳಿಗಿಟ್ಟು ಜಾನಕಿರಮಣನು**—

ರಾಮನ ಪಟ್ಟಾಭಿಷೇಕದ ಕಾಲದಲ್ಲಿ ಹನುಮಂತನು ಸಮುದ್ರಜಲವನ್ನು ತಂದುದನ್ನು ನೋಡಿ ಹಿಗ್ಗಿ, ಅವನ ಕೊರಳಿಗೆ ಸೀತೆ ಬಂಗಾರದ ಹಾರವನ್ನು ಹಾಕಿ ಅವನನ್ನು ಮನ್ನಿಸಿದಳು. (ಸಂಗ್ರಹ ರಾಮಾಯಣ: ರಾಮಾಯಣ ಯುದ್ಧ. ೧೨೮)

ತನ್ನ ಸೇವೆಯನ್ನು ಮಾಡಿದ ಕಪಿಗಳಿಗೆಲ್ಲ ರಾಮನು ಮುಕ್ತಿಯನ್ನು ಕೊಟ್ಟನು. ಆದರೆ ಹನುಮಂತನು ಎಲ್ಲರಂತೆ ನಾಲ್ಕು ಪುರುಷಾರ್ಥಗಳನ್ನು ಬೇಡದೆ, ಕೇವಲ ಭಕ್ತಿಯನ್ನು ಬೇಡಿ ಭಕ್ತಶ್ರೇಷ್ಠನೆನಿಸಿಕೊಂಡನು. (ಭಾರತ [illegible])

೫ **ಗರಳ**=ವಿಷ
**ಪೆರ್ಮೆ**=ಬಲ, ಹೆಮ್ಮೆ
**ಸುರಿದು**=ಕುಡಿದು

ಸಮುದ್ರಮಥನ ಕಾಲದಲ್ಲಿ ಹುಟ್ಟಿದ ವಿಷವನ್ನು ಶ್ರೀಹರಿಯ ಬಲದಿಂ ನೀನು ಕುಡಿದು ಜೀರ್ಣಿಸಿಕೊಂಡೆ. (ಭಾರತತಾತ್ಪರ್ಯ ನಿರ್ಣಯ ೧, ೧೩–೧೪) ಈ ನಿನ್ನ ಅಸಾಮಾನ್ಯ ಶಕ್ತಿಯನ್ನು ಅರಿಯದೆ ನಿನ್ನ ಎರಡನೆಯ ಅವತಾರವಾ ಭೀಮಾವತಾರದಲ್ಲಿ ದುರ್ಯೋಧನನು ನಿನಗೆ ವಿಷವನ್ನು ಹಾಕಿದ. ಅದನ್ನು ಕೂಡ ನೀನು ಉಂಡು ತೇಗಿದೆ.

೬ **ಬವರ**=ಯುದ್ಧ
**ಹವಿ**=ಆಹುತಿ

ಸ್ವರ್ಗಾರೋಹಣವಾದ ಬಳಿಕ ವಾಯುವಿನ ಅವತಾರವಾದ ಭೀಮನನ್ನು ದೇವತೆಗಳು ಎದುರುಗೊಂಡರು. ಅವರೆಲ್ಲರನ್ನೂ ಅವರವರ ಪದಕ್ಕೆ ತಕ್ಕಂ ಭೀಮನು ಮನ್ನಿಸಿದನು. ಭೀಮನು ವಾಯುವಿನ ಅವತಾರವಾದುದರಿಂದಲೂ ದ್ರೌಪದಿಯು ಭಾರತಿಯ ಅವತಾರವಾದುದರಿಂದಲೂ ಅವರಿಬ್ಬರೂ ಪವ ಲೋಕದಲ್ಲಿ ಮೆರೆದರು. (ಭಾರತ ತಾತ್ಪರ್ಯನಿರ್ಣಯ೩೭–೧೩೩)

೭ ವಿಪ್ರಚಿತ್ತಿ=ಈತನು ಕಶ್ಯಪ ಮತ್ತು ಅವನ ಹೆಂಡತಿ ದನೂ ಇವ ಮಗನು. ಇವನು ಹಿರಣ್ಯಕಶಿಪುವಿನ ತಂಗಿಯಾದ ಸಿಂಹಿಕೆಯನ್ನು ಲಗ ವಾಗಿದ್ದನು. (ಭಾರತ ಸಭಾ, ೯–೫೧) ಈತನು ದೇವತೆಗಳ ಸಂಗ ಹಿರಣ್ಯಕಶಿಪುವಿನ ಪಕ್ಷಗಟ್ಟಿ ಹೊಡೆದಾಡಿದನು (ಭಾರತ. ಸಭಾ, ೯-೫೧
**ಜರಾಸಂಧ:** ಮಗಧದೇಶದ ಬೃಹದ್ರಥನೆಂಬ ರಾಜನ ಮಗ (ಮ.ಸ ೧೬ ೧೮)ಬ್ರಹ್ಮ-ಹರರ ವರವನ್ನು ಪಡೆದು ವಿಪ್ರಚಿತ್ತಿಜರಾಸಂಧನಾಗಿ ಹುಟ್ಟಿದ (ಭಾರತ. ಆದಿ, ೬೮) (ಭಾರತ ತಾತ್ಪರ್ಯನಿರ್ಣಯ ೧೧–೨೦೩) ರಾಜಸೂ ಯಾಗಕಾಲದಲ್ಲಿ ಭೀಮನು ಕೃಷ್ಣನ ಸಂಗಡ ದಿಗ್ವಿಜಯಕ್ಕೆ ಹೊರಟ ಜರಾಸಂಧನನ್ನು ಕೊಂದನು. (ಭಾರತ. ಸಭಾ, ೨೪–೨೫) ಇವನಿಗೆ ಅ ಪ್ರಾಸ್ತಿ ಎಂಬ ಇಬ್ಬರು ಹೆಣ್ಣುಮಕ್ಕಳಿದ್ದರು. ಅವರನ್ನು ಕಂಸನಿ ಕೊಟ್ಟು ಮದುವೆ ಮಾಡಿದ್ದನು. (ಭಾರತ ಸಭಾ, ೨೩)

**ಅಧ್ವರ**=ಯಜ್ಞ.

೮ ಈ ನುಡಿಯಲ್ಲಿ ಶ್ರೀಮಧ್ವಾಚಾರ್ಯರ ಅವತಾರದ ವಿಷಯವಿದೆ.

**ನಡುವುನೆ**=(ತುಳು) ಪಡ್ಡಂತಿಲ್ಲಾಯ, (ಸಂ) ಮಧ್ಯಗೇಹ.

**ಮಡದಿ**=ವೇದವತಿ (ವೇಗವತಿ)

**ಸಚ್ಛಾಸ್ತ್ರದಿ**=ದ್ವೈತಶಾಸ್ತ್ರದಿಂದ.

**ಆನಂದ ಶುಭಗುಣಗಳ ಕಡಲು:** (ಭಾರತ ತಾತ್ಪರ್ಯನಿರ್ಣಯ ೨-೧)

ಇದು ಫಲಶ್ರುತಿಯ ಶ್ಲೋಕ:

**ಶ್ವೇತದ್ವೀಪ**=ಇದು ವಿಷ್ಣುವಿನ ಮೂರು ವಾಸಸ್ಥಾನಗಳಲ್ಲಿ ಒಂದು.
(ಭಾರತ. ಶಾಂತಿ, ೩೪೩ ರಿಂದ ೩೪೬)

## ೪೧ನೆಯ ಹಾಡು

ಈ ಹಾಡಿನಲ್ಲಿ ವಾಯುದೇವರ ಮೂರು ಅವತಾರಗಳ ಸ್ತೋತ್ರವಿದೆ.

**ಅನುಮಾನ**=ಸಂಶಯ

**ನಿರ್ಧೂಮ**=ಹೊಗೆಯಾದಂತೆ (ಹಾಳು)

**ದೃಷ್ಟಿಹೀನ**=ಕುರುಡ

**ಪತಿತ**=ವೈದಿಕತತ್ತ್ವಬಾಹಿರ.

**ಮತ**=ತತ್ತ್ವವಾದ

## ೪೨ನೆಯ ಹಾಡು

ಇದೂ ವಾಯುದೇವರ ಮೂರೂ ಅವತಾರಗಳನ್ನು ಸ್ತುತಿಸುವ ಹಾಡು.

**ಪ್ರಾಣೋದ್ಧಾರ**=ಜೀವಿಗಳಲ್ಲಿ ಪ್ರಾಣ ತುಂಬುವವ (ಪ್ರಬೋಧಕ)

**ಪ್ರಾಣರಲ್ಲಿ ಉತ್ತಮ**=ಮುಖ್ಯಪ್ರಾಣ.

**ಪ್ರಾಣಾಪಾನ......ಸಮಾನ:**— ಈ ಐದೂ [illegible]
[illegible] ಶ್ರೇಷ್ಠ. (ಷಟ್ಪ್ರಶ್ನೋಪನಿಷತ್ [illegible] ಪ್ರಶ್ನೋತ್ತರ [illegible])

ಪ್ರಾಣವಾಯು ಹೃದಯದಲ್ಲಿ; ಅಪಾನವಾಯು ಗುದಸ್ಥಾನದಲ್ಲಿ, ವ್ಯಾ
ವಾಯು ಶರೀರದ ಸಕಲಭಾಗಗಳಲ್ಲಿ, ಉದಾನವಾಯು ಕಂಠದಲ್ಲಿ, ಸಮಾನ
ವಾಯು ನಾಭಿಯಲ್ಲಿ. (ಭಾರತ ಅನುಶಾಸನ ೧೯೧

**ಕಾಯ ಕರ್ಮ ಚಕ್ಷುರಿಂದ್ರಿಯ**=ದೇಹ, ಕಾರ್ಯ, ಮತ್ತು
ಚಕ್ಷು ಮುಂ. ಇಂದ್ರಿಯಗಳು.

೨ **ಕಾಮಧೇನು**:— ಅಮೃತಮಥನ ಕಾಲದಲ್ಲಿ ಕ್ಷೀರಸಮುದ್ರದಿಂದ
ಹುಟ್ಟಿದ ಸುರಧೇನು. (ಭಾರತ ಆದಿ ೧೯೧) (ವಾಯುಸ್ತುತಿ ೧೦)

**ಚಿಂತಾಮಣಿ**:— ಪ್ರಾಚೀನ ಪುರಾಣಗಳಲ್ಲಿ ಇದರ ಹೆಸರು ಕಾಣುವ
ದಿಲ್ಲ, ಬೇಡಿದುದನ್ನು ನೀಡುವ ರತ್ನವಿದು.

**ಕಲ್ಪವೃಕ್ಷ**=ಸ್ವರ್ಗದಲ್ಲಿರುವ ವೃಕ್ಷಗಳಲ್ಲಿ ಒಂದು. ಬೇಡಿದ ಇಚ್ಛೆ
ಯನ್ನು ಪೂರೈಸುತ್ತದೆ.

**ಸಂಪದ**=ಉತ್ತಮ ಪದ.

**ಅಪರೋಕ್ಷಜ್ಞಾನ**:—ಸ್ವಸ್ವರೂಪಜ್ಞಾನ, ಪರಮಾತ್ಮ ಸಾಕ್ಷಾತ್ಕಾ

**ದಾರ್ಢ್ಯ**=ದೇಹ ಮತ್ತು ಮನಸ್ಸುಗಳ ಬಲ

**ಪೂಜಿಪ**=ಹರಿಯ ಪೂಜಿಸುವ

**ಕವಿತೆವಾಕ್ಯ**=ಕಲ್ಪನೆಯ ಮಾತು.

**ಅವಿವೇಕ**=ವಿಚಾರಗೇಡಿತನ

## ೪೩ನೆಯ ಹಾಡು

ಇಲ್ಲಿ ವಾಯುದೇವರ ಅವತಾರತ್ರಯಗಳ ಮಹಿಮೆಯ ವರ್ಣನೆ ಇದೆ.

೧ **ಗತಿಗೋತ್ರ**=ಕುಲಸಂಬಂಧ, ಬಾಂಧವ್ಯ.

**ಸಾಯಮಾಡಿ**=ಸಹಾಯಮಾಡಿ.

**ಸಂಜೀವನ**= (ರಾಮಾಯಣ ಯುದ್ಧ. ೭೪-೧೦೧)

೨ **ಆಪದ್ಬಂಧು**=ಸಂಕಟಕಾಲದಲ್ಲಿ ನೆರವಾಗುವವ.

**ಅಂಧಕಜಾತರು**=ಧೃತರಾಷ್ಟ್ರನ ಮಕ್ಕಳಾದ ಕೌರವರು

**ನಂದನಂದನ**=ನಂದನ ಮಗ, ಕೃಷ್ಣ.

೩ **ಮತಗೆಟ್ಟ**=ಧರ್ಮದ ಕಲ್ಪನೆಯಿಲ್ಲದ.

## ೪೪ನೆಯ ಹಾಡು

ವಾಯುದೇವರ ಅವತಾರತ್ರಯವನ್ನು ಈ ಹಾಡಿನಲ್ಲಿಯೂ ವರ್ಣಿಸಿದೆ.

೧ **ತುಂಬಿ**=ಭ್ರಮರ

೨ **ಏಣಾಂಕ**=ಚಂದ್ರ, ಏಣಾಂಕವಂಶ=ಚಂದ್ರವಂಶ
**ಕ್ಷೋಣಿಪಾಲಕ ಶಿರೋಮಾಣಿಕ್ಯ**=ಕ್ಷತ್ರಿಯರಲ್ಲೆಲ್ಲ ಶ್ರೇಷ್ಠನಾದವ (ಭೀಮಸೇನ)

೩ **ಯೋಗದಿಟ್ಟ**=ಯೋಗದಲ್ಲಿ ನಿಪುಣ (ಧೃಷ್ಟ ದೃ-ದಿಟ್ಟ)
**ಆವಾಸವಾದ ಪೆಟ್ಟಿಗೆಯೊಲು:**— ಶ್ರೀಹರಿ ಇವರ ಹೃದಯದಲ್ಲಿ ವಾಸವಾಗಿರುವನೆಂಬ ಭಾವ.

## ೪೫ನೆಯ ಹಾಡು

ವಾಯುದೇವರ ಮೂರೂ ಅವತಾರಗಳ ಸ್ತುತಿಯನ್ನು ಈ ಹಾಡಿನಲ್ಲಿ ಕಾಣಬಹುದು.

೧ **ವಾಮಮುಷ್ಟಿಲಿ**=ಎಡಗೈಮುಷ್ಟಿಯಿಂದ

೨ **ಭೀಮ**=ಭಯಂಕರ, ನಾಶಕಾರಕ
**ಕುಟ್ಟಿದೆ**=ನಾಶಮಾಡಿದೆ

೩ **ಗುರುವ್ಯಾಸರ ಹಿತವ ಪಡೆದೆ:**— ಶ್ರೀವ್ಯಾಸರಿಗೆ ಪ್ರಿಯವಾದ ದ್ವೈತಶಾಸ್ತ್ರವನ್ನು ಸ್ಥಾಪಿಸಿ ಅವರ ಉದ್ದೇಶ ನೆರವೇರಿಸಿದೆ.

## ೪೬ನೆಯ ಹಾಡು

### ಅವತಾರತ್ರಯದ ವರ್ಣನೆ

೧ **ಹರಿ**= ಕಪಿ

೨ **ಸೀವೊಗೆ** = (ಭೀಮಸೇನನು ಹುಟ್ಟಿದ) ನಾಡಿನಲ್ಲಿ
**ಆಂತ** = ಎದುರಾದ
**ಚಲ** = ಹಟ (ಛಲ)
**ಭೀಮ** = ಭಯಂಕರ
**ಕಂತುಜನಕ** = ಕಾಮನ ತಂದೆ; ಕೃಷ್ಣ
**ಮದಗಜ** = ಮದದಾನೆಯಂತಿರುವವ, ಭೀಮ

೩ **ಅನಿಮಿಷರು** = ದೇವತೆಗಳು
**ಅನಿಮಿಷರೊಡೆಯ** = ಶ್ರೀಹರಿ
**ಕನಸೊಳು ಕಾಣದ**:— ಕಲ್ಪನೆಗೆ ಮಿಕ್ಕಿದ

## ೪೭ನೆಯ ಹಾಡು

೧ **ಶ್ರೀತತ್ತ್ವವಾದನುತ** = ಸಾಮಾನ್ಯವಾಗಿ ದ್ವೈತಮತಕ್ಕೆ 'ತತ್ತ್ವವಾದ' ಎಂದು ಹೆಸರು.

**ವಾತಜಾತ** = ವಾಯುದೇವರ ಅವತಾರವಾದ ಶ್ರೀಮಧ್ವಾಚಾರ್ಯರು.
**ಮಹದ್ವನ** = ಅಶೋಕವನ

೨ **ದಾರಕ** = ಮಗ
**ಮಾರುತ** = ವಾಯುದೇವರ ಎರಡನೆಯ ಅವತಾರವಾದ ಭೀಮಸೇನ.
**ದ್ವಾಪರನ** = ದ್ವಾಪರಯುಗದ ಅಭಿಮಾನಿಶಕ್ತಿಯು.

**ಕೀಚಕ**:—ಕೇಕಯ ಮತ್ತು ಅವನ ಹೆಂಡತಿಯಾದ ಮಾಲವಿ ಇವರ ೧೦೬ ಜನ ಮಕ್ಕಳಲ್ಲಿ ಹಿರಿಯ; (ಇವನ ತಮ್ಮಂದಿರಿಗೆ ಉಪಕೀಚಕರೆಂಬ ಹೆಸರಿದೆ.) ಇವನು ಬಾಣಾಸುರನ ಅಂಶಾವತಾರ (ಭಾರತ ವಿ. ೨೧-೨೨)

**ಜರಾಸಂಧ**:— (ಹಾಡು, ೪೦. ನುಡಿ ೭ ರ ಟಿ. ನೋಡಿರಿ.)
**ಮಣಿಮಂತ**:— ಕುಬೇರನ ಸೇನಾಪತಿ. ಇವನಿಗೆ ಅಗಸ್ತ್ಯನ ಶಾಪವಿತ್ತು. ಪಾಂಡವರು ವನವಾಸದಲ್ಲಿದ್ದಾಗ, ಹಿಮವತ್ಪರ್ವತದ ಮೇಲಿರುವ

ಕುಬೇರನ ತೋಟಕ್ಕೆ ಹೋಗಿ ಅಲ್ಲಿದ್ದ ಸೌಗಂಧಿಕ ಪುಷ್ಪವನ್ನು ತರುವಾಗ, ಭೀಮನಿಗೂ ಇವನಿಗೂ ಕಾಳಗವಾಗಿ, ಇವನನ್ನು ಭೀಮನು ಕೊಂದನು.

(ಭಾರತ ವನ. ೧–೬೧)

**ಸೋಽಹಂ**= ಅವನೇ ನಾನು (ಅಹಂ ಬ್ರಹ್ಮವೆಂಬುದರ ಇನ್ನೊಂದು ರೂಪ).

**ಹುಲು**= ಕ್ಷುದ್ರ
**ಮೋಹನಶಾಸ್ತ್ರ**= ಮಾಯಾವಾದ
**ಮಲೆತ**= ಪ್ರತಿಭಟಿಸಿದ
**ಐದು ದರುಶನ**= ಐದುಶಾಸ್ತ್ರಗಳು= ೧) ಸಾಂಖ್ಯ, ೨) ಯೋಗ, ೩) ನ್ಯಾಯ ಅಥವಾ ತರ್ಕ, ೪) ವೈಶೇಷಿಕ, ೫) ಪೂರ್ವಮೀಮಾಂಸಾ.

**ನುಂಗಿ ಜೀರ್ಣಿಸಿಕೊಂಡು**= ಸಂಪೂರ್ಣವಾಗಿ ಖಂಡಿಸಿ
**ಪ್ರಲಯಭೈರವ**= ದುರ್ವಾದಿಗಳ ಪ್ರಪಂಚಕ್ಕೆ ಪ್ರಳಯಕಾಲದ ಭೈರವನಂತೆ ನಾಶಕಾರಕನಾದವ,

**ಅಲವಬೋಧ**= (ಅ+ಲವ) ಪೂರ್ಣಬೋಧ
**ಪಲ್ಲವಿಸು**= ಚಿಗುರಿಡು

**ಶ್ರುತಿಶಾಸ್ತ್ರವ ಅದ್ವೈತವಂ ಬಿಟ್ಟು ಸೆಳೆವಂತೆ:**— ಶ್ರುತಿಶಾಸ್ತ್ರಗಳನ್ನು ಅದ್ವೈತವಾದವನ್ನು ಬಿಡಿಸಿ ಬೇರೆ ಕಡೆಗೆ (ದ್ವೈತ ಮುಂ) ಒಲಿಸುವಂತೆ

**ಪ್ರತಿಪಾದಿಸುವ**= ಅದ್ವೈತಶಾಸ್ತ್ರವನ್ನು ಮಂಡಿಸುವ

**ಮಿಂಚಿಡು**= ಒಪ್ಪಹಾಕು: ಬುದ್ಧಿಯನ್ನು ಹಸನುಗೊಳಿಸು
**ಸಾಣೆ**= ಸಾಣೆ ಹಿಡಿಯುವ ಕಲ್ಲು; ಶಸ್ತ್ರ
**ವೀಣೆ**= ಆನಂದಗೊಳಿಸುವ ಸಾಧನ
**ಚೈತನ್ಯ**= ಜೀವಾತ್ಮವು
**ವಂದ್ಯಸುತ್ರಾಮ**= ಇಂದ್ರನಿಂದ ನಮಸ್ಕರಿಸಿಕೊಳ್ಳುವವ

೬ **ನಿಖಿಳಪೌರಾಣ ಶ್ರುತಿಶಾಸ್ತ್ರದ ಆಗಮದ ಖಣಿ**= ಪುರಾ
ಶ್ರುತಿ, ಷಟ್‌ಶಾಸ್ತ್ರ ಮತ್ತು ಆಗಮಗಳು ಇವುಗಳ ಜ್ಞಾನಪೂರ್ಣರು.
**ಪುಸ್ತಕದ ಮಣಿ**=ಶ್ರೇಷ್ಠರತ್ನ
**ಆಣಿ**=ಕೀಲ
**ಚಿಂತಾಮಣಿ**= ಬೇಡಿದುದನ್ನು ನೀಡುವ ರತ್ನ; ಶ್ರೇಷ್ಠ
**ಯುಕುತಿಪರಿಪೂರ್ಣ**=ತರ್ಕಶಾಸ್ತ್ರದಲ್ಲಿ ನಿಪುಣ
**ವ್ಯೂಹ**= ಸಮೂಹ
**ಗಗನ ಮಣಿ**=ಸೂರ್ಯ

೭ **ಮುಂದೆ ಅಜನಾಗಿ ಪವಮಾನ:**— ಬ್ರಹ್ಮ ಮತ್ತು ವಾಯು
ಒಂದೇ ಕಕ್ಷದವರಾದರೂ, ಬ್ರಹ್ಮನು ಈಗ ಪಟ್ಟದ ಮೇಲಿರುವುದರಿಂದ, ಕೆಲ
ಗುಣಗಳಿಂದ ಶ್ರೇಷ್ಠನೆನಿಸಿಕೊಳ್ಳುತ್ತಾನೆ. ಈ ಕಲ್ಪದ ವಾಯುದೇವರ
ಮುಂದಿನ ಕೃತಯುಗದಲ್ಲಿ ಬ್ರಹ್ಮನ ಪಟ್ಟಕ್ಕೆ ಬರುವವರು.

**ವೇದವಾಕ್ಯ**=ತಪ್ಪದ ಮಾತು
**ಒಂದು ಬಯಸದಲೆ**=ನಿಷ್ಕಾಮದಿಂದ
**ನಿಚ್ಚಟ**=ನಿಶ್ಚಲ
**ದೃಷ್ಟವ**=ದೃಷ್ಟಾಂತ; ಉದಾಹರಣೆ
**ನಂದಮುನಿ**=ಆನಂದತೀರ್ಥರು

೮ **ಢಕ್ಕೆ**=ಭೇರಿ, ಜಯವಾದ್ಯ
**ದುರ್ಲೇಖ**=ಕೆಟ್ಟಹಣೆಬರೆಹ

೯ **ನವರತ್ನಮಾಲೆ**=ಒಂಬತ್ತು ನುಡಿಗಳಿಂದ ಕೂಡಿದ ಹಾಡು.
**ವಿಷ್ಣುದಾಸರು**=ವಿಷ್ಣುಭಕ್ತರು
**ಜನ್ಮಮೂಲೋತ್ಪಾಟನ**=ಪುನರ್ಜನ್ಮ ಬಾರದಂತೆ ಮಾಡುವುದು.
**ಜವ**=ಯಮ
**ಧ್ರುವವಾಗಿ**=ಸ್ಥಿರವಾಗಿ
**ಪರಮಪದವಿ**=ಮುಕ್ತಿ.

**ಪವನನಂತರ್ಯಾಮಿ** = ಹನುಮಹೃತ್ಪದ್ಮವಾಸ.
**ತವಕ** = ಆತುರ.

## ೪೮ನೆಯ ಹಾಡು

ಈ ಪದದಲ್ಲಿ ಕೇವಲ ಹನುಮಂತದೇವರ ಸ್ತುತಿ ಇದೆ.

೧ **ಹನುಮನ ಮತವೆ—ಮತವು.**

(ವಾಯೋರ್ವಿರುದ್ಧಂ ನ ಕರೋತಿ ದೇವಃ
ಸಮುದ್ವಿರುದ್ಧಂ ನ ಕರೋತಿ ನಿತ್ಯಂ ॥
ಹರೇರ್ವಿರುದ್ಧಂ ನ ಕರೋತಿ ವಾಯುಃ ।
ವಾಯೋರ್ವಿರುದ್ಧಂ ನ ಕರೋತಿ ವಿಷ್ಣುಃ ॥ ಗರುಡ. ೬-೩೯)

**ಸುಗ್ರೀವ** = (ಹಾಡು ೨೨ ನುಡಿ ೨)
**ವಾಲಿ** = ( ,, ,, ,, ,,)

೨ **ವಿಭೀಷಣ** = ( ,, ೨೬ ,, ,,)

**ರಾವಣ:**— ಇವನು ವಿಶ್ರವಸ್ ಮತ್ತು ಕೈಕಸಿ ಇವರ ಮಗ. ಇವನು ರಾಮನ ವಿರೋಧ ಕಟ್ಟಿಕೊಂಡು ಯುದ್ಧದಲ್ಲಿ ಸೋತನು. ರಾಮಾಯಣ ಮಹಾಕಾವ್ಯದ ಖಳನಾಯಕನೀತ.

೩ **ಹನುಮನೊಳ್ ಪುರಂದರವಿಠಲನ ಆವಾಸ:—**
ಶ್ರೀಹರಿ ಹನುಮನಲ್ಲಿ ಅಂತರ್ಯಾಮಿಯಾಗಿದ್ದಾನೆ.

## ೪೯ನೆಯ ಹಾಡು

ಈ ಪದದಲ್ಲಿ ವಾಯುದೇವರ ಮೂರೂ ಅವತಾರಗಳ ಸ್ತುತಿ ಇದೆ.

೧ **ಸುಜ್ಞಾನನಿತ್ತು** = (ಪದ ೩ ಸಾಲು ೬ ಟಿಪ್ಪಣಿ ನೋಡಿರಿ)
**ಜಾತಿಮಣಿ** = ಶ್ರೇಷ್ಠರತ್ನ:- ಚೂಡಾರತ್ನವನ್ನು ಹನುಮಂತನ ಸಂಗಡ ರಾಮನಿಗೆ ಸೀತಾದೇವಿ ಕಳಿಸಿ, ಕೊಟ್ಟಳು.

**ಗೋಪಿಸುತ** = ಯಶೋದೆಯ ಮಗ. ಕೃಷ್ಣ.
**ಕೀಚಕ** = (ಪದ ೪೭ ನುಡಿ ೨)

೩ **ಮುಸ್ಕರಿ**=ಸಂನ್ಯಾಸಿ; (**ಮುಸ್ಕರ** ಎಂದರೆ ಬಿದಿರಿನ ಬಡಿಗೆ–ದಂಡ)

**ಸತ್ಯವತಿಯ ಸುತ**= ಶ್ರೀವೇದವ್ಯಾಸರು

**ಸತ್ಯವತಿ**=ಉಪರಿಚರ ವಸುವಿನ ಮಗಳು. ಯಮುನಾನದಿಯ ದಂಡೆಯಲ್ಲಿರುವ ದಾಶರಾಜನು ಈಕೆಯನ್ನು ಸಾಕಿ ಸಲಹಿದನು. ಈಕೆಗೆ ಮತ್ಸ್ಯಗಂಧೆಯೆಂಬ ಹೆಸರಿದ್ದಿತು. ಪರಾಶರನಿಂದ ಈಕೆಯಲ್ಲಿ ವೇದವ್ಯಾಸರು ಹುಟ್ಟಿದರು, (ಮಹಾಭಾರತ. ಆದಿ.)

**ಸತ್ಯವತಿಯ ಸುತನ ಭಜಿಸಿ ಸಮ್ಮುಖದಲಿ ಭಾಷ್ಯಮಾಡಿ:**—

(ವಾಯುಸ್ತುತಿ ೩೯)

## ೫೦ನೆಯ ಹಾಡು

೫೦, ೫೫ರ ವರೆಗಿನ ಹಾಡುಗಳಲ್ಲಿ ಶ್ರೀರಮಾದೇವಿಯ ಸ್ತೋತ್ರ ಹಾಗೂ ಮಾಹಾತ್ಮ್ಯಗಳು ಇವೆ.

೧ ರಮಾದೇವಿ ಚಿತ್ತದಲಿ ಆನಂದ ಹಾಗೂ ಸುಖಗಳನ್ನು ದಯೆಪಾಲಿಸುವವಳು.

**ಸಜ್ಜನ**=ಸುಜನರು

**ಸಾಧು**=ವಿಧ್ಯುಕ್ತವಾದ, ಒಳ್ಳೆಯ

೨ **ಮತಿಯ ಸಿದ್ಧಿ**=ಬುದ್ಧಿಯ ಪರಿಪಕ್ವತೆ.

**ಜನಕರಾಜನ ಕುಮಾರಿ ಸೀತೆ**=ಸೀತೆ ಲಕ್ಷ್ಮಿಯ ಪೂರ್ಣಾವತಾರ.

೩ **ವೆಂಕಟರಾಯ**=ಶ್ರೀಹರಿ

೪ **ಸತ್ಯವ ತೋರುವ**=ಸತ್ಯವನ್ನು ಕಂಡು ಅನ್ಯರಿಗೆ ತಿಳಿಸಿಕೊಡುವವ (ಜ್ಞಾನಿ).

೫ **ಸಕ್ಕರೆತುಪ್ಪದ ಕಾಲುವೆ ಹರಿಸಿ**=ಸಕಲಸಮೃದ್ಧಿಯನ್ನು ಉಂಟುಮಾಡಿ.

**ಅಳಗಿರಿರಂಗ:**— ಅಳಗಿರಿಗೆ ಪುಷ್ಪಗಿರಿಯೆಂಬ ಹೆಸರಿದೆ. ಕಡಪಾ ನಿಲ್ದಾಣದಿಂದ ವಾಯುವ್ಯಕ್ಕೆ ಹತ್ತು ಮೈಲಿನಮೇಲೆ ಪೆನ್ನಾರ ನದಿಯ ಮೇಲೆ

ಈ ಕ್ಷೇತ್ರವಿದೆ. ಇದಕ್ಕೆ 'ತಿರುಮಲ-ಮಧ್ಯಅಹೋಬಲಮ್' ಎಂತಲೂ ಅನ್ನುತ್ತಾರೆ.

**ಶಕ್ತ**=ಸರ್ವೋತ್ತಮ

## ೫೧ನೆಯ ಹಾಡು

೧ **ಸಾನುರಾಗ**=ಭಕ್ತಿಪೂರ್ವಕ, ಸುದೃಢಸ್ನೇಹದೊಂದಿಗೆ
**ಹಾಟಕಾಂಬರ**=ಬಂಗಾರದ ಬಣ್ಣದ ಉಡುಪುಳ್ಳವ, ವಿಷ್ಣು.
**ಸಾಟಿಯಿಲ್ಲದ**=ಸಮಾನವಿಲ್ಲದ
**ಪೂರ್ಣಗುಣಗಳು**= ಶ್ರೀಹರಿಯನ್ನು ಬಿಟ್ಟರೆ ಇವಳೇ ಪೂರ್ಣಗುಣಗಳು

೨ **ವ್ಯಜನ=ಬೀಸಣಿಕೆ**
**ಛತ್ರ........ಮಾಡುತಿಹಳು** (ಆದಿತ್ಯ.ಪು. ೮-, ೬೫-೬೭)
**ಪರ್ಯಂಕ**=ಹಾಸಿಗೆ
**ಪಾತ್ರ**=ಭೋಜನಪಾತ್ರ ಇ.
**ಚಿತ್ರಚರಿತ**=ಅನೇಕ ರೀತಿಯ ಮಹಾತ್ಮ್ಯವುಳ್ಳವ

೩ **ಸರುವ ಸ್ಥಳದಿ ವ್ಯಾಪ್ತನಾದ:**— ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ (ಈಶಾವಾಸ್ಯ ೧)
**ಸರುವ ದೋಷರಹಿತನಾದ:**— (ಭಾರತ ತಾತ್ಪರ್ಯನಿರ್ಣಯ ೧-೧೧)

## ೫೨ನೆಯ ಹಾಡು

ದಾಸರು ಈ ಹಾಡಿನಲ್ಲಿ ದ್ವೈತಶಾಸ್ತ್ರದ ಮುಖ್ಯ ಪ್ರಮೇಯವಾದ ಪರಮಾತ್ಮನ ಮೂಲರೂಪಕ್ಕೂ ಅವತಾರರೂಪಗಳಿಗೂ ಅತ್ಯಂತ ಅಭೇದವಿದೆ ಯೆಂಬುದನ್ನು ವ್ಯಾಜೋಕ್ತಿಯಿಂದ ತಿಳಿಸಿದ್ದಾರೆ. ಪರಮಾತ್ಮನನ್ನು ಎಂದೂ ಅಗಲದಿರುವ ಲಕ್ಷ್ಮೀದೇವಿಯನ್ನು, ಬೇರೆಬೇರೆ ಕ್ಷೇತ್ರಗಳಲ್ಲಿರುವ ಪರಮಾತ್ಮನ ಅವತಾರರೂಪ ಗಳೊಂದಿಗೆ ಮದುವೆಯಾದೆಯೋ? ಎಂದು ಕೇಳುತ್ತಾರೆ.

ಯಃ ಸ್ವಾಧುಭಾನಸೋ ವಿಷ್ಣುಃ ————
———— - ನಾತ್ರ ಕಾರ್ಯಾ ವಿಚಾರಣಾ ॥

- - ಶಾಸನೋಽಸಂಸನ್ನಾಸ್ತ್ಯ

ವಿ. ಸೂ. ೫೨ರಿಂದ ೫೫ರ ವರೆಗಿನ ಹಾಡುಗಳು ವ್ಯಂಗ್ಯೋಕ್ತಿಯ ಉದಾಹರಣೆಗಳಾಗಿವೆ.

೧ **ಕ್ಷೀರಾಬ್ಧಿ ಕನ್ನಿಕೆ**=ಸಮುದ್ರಮಥನದ ಕಾಲದಲ್ಲಿ ಕ್ಷೀರಸಾಗರದಲ್ಲಿ ಹುಟ್ಟಿದ ಲಕ್ಷ್ಮೀದೇವಿ (ರಮಾದೇವಿ).

**ಶರಧಿಬಂಧನ ರಾಮಮೂರುತಿ**=ಸೇತುಬಂಧದಲ್ಲಿರುವ(ರಾಮೇಶ್ವರ) ಶ್ರೀರಾಮ.

(ಮದ್ರಾಸದಿಂದ ಧನುಷ್ಕೋಡಿಯವರೆಗೆ ಹೋಗುವ ರೇಲ್ವೆಯ ಶಾಖೆಯೊಂದು ಪಂಬನ್ನಿನಿಂದ ಬೇರೆಯಾಗಿ ರಾಮೇಶ್ವರಕ್ಕೆ ಹೋಗುತ್ತದೆ. ಇದೊಂದು ರಾಮಾಯಣಕಾಲದಿಂದಲೂ ಪ್ರಸಿದ್ಧವಾದ ಕ್ಷೇತ್ರ.)

**ಅನಂತಪದ್ಮನಾಭ** :— (ಈಗಿನ ಕೇರಳದ ರಾಜಧಾನಿಯಾದ ತಿರುವನಂತಪುರಮ್ - ತ್ರಿವೇಂಡ್ರಮ್ - ನಲ್ಲಿರುವ ತಿರುವಾಂಕೂರಿನ ರಾಜರ ಕುಲದೇವತೆ. ಅನಂತಶಯನನೆಂತಲೂ, ಪದ್ಮನಾಭನೆಂತಲೂ ಈ ದೇವರಿಗೆ ಹೆಸರುಗಳಿವೆ. ಇದೊಂದು ಪುರಾಣಕಾಲದಿಂದಲೂ ಪ್ರಸಿದ್ಧವಾದ ಕ್ಷೇತ್ರ.)

**ಜನಾರ್ದನಮೂರುತಿ** :— (ತ್ರಿವೇಂದ್ರಮ್ಮಿನಿಂದ ವಾಯುವ್ಯಕ್ಕೆ ೩೨ ಮೈಲಿನ ಮೇಲಿರುವ ವರಕಲ ನಿಲ್ದಾಣದಿಂದ ೨ ಮೈಲಿನಮೇಲೆ ಈ ಕ್ಷೇತ್ರವಿದೆ, ಇಲ್ಲಿಯ ಗುಡಿಯಲ್ಲಿ ಸುಂದರವಾದ ಜನಾರ್ದನ ಎಂಬ ಹೆಸರಿನ ವಿಷ್ಣುವಿನ ಮೂರ್ತಿಯಿದೆ.)

**ಎರಡುಹೊಳೆಯ ರಂಗಪಟ್ಟಣ**=ಶ್ರೀರಂಗಪಟ್ಟಣ (ಮೈಸೂರು). (ಇಲ್ಲಿ ಕಾವೇರಿಯ ಎರಡು ಶಾಖೆಗಳು ಮೇಲ್ಗಡೆಯಿಂದ ಹರಿದು, ಶ್ರೀರಂಗಪಟ್ಟಣದ ಕೆಳಗಡೆಯಲ್ಲಿ ಕೂಡುತ್ತವೆ, ಈ ಪಟ್ಟಣಕ್ಕೆ **ಆದಿರಂಗ**ವೆಂಬ ಹೆಸರಿದೆ. ಇದು ಪಶ್ಚಿಮರಂಗವೆಂತಲೂ ಹೆಸರಾಗಿದೆ, ಇದೊಂದು ಪ್ರಸಿದ್ಧಕ್ಷೇತ್ರ.)

೨ **ಬೇಲೂರ ಚೆನ್ನಿಗರಾಯ**:— (ಹುಬ್ಬಳ್ಳಿ-ಬೆಂಗಳೂರು ರೇಲ್ವೆ ದಾರಿಯ ಮೇಲಿರುವ ಬಾಣಾವರ ನಿಲ್ದಾಣದಿಂದ ಸು. ೧೮ ಮೈಲಿನ ಮೇಲೆ ಈ ಊರಿದೆ.-ಹಾಸನ ಜಿ.- ಇಲ್ಲಿ ವಿಷ್ಣುವರ್ಧನ ಹೊಯ್ಸಳನು

ಕಟ್ಟಿಸಿದ ಸುಂದರವಾದ ಚೆನ್ನಿಗರಾಯ ಅಥವಾ ಚೆನ್ನಕೇಶವದೇವರ ಗುಡಿಯಿದೆ.)

**ಉಡುಪಿಯ ಕೃಷ್ಣ**:— (ಮಂಗಳೂರು ಜಿಲ್ಲೆಯಲ್ಲಿರುವ ಒಂದು ಪ್ರಸಿದ್ಧ ಕ್ಷೇತ್ರ ಉಡುಪಿ. ಇಲ್ಲಿ ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಶ್ರೀಕೃಷ್ಣನ ಮಂದಿರವಿದೆ.)

**ಪಂಢರಪುರ ವಿಠಲ**:— (ಸೊಲ್ಲಾಪುರ ಜಿಲ್ಲೆಯಲ್ಲಿರುವ ಪ್ರಸಿದ್ಧ ಕ್ಷೇತ್ರ. ಮಿರಜ್–ಲಾತೂರ್ ರೇಲ್ವೆ ದಾರಿಯ ನಡುವಿರುವ ಕುರುಡೇವಾಡಿ ನಿಲ್ದಾಣದಿಂದ ೩೩ ಮೈಲಿನ ಮೇಲಿದೆ. ಪುರಂದರ ದಾಸರ ಆರಾಧ್ಯದೈವತವಾದ ವಿಟ್ಠಲನು ಇಲ್ಲಿಯ ಮುಖ್ಯದೇವತೆ)

**ಬದರೀನಾರಾಯಣ**:— (ಉತ್ತರಪ್ರದೇಶದಲ್ಲಿರುವ ಈ ಕ್ಷೇತ್ರವು ಹೃಷೀಕೇಶದಿಂದ ೧೬೮ ಮೈಲು ದೂರದಲ್ಲಿದೆ. ಇಲ್ಲಿ ಬದರೀನಾರಾಯಣ ದೇವರ ಗುಡಿ ಇದೆ. ಪುರಾಣಕಾಲದಿಂದಲೂ ಪ್ರಸಿದ್ಧವಾದ ಈ ಕ್ಷೇತ್ರವು ಹಿಂದುಸ್ಥಾನದ ಅತಿ ಪ್ರಾಚೀನಕ್ಷೇತ್ರಗಳಲ್ಲಿ ಒಂದಾಗಿದೆ.)

**ಬಿಂದುಮಾಧವ**:— (ಕಾಶಿ—ವಾರಣಾಸಿ– ಉ. ಪ್ರ.– ಯಲ್ಲಿರುವ ಪಂಚಗಂಗಾ ಘಾಟದ ಮೇಲೆ ಬಿಂದುಮಾಧವನ ಗುಡಿಯಿದೆ. ಬಿಂದುತೀರ್ಥದ ಮೇಲ್ಗಡೆಯಲ್ಲಿರುವುದರಿಂದ ಈ ದೇವರಿಗೆ ಬಿಂದುಮಾಧವನೆಂಬ ಹೆಸರು ಬಂದಿದೆ.)

**ಸುಲಭದೇವ**= ಭಕ್ತಿಗೆ ಒಲಿಯುವವ.

**ಪುರುಷೋತ್ತಮ**:— ಜಗನ್ನಾಥಪುರಿಯಲ್ಲಿರುವ ದೇವರಿಗೆ ಈ ಹೆಸರಿದೆ. ಪುರುಷೋತ್ತಮಪುರಿ ಎಂತಲೂ ಈ ಊರಿಗೆ ಹೆಸರು ಉಂಟು. (ಈ ಕ್ಷೇತ್ರವು ಇಂದಿಗೂ ನೀಲಾಚಲಕ್ಷೇತ್ರವೆಂದು ಕರೆಯಲ್ಪಡುತ್ತಿದೆ. ಉತ್ಕಲ ರಾಜ್ಯದ ರಾಜಧಾನಿಯಾದ ಕಟಕದಿಂದ ೨೯ ಮೈಲಿನ ಮೇಲಿರುವ ಖುರ್ದಾರೋಡ್ ನಿಲ್ದಾಣದಿಂದ ೨೮ ಮೈಲಾಗುತ್ತದೆ. ಇದು ಗಜಪತಿರಾಜರ ರಾಜಧಾನಿಯಾಗಿತ್ತಲ್ಲದೆ ಇಲ್ಲಿಯ ದೇವರು ರಾಜರ ಕುಲದೇವತೆಯೂ ಆಗಿದ್ದಿತು. ಸುಪ್ರಸಿದ್ಧ ಸಂಸ್ಕೃತ ಭಕ್ತಕವಿ ಜಯದೇವ ತನ್ನ ಗೀತಗೋವಿಂದವನ್ನು ಈ ದೇವರ ಪ್ರಸಾದದಿಂದಲೇ ಬರೆದಿದ್ದಾನೆ.)

**ಮಂಗಳನಾಯಕ:**— ಇದು ಯಾವ ಕ್ಷೇತ್ರದೇವತೆಯೋ ಗೊತ್ತಾಗ
ಲಿಲ್ಲ.

**ಶ್ರೀವೆಂಕಟೇಶಗೊ**=ತಿರುಪತಿಯ ವೆಂಕಟೇಶ. (ಚಿತ್ತೂರು ಜಿಲ್ಲೆ-
ಆಂಧ್ರಪ್ರದೇಶ). ರೇಣಿಗುಂಟ ನಿಲ್ದಾಣದಿಂದ ೬ ಮೈಲು ದೂರವಿರುವ
ತಿರುಪತಿ (ಪೂರ್ವ) ಯಿಂದ ಬಸ್ಸುಗಳು ತಿರುಪತಿಯ ಬೆಟ್ಟಕ್ಕೆ ಹೋಗು
ತ್ತವೆ. ಪುರಾಣಕಾಲದಿಂದಲೂ ಈ ಕ್ಷೇತ್ರ ಹೆಸರಾಗಿದೆ.

೪ **ವಾಸವ**=ಇಂದ್ರ

**ಕಂಚೀವರದರಾಜ:**— (ಚೆಂಗಲ್ ಪೇಟ್-ಅರ್ಕೋಣಮ್ ರೇಲ್ವೆ
ದಾರಿಯ ಮೇಲಿರುವ ಕಾಂಚೀವರ ನಿಲ್ದಾಣವು ಅಲ್ಲಿಂದ ೨೨ ಮೈಲಾಗು
ತ್ತದೆ. ಕಂಚಿಯಲ್ಲಿ ವಿಷ್ಣುಕಂಚಿ, ಶಿವಕಂಚಿ ಎಂಬ ಎರಡು ಭಾಗ
ಗಳಿದ್ದು ವಿಷ್ಣುಕಂಚಿಯಲ್ಲಿ ವರದರಾಜನ ಗುಡಿಯಿದೆ. ಪುರಾಣಕಾಲ
ದಿಂದಲೂ ಇದು ಕ್ಷೇತ್ರವಾಗಿದೆ.)

**ವಾಸವಾರ್ಚಿತ:**—ಸ್ಥಳಪುರಾಣಗಳಲ್ಲಿ ಈ ಮೂರ್ತಿಯನ್ನು ಇಂದ್ರನು
ಪೂಜಿಸಿದನೆಂಬ ಉಲ್ಲೇಖವಿದೆ.

**ಶ್ರೀಮುಷ್ಣದಾದಿವರಾಹ:**— (ಮದ್ರಾಸ್-ಧನುಷ್ಕೋಡಿ ರೇಲ್ವೆ
ಹಾದಿಯ ಮೇಲಿರುವ ವಿಲ್ಲುಪುರಮ್ಮಿನಿಂದ ೫೦ ಮೈಲು ದೂರದಲ್ಲಿ
ಚಿದಂಬರಮ್ ಎಂಬ ನಿಲ್ದಾಣವಿದೆ. ಅಲ್ಲಿಂದ ೨೬ ಮೈಲು ದೂರ
ವಿರುವ ಈ ಶ್ರೀಮುಷ್ಣಕ್ಷೇತ್ರಕ್ಕೆ ಬಸ್ಸಿನಲ್ಲಿ ಹೋಗಬೇಕು. ಇಲ್ಲಿಯೇ
ವರಾಹಾವತಾರವಾಯಿತೆಂದು ಹೇಳುತ್ತಾರೆ, ಇಲ್ಲಿಯ ಮಂದಿರದಲ್ಲಿ
ಯಜ್ಞವರಾಹನ ಮೂರುತಿಯಿದೆ. ಎಡಬಲದಲ್ಲಿ ಶ್ರೀದೇವಿ ಭೂ
ದೇವಿಯರಿದ್ದಾರೆ.)

**ಶ್ರೀರಂಗನಾಯಕ:**— (ಶ್ರೀರಂಗಕ್ಷೇತ್ರವು ತಿರುಚಿರಾಪಳ್ಳಿಯಿಂದ
೮ ಮೈಲಾಗುತ್ತದೆ. ಕಾವೇರಿಯಿಂದ ಸುತ್ತುವರಿದು ನಡುಗಡ್ಡೆ
ಯಂತಿರುವ ಈ ಊರಲ್ಲಿ ಶ್ರೀರಂಗನ ದೊಡ್ಡ ದೇವಾಲಯವಿದೆ.
ಇದಕ್ಕೆ ಅಂತರಂಗವೆಂತಲೂ ಹೆಸರಿದೆ. ಇದು ಇಡಿಯ ಹಿಂದುಸ್ತಾನ
ದಲ್ಲಿ ಅತಿ ವಿಸ್ತಾರವಾದ ಮಂದಿರವೆಂದು ಹೆಸರಾಗಿದೆ.)

**ಅಳಗಿರಿ:**— (ಪದ ೫೦. ನುಡಿ, ೫)

೫ **ಶಾರ್ಙಪಾಣಿ**=ಶಾರ್ಙಧನುಷ್ಯವನ್ನು ಹಿಡಿದುಕೊಂಡವ, ವಿಷ್ಣು.

**ಶ್ರೀನಿವಾಸ:**— (ಮದ್ದೂರಿನಿಂದ ೧೭ ಮೈಲಿನ ಮೇಲೆ ಮಡವಳ್ಳಿ ಎಂಬ ಊರಿದೆ. ಅಲ್ಲಿಂದ ಶಿವಸಮುದ್ರಕ್ಕೆ ಹೋಗಿ ಮೂರುಮೈಲಿನ ಮೇಲಿರುವ ಬಿಳಿಗಿರಿರಂಗನ ಬೆಟ್ಟಕ್ಕೆ ಯಾತ್ರಿಕರು ಹೋಗುತ್ತಾರೆ. ಇದೇ ದೇವರಿಗೆ ಶ್ರೀನಿವಾಸನೆಂಬ ಹೆಸರಿದೆ.) (ಯಳಂದೂರು ತಾ. ಮೈಸೂರು ಜಿ.)

**ಕುರುಕುಲಾಂತಕ**=ಕುರುಕುಲನಾಶಕ

**ರಾಜಗೋಪಾಲ:**— (ಮಾಯಾವರಮ್ಮಿನಿಂದ ತಿರುವಾರೂರಿಗೆ ಬರುವಾಗ ನಿಡುಮಂಗಲಮ್ ಎಂಬ ನಿಲ್ದಾಣವಿದೆ. ನಿಡುಮಂಗಲಮ್ಮಿನಿಂದ ಮನ್ನಾರಗುಡಿಯ ವರೆಗೆ ಒಂದು ರೇಲ್ವೆಶಾಖೆಯಿದೆ. ಇದಕ್ಕೆ ದಕ್ಷಿಣದ್ವಾರಕೆ ಯೆಂತಲೂ ಎನ್ನುತ್ತಾರೆ. ಇಲ್ಲಿಯ ಮುಖ್ಯದೇವಾಲಯವು ರಾಜಗೋಪಾಲ ಸ್ವಾಮಿಯದು. ಇದೇ ಮೂರ್ತಿ ಭಗವಾನ್ ವಾಸುದೇವನೆಂಬ ಹೆಸರಿನಿಂದ ಪ್ರಸಿದ್ಧವಾಗಿದ್ದು ಈ ಮೂರ್ತಿಯ ಎಡಬಲದಲ್ಲಿ ಶ್ರೀದೇವಿ-ಭೂದೇವಿಯು ಇದ್ದಾರೆ. ಈ ಕ್ಷೇತ್ರಕ್ಕೆ 'ಮನ್ನಾರು' ಎಂಬ ಹೆಸರೂ ಇದೆ. ಇದೇ ರಾಜಗೋಪಾಲ ಮೂರ್ತಿಯನ್ನು ಪುರಂದರದಾಸರು 'ಮನ್ನಾರು ಕೃಷ್ಣ' ಎಂದು ಕರೆದಿದ್ದಾರೆ.

## ೫೩ನೆಯ ಹಾಡು

೧ **ಮರುಳುಮಾಡು**=ಒಲಿಸಿಕೊಳ್ಳು : ಮೆಚ್ಚು ಮದ್ದು ಮಾಡು

**ಮಾಯಾದೇವಿ**=ಲಕ್ಷ್ಮೀದೇವಿಯ ತಮೋರೂಪ

(ಭಾರತ ತಾತ್ಪರ್ಯನಿರ್ಣಯ ೧-೬)

**ಇರುಳು.......ಬಿಡದಿಪ್ಪಂತೆ** (ದ್ವಾದಶಸ್ತೋತ್ರ ೨-೪)

೨ **ಸರ್ವಸಂಗವ ಬಿಟ್ಟು...ಧರಿಸಿಪ್ಪಂತೆ** (ಭಾರತ ತಾತ್ಪರ್ಯನಿರ್ಣಯ ೧-೨)

**ಪ್ರಳಯಕಾಲದಲ್ಲಿ....ಜಾಣತನದಿ** (ಭಾರತ. ವನ. ೨೦೬)

**ಭುಜಂಗಗಿರಿ**=ಶೇಷಾಚಲ, ಈಗಿನ ತಿರುಪತಿ (ಪದ ೫೨ ನುಡಿ ೩).

**ಆಲುಮೇಲು ಮಂಗಪತಿ** = (ಆಲುಮೇಲುಮಂಗಮ್ಮ ಎಂದರೆ ಪದ್ಮಾವತಿ
ವೆಂಕಟೇಶ.

(ತಿರುಪತಿಯಿಂದ ಮೂರುಮೈಲಿನ ಮೇಲೆ ತಿರುಚ್ಚಾನಾರು ಇದೆ
ಇದಕ್ಕೇ ಮಂಗಾಪಟ್ಟಣ ಎಂಬ ಹೆಸರಿದೆ. ಇಲ್ಲಿಯ ಪದ್ಮಸರೋವರದ
ದಂಡೆಯ ಮೇಲೆ ಪದ್ಮಾವತಿಯ ಮಂದಿರವಿದೆ. ಪದ್ಮಾವತಿಗೆ ತಮಿಳಿನಲ್ಲಿ
ಆಲುಮೇಲು ಮಂಗಮ್ಮನೆಂಬ ಹೆಸರಿದೆ.)

೫ **ಚೊಕ್ಕತನವು** = ಪಾವಿತ್ರ್ಯ.

**ಕಕ್ಕುಲಾತಿ** = ಪ್ರೀತಿ.

## ೫೪ನೆಯ ಹಾಡು

೧ **ಮುದ್ದುಮಾಡು** = ಮರುಳುಮಾಡು

**ಕರಗಳಿಂದಾ......ಹಾಗೆ:—** (ಭಾಗವತ, ೯-೬-೬)

೨ **ಶ್ರುತಿ** = ವೇದ, ಉಪನಿಷತ್ತುಗಳು.

**ಭಾಗವತ;—** ಭಗವಂತನ ಅಥವಾ ಶ್ರೀಹರಿಯ ಮಹಿಮೆಯನ್ನು
ವರ್ಣಿಸುವ ಹನ್ನೆರಡು ಸ್ಕಂಧಗಳುಳ್ಳ ಒಂದು ಮುಖ್ಯ ಪುರಾಣ. ವೇದ
ವ್ಯಾಸರು ಇದನ್ನು ರಚಿಸಿದ್ದು, ಅವರ ಮಗ ಶುಕಾಚಾರ್ಯರು ಪರೀಕ್ಷಿತ್
ರಾಜನಿಗೆ ಅವನ ಶಾಪಸಮಯದ ಅಂತ್ಯಕಾಲದಲ್ಲಿ ಹೇಳಿದರು.

**ಪಂಚರಾತ್ರಾಗಮ:—** ಇದರ ಕರ್ತೃ ಮಹಿದಾಸ. ಇವನು ವಿಷ್ಣುವಿನ
ಅವತಾರವೆಂದು ನಂಬಿಕೆಯಿದೆ. ಇದೊಂದು ವೈಷ್ಣವ ಆಚಾರ-ವಿಚಾರಗಳನ್ನು
ವಿವರಿಸುವ ಪ್ರಮುಖವಾದ ಆಗಮಗ್ರಂಥ.

**ರತಿ** = ಆಸಕ್ತಿ

೩ **ಮಾಹೇಂದ್ರಾವರಜ** = ಮಾಹೇಂದ್ರ + ಅವರಜ = ಇಂದ್ರನ ತಮ್ಮ
ಎಂದರೆ ಉಪೇಂದ್ರ (ಉಪೇಂದ್ರ ಇಂದ್ರಾವರಜಃ—ಅಮರ.) (ಮತ್ಸ್ಯ. ೪೭)

ಕಶ್ಯಪ-ಅದಿತಿಯರ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ. ಇವನು ಇಂದ್ರನ
ತಮ್ಮನಾದ. ಆದುದರಿಂದ ವಾಮನನಿಗೆ 'ಇಂದ್ರಾವರಜ', 'ಉಪೇಂದ್ರ' ಎಂಬ
ಹೆಸರುಗಳು ಬಂದಿವೆ.

೪ ಅಹರಹವು = ನಿತ್ಯವು,

೫ ಮನಸು, ವಾಕ್, ಕಾಯ = ತ್ರಿಕರಣ.

## ೫೫ನೆಯ ಹಾಡು

೧ ಸಿದ್ಧವಾಗಿ = ಅಣಿಯಾಗಿ : ಜಾಗರೂಕತೆಯಿಂದ,

ರಕ್ತಿ = ಪ್ರೀತಿ

೨ ಸಂತೆನೆರಹು = ಗುಂಪುಗೂಡಿಸು

## ೫೬ನೆಯ ಹಾಡು

ಪೂಜೆಯನ್ನು ಆರಂಭಿಸುವ ಮೊದಲು ಇಷ್ಟದೈವತ ಎಂದರೆ ಪರಮಾತ್ಮನನ್ನು ಮನಸಾ ಕರೆಯುವುದೇ ಆವಾಹನ. ಷೋಡಶೋಪಚಾರ ಪೂಜೆಗಳಲ್ಲಿ ಆವಾಹನದಿಂದಲೇ ಮೊದಲಾಗುತ್ತದೆ.

೧ ಕುಂದಣದ = ರತ್ನಕೆಚ್ಚಿದ

೨ ಕೂಟದ = ಒಡನಾಡಿಗಳಾದ

೩ ತಿರಿತಿಂದು ಬಾಹೊ = ಮನೆಮನೆ ತಿರುಗಾಡಿ ತಿಂದು ಬರುವ

೪ ಎಣ್ಣೊರಿಗೆ = ಎಣ್ಣೆಯ + ಹೋರಿಗೆ : ಎಣ್ಣೆಯಲ್ಲಿ ಕರಿದು ಮಾಡಿದ ಒಂದು ಭಕ್ಷ್ಯ.

ಅತಿರಸ = ಅನಾರಸ

ಸದಮಲ = ಸ್ವಚ್ಛವಾದ

ಕಣ್ಣುಮುಚ್ಚೆ = [illegible]

೫ ಮಂಗಳಾತ್ಮಕ = ಕಲ್ಯಾಣರೂಪನಾದವನ

## ೫೭ನೆಯ ಹಾಡು

ಭಕ್ತನು ಪರಮಾತ್ಮನನ್ನು ಶ್ರೀಕೃಷ್ಣನ ಸ್ವರೂಪದಲ್ಲಿ ಆಹ್ವಾನಿಸಿ ಆತನ [illegible] ನ್ನು [illegible]:

೧ **ಯಾದವ**=ಯದುವಂಶದಲ್ಲಿ ಹುಟ್ಟಿದ ಶ್ರೀಕೃಷ್ಣ.
**ಮಧುಸೂದನ**=ಮಧುವೆಂಬ ರಾಕ್ಷಸನನ್ನು ಕೊಂದವ.
(ಭಾರತ ವನ, ೨೦

**ಸೋದರಮಾವನ........ಮಡುಹಿದ**=ಕಂಸಾಸುರನನ್ನು ಕೊಂ
(ಭಾಗವತ ೧೦–೩೬–೪

**ಯಶೋದೆನಂದನ**=ಕೃಷ್ಣ. ಕಂಸನ ತಂಗೆಯಾದ ದೇವಕಿಯು ಹೊ
ಯಲ್ಲಿ ಹುಟ್ಟಿದ್ದರೂ, ಯಶೋದೆಯೇ ಗೋಕುಲದಲ್ಲಿ ಕೃಷ್ಣನನ್ನು ಜೊ
ಮಾಡಿದ್ದರಿಂದ, ಅವಳ ಮಗನೆಂದು ಕರೆಯುವ ಪರಂಪರೆಯಿದೆ.

**ಯಶೋದೆ**=ಗೋಕುಲದ ಅರಸನಾದ ನಂದಗೋಪನ ಹೆಂಡ
ಕೃಷ್ಣನ ಸಾಕುತಾಯಿ. (ಭಾಗವತ ೧–೩)

೨ **ಶಂಖಚಕ್ರವು....... ಹೊಳೆಯುತ**=ತೋಳುಗಳ ಮೇಲೆ ಶಂಖಚ
ಗಳ ಅಂಕಿತವುಳ್ಳ,
**ಆದಿನಾರಾಯಣ**=ವಿಷ್ಣುವಿನ ಮೂಲರೂಪ.
(ಭಾರತ ತಾತ್ಪರ್ಯನಿರ್ಣಯ ಮಂಗಳಶ್ಲೋ

೩ **ಖಗವಾಹನ**=ಗರುಡವಾಹನ.
**ಬಗೆಬಗೆರೂಪ**=ಅನೇಕ ಅವತಾರತಾಳಿದವ.

## ಜಲನೆಯ ಹಾಡು

ಪರಮಾತ್ಮನ ಸಾಲಂಕೃತಸ್ವರೂಪವು ಕಣ್ಣ ಮುಂದೆ ನಿಲ್ಲುವಂತೆ ಆಹ್ವಾನಿಸಿದ್ದಾ

೧ **ಮೂರುತಿಯನು ನಿಲ್ಲಿಸು**=ಪ್ರತ್ಯಕ್ಷನಾಗು

**ತುಲಸಿ**:—ಧರ್ಮಧ್ವಜ ಮತ್ತು ಮಾಧವಿ ಇವರ ಮಗಳು. ವಿಷ್ಣುವಿಗಾ
ತಪಸ್ಸು ಮಾಡಿ ಅವನನ್ನು ಮದುವೆಯಾದಳು, (ದೇವೀಭಾಗವತ ೯, ೧೭–೨
**ವನಮಾಲೆ**—ಕಾಡಿನ ಹೂ-ತುಳಸಿ ಪಲ್ಲವಗಳ ಮಾಲೆ. **ಉಡೆ**—ಉಡುಪು.

೨ **ಶ್ರೀಲಕುಮಿಯು ಉರದಲೊಪ್ಪುವ**=ಲಕ್ಷ್ಮೀದೇವಿ ಪರಮಾ
ತ್ಮನನ್ನು ಎಂದಿಗೂ ಅಗಲದೆ ಅವನ ಎದೆಯ ಮೇಲಿರುವಳು.
(ಭಾರತ ತಾತ್ಪರ್ಯನಿರ್ಣಯ ೧–

## ೫೯ನೆಯ ಹಾಡು

ಇಲ್ಲಿ ದಾಸರು ದೇವರನ್ನು ಹೃದಯದಲ್ಲಿ ವಾಸಿಸುವಂತೆ ಆವಾಹನಮಾಡಿದ್ದಾರೆ.

**ಭವ** = ಜನ್ಮ

೨ **ಪುಣ್ಯ-ಪಾಪಗಳ ನಾನರಿತಿದ್ದು**:—ಹೆಣ್ಣು, ಹೊನ್ನು ಮತ್ತು ಪುಣ್ಯ ಪಾಪಗಳ ಪರಿಣಾಮಗಳನ್ನು ನಾನು ಅರಿತವನಾಗಿದ್ದರೂ ಪಾಪ ಮಾಡಿದೆ.

**ಮದ್ದು** = ಔಷಧಿ, ಉಪಾಯ.

## ೬೦ನೆಯ ಹಾಡು

೧ **ರಂಗ** = ಕರ್ನಾಟಕದಲ್ಲಿ ಹಾಗೂ ದಕ್ಷಿಣದೇಶದಲ್ಲಿ ವಿಷ್ಣುವಿಗೆ ರೂಢ ವಾದ ಹೆಸರು; ಕೃಷ್ಣನು ವಿಷ್ಣುವಿನ ಪೂರ್ಣಾವತಾರವಾದುದರಿಂದ ಅವನಿಗೂ ರಂಗನೆನ್ನುವರು.

**ಪಾಂಡುರಂಗ** = ಇದು ಪಂಢರಪುರದ ವಿಟ್ಠಲನ ಹೆಸರು.

(ಇದರ ವ್ಯುತ್ಪತ್ತಿ ನಿಶ್ಚಿತವಾಗಿಲ್ಲ.)

೨ **ಕಂಚೀವರದ** = (ಪದ ೫೨ ನುಡಿ ೪)

**ತಿಮ್ಮಪ್ಪ** = ತಿರುಮಲೆ (ಶ್ರೀಗಿರಿ-ಶೇಷಾಚಲ)ಯಪ್ಪ; ವೆಂಕಟೇಶ.

## ೬೧ನೆಯ ಹಾಡು

ಇದೊಂದು ಆವಾಹನಕೀರ್ತನ.

೧ **ಶುಭಲಕ್ಷಣವಂತ** = (ಭಾರತ ಅನುಶಾಸನ, ವಿಷ್ಣುಸಹಸ್ರನಾಮ ೮೪-೮೫)

**ಆದಿಮೂಲವಿಗ್ರಹ** = ವಿಶ್ವಕ್ಕೆ ಮೂಲಕಾರಣನಾದ ಮೂರ್ತಿ

**ವಿನೋದಿ** = ವಿನೋದಕ್ಕಾಗಿ ಜಗತ್ತನ್ನು ಸೃಷ್ಟಿಸುವವ

**ಸಾಧುಸಜ್ಜನ ಸತ್ಯಯೋನಿ** = ಸಾಧು-ಸಜ್ಜನರಿಗೆ [illegible] ಉತ್ಪತ್ತಿ- ಕಾರಣ (ಭಾಗವತ ೧೦, ೨-೨೬)

೨ **ರೂಢಿವನಾಳು** = [illegible]

**ರೂಢಿಗೊಡೆಯ** = ಪೃಥ್ವೀಪತಿ

**ಗಾಡಿಕಾರ**=ಸುಂದರ, ಬೆಡಗುಗಾರ

## ೬೨ನೆಯ ಹಾಡು

೧ **ಬ್ರಹ್ಮಾದಿವಂದ್ಯ**=ಬ್ರಹ್ಮ ಮುಂ. ದೇವತೆಗಳಿಂದ ನಮಸ್ಕರಿಸಲ್ಪಡುವ

**ವಸುದೇವ**=ಯಾದವವಂಶದ ಶೂರಸೇನ ರಾಜನ ಮಗ, (ಇವನ ದೇವಕನ ಮಗಳಾದ ದೇವಕೀದೇವಿಯನ್ನು ಮದುವೆಯಾದನು. ಇವ ಎಂಟುಮಂದಿ ಮಕ್ಕಳಲ್ಲಿ ಕೃಷ್ಣನೇ ಕೊನೆಯವನು.)

**ಚೆನ್ನಕೇಶವ**=ಬೇಲೂರು, ಸೋಮನಾಥಪುರ (ಹಾಸನ ಜಿ.) ಗಳಲ್ಲಿ ಇರುವ ಪ್ರಸಿದ್ಧ ದೇವರ ಹೆಸರು.

೩ **ದೊಡ್ಡಪುರ**=ದೊಡ್ಡನಗರ

**ದ್ವಾರಕಿ**= ಈ ನಗರವು ಇಂದಿನ ಸೌರಾಷ್ಟ್ರ (ಗುಜರಾತರಾಜ್ಯ) ದಲ್ಲಿದೆ (ಮುಂಬೈ ಬಾರಾಘೋಡಾ ರೇಲ್ವೆದಾರಿಯಲ್ಲಿರುವ ವಿರಮ್‌ಗಾಂವದಲ್ಲಿ ಗಾಡಿ ಯನ್ನು ಬದಲಿಸಿ, ಸುರೇಂದ್ರನಗರಕ್ಕೆ ಹೋಗಬಹುದು. ಸುರೇಂದ್ರನಗ ಓಖಾ ರೇಲ್ವೆ ಹಾದಿಯಮೇಲೆ ದ್ವಾರಕಾ ನಿಲ್ದಾಣವಿದೆ. ಅಲ್ಲಿಂದ ಊರು ಒಂದು ಮೈಲಾಗುತ್ತದೆ. ಇಲ್ಲಿಯ ಮುಖ್ಯ ದೇವಾಲಯವೆಂದರೆ ರಣಛೋ ಜಿಯ ಮಂದಿರ. ಇದೇ ದ್ವಾರಕಾಧೀಶಮಂದಿರವೆನಿಸಿಕೊಳ್ಳುತ್ತದೆ.)

ಶ್ರೀಆದಿಶಂಕರಾಚಾರ್ಯರು ಇಲ್ಲಿ ಸಾಮವೇದಪೀಠವನ್ನು ಸ್ಥಾಪಿ ದರು. ಇಲ್ಲಿ ಯಾತ್ರಿಕರಿಗೆ ತಪ್ತಮುದ್ರೆಯನ್ನು ಕೊಡುವ ವಿಧಿ ಈಗ ನಿಂತಿದೆ ತಾವು ದ್ವಾರಕೆಯಿಂದ ದೋರಸಮುದ್ರಕ್ಕೆ ಬಂದು ನೆಲೆಸಿದ್ದರಿಂದ, ಯಾದ ವಂಶೀಯರೆಂದು ಹೇಳಿಕೊಳ್ಳುವ ಹೊಯ್ಸಳರು, ತಮ್ಮ ರಾಜಧಾನಿಯನ್ನು (ದೋರಸಮುದ್ರ) ಹಳೆಬೀಡು (ಎಂದರೆ ಸೌರಾಷ್ಟ್ರದಲ್ಲಿಯ ದ್ವಾರಕೆ) ಎಂದು ಕರೆಯತೊಡಗಿದರು.

## ೬೩ನೆಯ ಹಾಡು

೧ **ಮಥುರಾಪುರಿ**:—ಪಶ್ಚಿಮ ರೇಲ್ವೆ, ಮಧ್ಯರೇಲ್ವೆ ಹಾಗು ಆಗ್ನೇಯ ರೇಲ್ವೆ ಇವುಗಳ ಕೂಡಲಿನಲ್ಲಿ ಮಥುರೆ ನೆಲೆಸಿದೆ. ಪಶ್ಚಿಮರೇಲ್ವೆಯ ಸಣ್ಣ ಹಳಿದಾರಿಯ ಮೇಲಿರುವ ಮಥುರಾಛಾವಣಿಯಿಂದ ಊರು

ಪತ್ತಿರದಲ್ಲಿದೆ. ಮಥುರಾ ಜಂಕ್ಶನ್ನಿನಿಂದ ಮಥುರಾ ೧೪ ಮೈಲಾಗುತ್ತದೆ.

ಈ ಪಟ್ಟಣವು ಯಮುನಾನದಿಯ ದಂಡೆಯ ಮೇಲಿದೆ. ಈ ನಗರದಲ್ಲಿ ಯಾದವವಂಶದ ವಜ್ರನಾಭನು ಶ್ರೀಕೃಷ್ಣನ ಜನ್ಮಸ್ಥಳದಲ್ಲಿ ಕಟ್ಟಿಸಿದ ಶ್ರೀಕೇಶವದೇವ ಮಂದಿರವನ್ನು ಕೆಡಹಿ, ಔರಂಗಜೇಬನು ಮಸೀದೆಯನ್ನು ಕಟ್ಟಿಸಿದ್ದಾನೆ.

**ಕರಿಪುರ**=ಹಸ್ತಿನಾವತಿ.

ಈ ಪಟ್ಟಣವು, ಈಗಿನ ದಿಲ್ಲಿಯ ವಾಯವ್ಯಕ್ಕೆ ಗಂಗೆಯ ದಕ್ಷಿಣದಂಡೆಯ ಮೇಲೆ ಇದ್ದಿತೆಂದು ಬಲ್ಲವರ ಅಭಿಪ್ರಾಯವಿದೆ. ಈಗ ಇದು ಉಸುಕಿನಲ್ಲಿ ಮುಗಿದು ಹೋಗಿದೆ. ಇದಕ್ಕೆ ಗಜಪುರ, ಸುಂಡಿಲಾಪುರ, ಮುಂ. ಹೆಸರುಗಳು ಕನ್ನಡಕಾವ್ಯಗಳಲ್ಲಿ ಕಾಣುತ್ತವೆ. ಇದು ಕುರು-ಪಾಂಡವರ ರಾಜಧಾನಿಯಾಗಿತ್ತು.

**ಕುಂತಿ**:-ಇವಳು ಯಾದವಕುಲದ ಶೂರರಾಜನ ಮಗಳು. ವಸುದೇವನ ತಂಗೆ. ಇವಳನ್ನು ಶೂರರಾಜ ತನ್ನ ಸೋದರತ್ತೆಯ ಮಗನಾದ ಕುಂತೀಭೋಜನಿಗೆ ದತ್ತಕ ಕೊಟ್ಟಿದ್ದನು. (ಭಾರತ ಆದಿ ೬೪) ಪೃಥೆಯೆಂಬುದು ಇವಳ ಮೊದಲಿನ ಹೆಸರು. ಕುರುವಂಶದ ಪಾಂಡುರಾಜನೊಂದಿಗೆ ಇವಳ ಮದುವೆಯಾಯಿತು.

**ಕುಂತೀಮಕ್ಕಳು**=ಪಾಂಡವರು

**ಎಂಜಲ ಬಳಿದಿ**=ರಾಜಸೂಯಯಾಗಕಾಲದಲ್ಲಿ ಕೃಷ್ಣನು ಯಜ್ಞಕ್ಕೆ ಬಂದ ಬ್ರಾಹ್ಮಣರ ಪಾದಪ್ರಕ್ಷಾಲನವನ್ನು ಮಾಡಿದನು. (ಭಾರತ ಸಭಾ ೩೫)

ಶ್ರೀಕೃಷ್ಣನು ಅದೇ ಕಾಲದಲ್ಲಿ ಎಂಜಲೆಲೆಯನ್ನು ಬಳಿದನೆಂಬ ವಿಷಯವೂ ಇದೆ.

**ಕಂತುಪಿತ**=ಕಾಮಜನಕ ನೋಡಿರಿ (ಪದ ೪೨, ನುಡಿ ೨)

**ಬಂಡಿಯ ಹೊಡೆದಿ**=ಸಾರಥಿಯಾದಿ

**ಕಾಂತ**=ಸುಂದರ. (ಕಾಂತಾಮ ಕಲ್ಯಾಣ......ಮುಷ್ಣಪಿಜಯ ೧-೧)

೨ **ಗೋಕುಲ**=ಮಥುರೆಯಿಂದ ಆರುಮೈಲಿನ ಮೇಲೆ ಯಮುನೆಯ
ಎರಡನೆಯ ದಂಡೆಯಮೇಲಿದೆ.

**ನಂದಗೋಪ**=ಯಾದವರ ಚಿತ್ರಸೇನನ ಕಡೆಯ ಮಗ. ಇವನು
ಪೂರ್ವಜನ್ಮದಲ್ಲಿ ದ್ರೋಣನೆಂಬ ವಸು. (ಭಾಗವತ ೧೦–೮,೪೮) ಇವನು ವಸು-
ದೇವನ ಆಪ್ತಮಿತ್ರ. ಕೃಷ್ಣನನ್ನು ಇವನು, ಇವನ ಹೆಂಡತಿಯಾದ ಯಶೋದೆ-
ಇವರು ಜೋಕೆಮಾಡಿದರು.

**ಅಪಲಾಪ**=ನಿಂದೆ; ದೂರು.

**ಕರಕರೆ**=ತೊಂದರೆ; ಕಾಟ.

೩ **ದುಷ್ಟಮಾನ**=ಕಂಸ

**ಪಟ್ಟದಾನೆಗಳಿಂದ........ಮೂಢ**=(ಭಾಗವತ ೧೦–೩೬–೪೪)
(ಆನೆಯ ಹೆಸರು ಕುವಲಯಾಪೀಡ)

**ಮಲ್ಲರ ಕೈಯಿಂದ....ಪ್ರಚಂಡ**= (ಭಾಗವತ ೧೦–೪೪) ಚಾಣೂರ
ಮುಷ್ಟಿಕರು ಕಂಸನ ಆಸ್ಥಾನಮಲ್ಲರು,

## ೬೪ನೆಯ ಹಾಡು

ಇಲ್ಲಿ ಮಾನಸಪೂಜೆಯ ಕಾಲದಲ್ಲಿ ಆಹ್ವಾನಿಸಿದ ಇಷ್ಟದೈವತದ ವರ್ಣನ
ವಿಚಾರಗಳಿವೆ.

೧ **ತನುವನೊಪ್ಪಿಸು**:—ಆತ್ಮನಿವೇದನೆ ಮಾಡು. (ಇದು ನವವಿಧ ಭಕ್ತಿ
ಗಳಲ್ಲಿ ಕೊನೆಯದು.)

**ವನಜಜ**=ಕಮಲಜ=ಬ್ರಹ್ಮ

**ಭವ**=ಹರ

೨ **ಲಿಂಗದೇಹ**:—ದೇಹಗಳು ನಾಲ್ಕು ಬಗೆಗಳಲ್ಲಿವೆ:

೧) **ಸ್ಥೂಲದೇಹ**=ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಂದಾದ ಈ
ಶರೀರ (ಜಡಪ್ರಕೃತಿಯಿಂದ ಆನುಗೊಂಡ ದೇಹ)

೨) **ಅನಿರುದ್ಧ ದೇಹ**=ಲಿಂಗೋಪಾದಾನದಿಂದ ಸಿದ್ಧವಾದ ದೇಹ

೩) **ಲಿಂಗದೇಹ**=ಅನಾದಿಲಿಂಗದ ಆವರಕದಿಂದ ಕೂಡಿದ ಜೀವ

೪ ಸ್ವರೂಪದೇಹ=ಜೀವ

(ಆಚಾರ್ಯರ ಛಾಂದೋಗ್ಯಭಾಷ್ಯ)

**ಪವಳಿ**=ದೇವಾಲಯವನ್ನು ಸುತ್ತಿರುವ ಮೊಗಸಾಲೆ (ಪಡುಸಾಲೆ)

**ಅಂಗ**=ದೇಹ

**ಅಂಗನೆ**=ಲಕ್ಷ್ಮಿ

೩ **ತರಳ**=ಚಲಿಸುತ್ತಿರುವ, ಚಂಚಲ

೪ **ಒಡೆಯ...... ಅನಾದಿಕಾಲದಿಂದ**:— ಜೀವ ಮತ್ತು ಪರಮಾತ್ಮ ಇವರಿಬ್ಬರೂ ಅನಾದಿಕಾಲದಿಂದಲೂ ಇದ್ದವರು

೫ **ಬರಿಯಮನೆಯಲ್ಲವು**:-- ಈ ದೇಹದಲ್ಲಿ ನಿನ್ನ ಪರಿವಾರದವರಾದ ತತ್ತ್ವಾಭಿಮಾನಿ ದೇವತೆಗಳು ಇದ್ದಾರೆ; ಹಾಗು ನಿನ್ನ ನಿಯಾಮಕ ರೂಪಗಳೂ ಇಲ್ಲಿ ಇವೆ.

## ೬೫ನೆಯ ಹಾಡು

೧ **ವಿಶ್ವಂಭರಣ**=ವಿಶ್ವವ್ಯಾಪಿ (ಈಶಾವಾಸ್ಯ. ಉಪ. ೧)

**ತೋಯಜಾಂಬಕ**=ಕಮಲಾಕ್ಷ

**ವೇದಗೋಚರ**=ವೇದಗಳನ್ನು ಕಂಡುಹಿಡಿದವನು-ಮತ್ಸ್ಯ

(ಭಾರತ. ವನ. ೧೨೬)

**ಶಂಖಾಸುರ** = (ಪದ್ಮ, ಪು, ಉತ್ತರಖಂಡ ೯೦, ೯೧;) **ಹಯಗ್ರೀವ** (ಭಾಗವತ ೮, ೧೪-೯) ನೆಂಬ ದೈತ್ಯನು ವೇದಗಳನ್ನು ಕದ್ದೊಯ್ಯಲು ಶ್ರೀಹರಿ ಅವನನ್ನು ಕೊಂದು ವೇದಗಳನ್ನು ಉದ್ಧರಿಸಿದನು. ಇದು ಮತ್ಸ್ಯಾವತಾರದ ಕಥೆ).

**ಆದಿಕಚ್ಛಪ**=(ಮೂಲಕೂರ್ಮ) ಕೂರ್ಮಾವತಾರ. ಸಮುದ್ರಮಥನದ ಕಥೆ ನೋಡಿರಿ. (ಭಾಗವತ ೮-೭)

**ಮೋದಸೂಕರ**= ಜಗತ್ತಿಗೆ ಆನಂದವನ್ನು ನೀಡಿದ ವರಾಹಾವತಾರ: ಹಿರಣ್ಯಾಕ್ಷನು ಭೂಮಿಯನ್ನು ಕದ್ದೊಯ್ದು ಸಮುದ್ರದಲ್ಲಿ ಮುಳುಗಲು. ಪರಮಾತ್ಮನು ವರಾಹಾವತಾರ ತಾಳಿ, ಅವನನ್ನು ಕೊಂದು ಭೂಮಿಯನ್ನು ತಿರುಗಿ ತಂದನು. (ಭಾಗವತ ೩-೩)

**ನರಸಿಂಹ:**— ಪರಮಾತ್ಮನ ನಾಲ್ಕನೆಯ ಅವತಾರ. ಹಿರಣ್ಯಕಶಿಪು ತನ್ನ ಮಗನಾದ ಪ್ರಹ್ಲಾದನನ್ನು ಕಾಡಿಸಲು, ತನ್ನ ಭಕ್ತನಾದ ಪ್ರಹ್ಲಾದನನ್ನು ಕಾಯಲು ಪರಮಾತ್ಮನು ನರಸಿಂಹಾವತಾರ ತಾಳಿ ಅವನನ್ನು ಕೊಂದನು.

(ಭಾಗವತ ೭–೮)

**ಸದಯ**= ಭಕ್ತರ ಮೇಲೆ ಕರುಣೆಮಾಡುವವ.

**ವಾಮನ**=ಪರಮಾತ್ಮನ ಅಯ್ದನೆಯ ಅವತಾರ. ಬಲಿಚಕ್ರವರ್ತಿಯ ಅಹಂಕಾರ ಮುರಿಯಲು ಪರಮಾತ್ಮನು ವಾಮನಾವತಾರ ತಾಳಿ, ಬಲಿಚಕ್ರವರ್ತಿಯನ್ನು ರಸಾತಳಕ್ಕೆ ಇಳಿಸಿದನು. (ಭಾಗವತ ೮–೧೭)

**ಭಾರ್ಗವ**=ಪರಶುರಾಮ: ಪರಮಾತ್ಮನ ಆರನೆಯ ಅವತಾರ. ಕ್ಷತ್ರಿಯರ ಪಿಡುಗನ್ನು ನಿರ್ಮೂಲಗೊಳಿಸಲು ಪರಮಾತ್ಮನು ಭಾರ್ಗವ (ಭೃಗುವಂಶದವನಾದ ಜಮದಗ್ನಿಯ ಮಗ) ಅಥವಾ ಪರಶುರಾಮನ ಅವತಾರತಾಳಿದನು.

(ಭಾಗವತ ೯–೧೫)

**ರಾಮ:**—ಪರಮಾತ್ಮನ ಏಳನೆಯ ಅವತಾರ: ತಂದೆಯಾದ ದಶರಥನ ವಚನ ನಡೆಸಿಕೊಡಲು ವನವಾಸ ಕೈಕೊಂಡು, ರಾವಣ ಮುಂ. ರಾಕ್ಷಸರನ್ನು ಕೊಂದು, ವಿಭೀಷಣನಿಗೆ ಪಟ್ಟಗಟ್ಟಿ ಸೀತೆಯನ್ನು ಕರೆದುಕೊಂಡು ತಿರುಗಿ ಅಯೋಧ್ಯೆಗೆ ಬಂದು ರಾಜ್ಯವಾಳಿದನು. (ರಾಮಾಯಣ.)

**ಕೃಷ್ಣ:**—ಪರಮಾತ್ಮನ ಎಂಟನೆಯ ಅವತಾರ: ವಸುದೇವ ದೇವಕಿಯರ ಮಗನಾಗಿ ಪರಮಾತ್ಮನು ಕಂಸ ಮುಂ. ಕೊಂದು ಪಾಂಡವರ ಬೆನ್ನುಕಟ್ಟಿ ದುಷ್ಟರಾದ ಕೌರವರನ್ನು ಸದೆದು ಧರ್ಮಸ್ಥಾಪನೆ ಮಾಡಿದನು.

(ಭಾಗವತ ೧೦ನೆಯ ಸ್ಕಂಧ)

**ಪ್ರೇಮದ ಬುದ್ಧ:**— ಭಗವಂತನ ಒಂಬತ್ತನೆಯ ಅವತಾರ. ಕಲಿಯುಗದ ಆದಿಭಾಗದಲ್ಲಿ ದೇವದ್ವೇಷಿಗಳಲ್ಲಿ ಮೋಹವನ್ನುಂಟುಮಾಡುವದಕ್ಕಾಗಿ, ಕೀಕಟ ದೇಶದ ಮಧ್ಯಗಯಾ ಪ್ರದೇಶದಲ್ಲಿ ಜಿನ ಎಂಬವನ ಮಗನಲ್ಲಿ ಪರಮಾತ್ಮನು ಅವತರಿಸಿದ. (ಭಾಗವತ. ೧–೩)

**ಕಲ್ಕಿ**=ಪರಮಾತ್ಮನ ಪತ್ತನೆಯ ಅವತಾರ. ಕಲಿಯುಗದ ಕೊನೆ ಶಂಬಳಾವತಿ ಎಂಬ ಪಟ್ಟಣದಲ್ಲಿ ಇರುವ ವಿಷ್ಣುಯಶನೆಂಬ ಬ್ರಾಹ್ಮಣನಿ

ಸುಮತಿ ಎಂಬವಳಲ್ಲಿ ಜನಿಸಿ–ಕಲಿಯ ದುಷ್ಟತನದಿಂದ ಜನರೆಲ್ಲ ಬೇಸರಿಯಲು–
ಕಲ್ಕಿಯು ಅವನನ್ನೂ ಅವನ ಸೇನೆಯನ್ನೂ ಕೊಂದು, ತನ್ನ ಮಹಿಮೆಯನ್ನು
ತೋರಿಸಿದನು, (ಭಾಗವತ–೧೨–೨)

೩ **ಪುರುಹೂತ**=ಇಂದ್ರ

## ೬೬ನೆಯ ಹಾಡು

ಇಲ್ಲಿ ದಾಸರು ಪರ್ಯಾಯೋಕ್ತಿಯಿಂದ ತನ್ನ ಮತ್ತು ದೇವರ ಸಂಬಂಧವನ್ನು ಹೇಳಿರುತ್ತಾರೆ.

೧ **ನಾಲ್ವರು**=ನಿರ್ಣಾಯಕ ಜ್ಞಾನಿಗಳು

**ತೊಡರು**=ನ್ಯಾಯ

**ತಾತ**=ತಂದೆ

**ಮುತ್ತಾತ**=ಅಜ್ಜ

ಇದಿಯ ನುಡಿಯಲ್ಲಿ 'ನನ್ನ ಸಂಚಿತ ಪುಣ್ಯಫಲವನ್ನು ನನಗೆ ಯಾಕೆ ದಯೆ ಪಾಲಿಸಲೊಲ್ಲೆ ?' ಎಂದು ಕೇಳುತ್ತಾರೆ.

೨ **ಸಟೆ**=ಸುಳ್ಳು

**ಟೌಳಿ**=ಮೋಸ

**ವಿಬುಧರು**=ದೇವತೆಗಳು

**ನಿನ್ನಕಾಲಿಗೆ...... ಕೊಳ್ಳುವೆ**: ನಿನ್ನನ್ನು ಎಂದಿಗೂ ಬಿಡಲಾರೆ,

**ಸನಕಾದಿ...... ಸಂಬುಗೆಯಿತ್ತೆ** (ಭಾಗವತ ೩, ೧೬-೬)

## ೬೭ನೆಯ ಹಾಡು

ಸನಮಾತ್ಮನ ಮೂರ್ತಿಯನ್ನು ಅಗಾಧ ಕಂಡ ದಾಸರು, ಆ ಮೂರ್ತಿಯು ಪರ್ವತ
ದಲ್ಲಿ ಮಾಡಿದ ಕೀರ್ತನೆಗಳಿವು. (೬೭-೬೮)

೧ **ಲೋಲಾಟ**=ಅಲುಗಾಟ

**ಮುದ್ರಿಕೆ**=ಉಂಗುರ

೨ **ಒಡ್ಡ್ಯಾಣ**=ನಡುಪಟ್ಟಿ

**ಗಗ್ಗರ**=ಗೆಜ್ಜೆಗಳಿದ್ದ ಕಾಲಿನ ಆಭರಣ

## ೩೮ನೆಯ ಹಾಡು

೧ **ಕನಸಿನಲಿ**=ಕಣ್ಣಮುಚ್ಚಿ ಧ್ಯಾನಮಾಡುವಾಗ

**ಕಾಳಿಂಗ:**— ಇವನಿಗೆ ಕಾಲಿಯನೆಂಬ ಹೆಸರಿದೆ. ಈತನು ಕದ್ರು-ಕಶ್ಯಪ ಮಗ. ಸರ್ಪಕುಲದವ. ಗರುಡನ ಭಯದಿಂದ ಕಾಲಿಂದಿಯ (ಯಮುನ ಮಡುವಿನಲ್ಲಿ ಅಡಗಿದ್ದ. ಇವನ ವಿಷದಿಂದ ಗೋಕುಲದ ಗೋವಳರಿಗೆ ತೊಂದರೆಯಾಗಲು, ಶ್ರೀಕೃಷ್ಣನು ಇವನನ್ನು ಹಿಂಸಿಸಿ ರಮಣಕದ್ವೀಪ ಕಳಿಸಿದನು.

(ಈ ದ್ವೀಪವು ಶಾಲ್ಮಲೀದ್ವೀಪದ ಭಾಗ. ಇದನ್ನು ಪ್ರಿಯವ್ರತರಾಜ ಮಗನಾದ ಯಜ್ಞಬಾಹುವೆಂಬವನು ಆಳುತ್ತಿದ್ದ.) (ಭಾಗವತ ೧೦-೧೬)

**ತಾಳಗತಿಯಿಂದ**=ತಾಳಲಯಕ್ಕೆಹೊಂದಿ.

೨ **ದ್ವಾದಶನಾಮ:**—ಹೊಟ್ಟೆಯ ಮೇಲೆ ಮೂರು; ಎದೆಯ ಮೇ ಒಂದು; ಬಲಪೊಲೆಯ ಮೇಲೆ ಒಂದು; ರಟ್ಟೆಗಳಮೇಲೆ ಎರಡ ಬೆನ್ನುಹುರಿಯ ಮೇಲೆ ಒಂದು; ಕೊರಳೊಳಗೆ— ಎಡ ಬಲ ಮತ್ತ ನಡುವೆ—ಹೀಗೆ ಮೂರು; ಹಣೆಯ ಮೇಲೆ ಒಂದು.

**ವೈಜಯಂತಿ**=ವಿಷ್ಣುವಿನ ಕೊರಳಲ್ಲಿರುವ ಮಾಲೆ.

೩ **ಮುಂಗಡೆಕರ**=ಕೈಯ ಮಣಿಕಟ್ಟು

**ನಳಿ**=ಉದ್ದವಾದ

೪ **ಬಣ್ಣದ ತುಟಿ**=ಕೆಂದುಟಿ.

**ಭಾವರಚನೆಯ**=ಭಾವವನ್ನು ಪ್ರಕಟಿಸುವ

**ಕಂಸ:**— ಯದುವಂಶದ ಉಗ್ರಸೇನನ ಮಗ; ದೇವಕಿಯ ಅಣ್ಣ. ಪೂರ್ವಜನ್ಮದಲ್ಲಿ ಇವನು ಕಾಲನೇಮಿ ಎಂಬ ರಾಕ್ಷಸನು. ಇವನು ಜರಾಸಂಧನ ಮಕ್ಕಳಾದ ಅಸ್ತಿ-ಪ್ರಾಸ್ತಿಯರನ್ನು ಮದುವೆಯಾಗಿದ್ದನು. ವಸುದೇವನು ಇವನ ಪ್ರಧಾನಿ. ವಸುದೇವ-ದೇವಕಿಯರ ಎಂಟನೆಯ ಸಂತಾನದಿಂದ ಮರಣ ಬರುವುದೆಂಬುದನ್ನು ತಿಳಿದು, ಅವರನ್ನು ಸೆರೆಯಲ್ಲಿಟ್ಟನು. ಕೊನೆಗೆ ಇವನ ಲೋಕಪೀಡನೆಗಾಗಿ ಕೃಷ್ಣನು ಇವನನ್ನು ಕೊಂದನು. (ಭಾಗವತ ೧೦, ೪೪-೪೦)

**ಕಂಸಾರಿ**= **ಕೃಷ್ಣ.**

**ವರತುಂಗಭದ್ರದಿ ಮೆರೆವನ:**—ಹಂಪೆಯಲ್ಲಿರುವ ಕೃಷ್ಣನ ಗುಡಿ.

**ಅಂಗಜಪಿತ**=ಕಾಮನತಂದೆ; ಕೃಷ್ಣ

**ಶೃಂಗಾರಮೂರುತಿ**=ಚೆಲುವಾದ ಮೂರುತಿ

## ೬೯ನೆಯ ಹಾಡು

(೬೯–೭೨) ಈ ಹಾಡುಗಳಲ್ಲಿ ದೇವರ ಆಗಮನದ ವರ್ಣನೆಯಿದೆ.

**ಉರಗಶಯನ**=ಶೇಷಶಾಯಿ

**ನರ**=ಅರ್ಜುನ

**ಮಂದರೋದ್ಧಾರ** ಕೂರ್ಮಾವತಾರ

**ಮಾ**=ಲಕ್ಷ್ಮಿ

**ವೃಂದಾವನ** :— ಮಥುರಾ ಭಾಗದಿಂದ ಮಥುರಾ ಜಂಕ್ಷನ್ನಿನ ಬಳಿಯಿಂದ ಹಾಯ್ದು ಚಿಕ್ಕ ರೇಲ್ವೆ ದಾರಿ ವೃಂದಾವನಕ್ಕೆ ಹೋಗುತ್ತದೆ. ಇದು ರಾಧಾಕೃಷ್ಣರ ವಿಹಾರಭೂಮಿಯಾಗಿತ್ತು.

**ನಕ್ರಹರ**= ಮೊಸಳೆಯನ್ನು ಕೊಂದವ: ಶ್ರೀಹರಿ.

(ಗಜೇಂದ್ರಮೋಕ್ಷದ ಕತೆ) (ಭಾಗ ೨೫ ಅ.೩ ೧)

**ಅಕ್ರೂರ:**—ಯದುಕುಲದ ಶ್ವಫಲ್ಕ ಮತ್ತು ಗಾಂಧಿನಿ ಇವರ ಮಗ
ಕಂಸನ ಎಂಟು ಜನ ಮಂತ್ರಿಗಳಲ್ಲಿ ಒಬ್ಬ. ಕೃಷ್ಣನ ಭಕ್ತ. ಕಂಸನ ಅಪ್ಪಣೆ
ಯಂತೆ ಬಲರಾಮ-ಕೃಷ್ಣರನ್ನು ಮಥುರೆಗೆ ಕರೆತರುವಾಗ, ಯಮುನೆಯಲ್ಲಿ
ಸ್ನಾನ ಮಾಡುತ್ತಿದ್ದನು. ಆಗ ಕೃಷ್ಣನ ದಿವ್ಯರೂಪದ ದರ್ಶನವಾಯಿತು.

**ತ್ರಿವಿಕ್ರಮ**=ವಾಮನಾವತಾರ.

೪ **ಲಕ್ಷ್ಮಣಾಗ್ರಜ**=ರಾಮ

**ಅಕ್ಷಯ ಫಲದ**=ಹರಿಹಿಂಗದ ಫಲ ಕೊಡುವವ

೫ **ನಿಗಮಗೋಚರ:**— ವೇದಗಳಿಂದ ಮಾತ್ರವೇ ಅವನ ಜ್ಞಾನವು
ಸಿಕ್ಕುವುದು.

**ನಿತ್ಯತೃಪ್ತ**= (ನಾನವಾಪ್ತಮವಾಪ್ತವ್ಯಂ–ಗೀತಾ ೩–೨೨)

## ೭೦ನೆಯ ಹಾಡು

ತಿರುಪತಿಯ ವೆಂಕಟೇಶನನ್ನು ಕಂಡಾಗ, ಸಂತೋಷ–ಸಂಭ್ರಮಭಾವದಲ್ಲಿ
ದಾಸರಾಯರು ಹಾಡಿದ ಗೀತಪ್ರಬಂಧವಿದು.

೧ **ಇಂದುಧರ**=ಶಿವ.

**ಜಯ-ವಿಜಯರು**=ವಿಷ್ಣುವಿನ ದ್ವಾರಪಾಲಕರು; ಸನಕ–ಸನಂದನರು
ಶ್ರೀಹರಿಯ ದರ್ಶನಕ್ಕೆಂದು ಬಂದಾಗ, ಅವರನ್ನು ಇವರು ತಡೆಯಲು, ರಾಕ್ಷಸ
ಯೋನಿಯಲ್ಲಿ ಹುಟ್ಟಿರೆಂದು ಅವರು ಶಾಪಕೊಟ್ಟರು. (ಭಾಗವತ. ೭)

**ವಾರವಾರಕೆ** = ಶುಕ್ರವಾರಕ್ಕೊಮ್ಮೆ **ಹಾರಮಕುಟಾಭರಣ**
**ಕುಂಡಲ**=ಆಕಾಶರಾಜನು ಕೊಟ್ಟ ಈ ಆಭರಣಗಳನ್ನು ಶುಕ್ರವಾರಕೊಮ್ಮೆ
ದೇವರಿಗೆ ತೊಡಿಸುವರು. (ಭವಿಷ್ಯೋತ್ತರ;ವೆಂ. ಮ.)

**ಭುಜಕೇಯೂರ**=ಭುಜಕೀರ್ತಿ

**ಕರವೀರ**=ಕೆಂಪುಕಣಗಿಲೆ

**ಕಲ್ಹಾರ**=ತಾವರೆಯಜಾತಿಯ ಕಿರಿಯ ಹೂ

೨ **ಕೈವಲ್ಯಸ್ಥಾನ**=ಮುಕ್ತಿಸ್ಥಾನ (ವೈಕುಂಠ).

**ಶೇಷಾದ್ರಿ**=ತಿರುಪತಿ

**ಖುಲ್ಲ**=ಕ್ಷುಲ್ಲಕರು; ನೀಚರು.

**ಮಲ್ಲಮರ್ದನ**=ಚಾಣೂರಮುಷ್ಟಿಕರನ್ನು ಕೊಂದವ.

**ಮಾತುಳಾಂತಕ**=ಸೋದರಮಾವನ ವೈರಿ.

**ಫಲ್ಗುಣ**=ಅರ್ಜುನ.

**ಮಾಂಗಲ್ಯಹೃದಯುವ ಮಾಡಿ** = ಸೃಷ್ಟಿಯಲ್ಲಿ ಕಲ್ಯಾಣಕರವಾದ ಭಾವನೆಗಳನ್ನು ಹುಟ್ಟಿಸಿ.

೩ **ಕೌಸ್ತುಭ**=ದೇವದಾನವರು ಅಮೃತಮಥನಮಾಡುವಾಗ ಹುಟ್ಟಿದ ಒಂದು ರತ್ನ. ಅದನ್ನು ದೇವತೆಗಳು ಶ್ರೀಹರಿಗೆ ಸಮರ್ಪಿಸಿದರು.

**ಸರಿಗೆ**=ಕೊರಳಿನ ಆಭರಣ

**ಸುಕಂಧರ**=ಅಂದವಾದ ಕೊರಳು

**ಸುದರ್ಶನ**=ವಿಷ್ಣುವಿನ ಚಕ್ರದ ಹೆಸರು.

**ದರ**=ಶಂಖ

**ದಾನಶೂರ**=ಬೇಡಿದ ವರಗಳನ್ನು ಭಕ್ತರಿಗೆ ಕೊಡುವವ.

**ವಿಧಿಭವಾದ್ಯರ ಪೊರೆವ ದಾತನು**=ಚತುರ್ಮುಖ ಬ್ರಹ್ಮ ಮತ್ತು ರುದ್ರದೇವರನ್ನು ರಕ್ಷಿಸುವವನು.

**ತುದಿಮೊದಲು ಮಧ್ಯವು ವಿರಹಿತನು**:— ನಾಂತಂ ನಮಧ್ಯಂ ನಪುನಸ್ತವಾದಿಂ ಪಶ್ಯಾಮಿ... (ಭಗವದ್ಗೀತೆ ೧೧–೧೬)

**ಉದುಭವ**=ಉದ್ಭವ=ಸೃಷ್ಟಿ

**ತ್ರಿದಶ**=ಸುರರು

**ತ್ರಿಭುವನ**=ಸ್ವರ್ಗ, ಮರ್ತ್ಯ, ಪಾತಾಳ.

**ಸ್ವಾಮಿತೀರ್ಥ**=ಸ್ವಾಮಿ ಪುಷ್ಕರಿಣಿ:— ವೆಂಕಟರಮಣನ ಗುಡಿಯ ಬಳಿಯಲ್ಲಿಯೇ ಎಡಕ್ಕೆ ಸ್ವಾಮಿ ಪುಷ್ಕರಿಣಿ ಎಂಬ ಸರೋವರವಿದೆ. ವರಾಹಾವತಾರದ ಕಾಲದಲ್ಲಿ, ಶ್ರೀವರಾಹದೇವರ ಆಜ್ಞೆಯಂತೆ ಗರುಡನು ಈ ಪುಷ್ಕರಿಣಿಯನ್ನು ವರಾಹದೇವರ ಸ್ನಾನಕ್ಕಾಗಿ ವೈಕುಂಠದಿಂದ ತಂದನು.

(ಭವಿಷ್ಯೋತ್ತರ ವೆಂ. ಮ.)

**ಬ್ರಹ್ಮೋತ್ಸವ:**— ತಿರುಪತಿಯಲ್ಲಿ ಭಾದ್ರಪದ ಶುಕ್ಲಪಕ್ಷದಲ್ಲಿ ಪ್ರಾರಂಭವಾಗಿ ಹತ್ತು ದಿನಗಳವರೆಗೆ ನಡೆಯುವ ಒಂದು ಪ್ರಮುಖ ಉತ್ಸವ. ತೊಂಡಮಾನನು (ಆಕಾಶರಾಜನ ತಮ್ಮ) ಈ ಬ್ರಹ್ಮೋತ್ಸವವನ್ನು ಆರಂಭಿಸಿದನೆಂದು ಪುರಾಣಗಳು ಹೇಳುತ್ತವೆ.

## ಉತ್ಸವಕ್ರಮ

| | ಹಗಲು | ರಾತ್ರಿ |
|---|---|---|
| ೧ | ಧ್ವಜಾರೋಹಣ | ಅಂಕುರಾರ್ಪಣ, ಸೇನಾಧಿಪತಿ ಉತ್ಸವ |
| ೨ | ವಜ್ರಕವಚಾಭರಣದಿಂದ ಕೂಡಿದ ಬಂಗಾರದ ತಿರುಚ್ಚಿ | ಬಂಗಾರದ ದೊಡ್ಡ ಶೇಷವಾಹನ |
| ೩ | ಬೆಳ್ಳಿಯ ಚಿಕ್ಕ ಶೇಷವಾಹನ | ಬಂಗಾರದ ಹಂಸವಾಹನ |
| ೪ | ಸಿಂಹವಾಹನ | ಮುತ್ತಿನ ಮಂಟಪ |
| ೫ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| ೬ | ಪಲ್ಲಕ್ಕಿಸೇವೆ, ಮೋಹಿನೀ ಅವತಾರ | ಲಕ್ಷ್ಮೀಹಾರಮಕರಕಂಟಿ ಗರುಡ ಸೇವೆ |
| ೭ | ಹನುಮಂತವಾಹನ | ಗಜವಾಹನ |
| ೮ | ಸೂರ್ಯಪ್ರಭಾವಾಹನ | ಚಂದ್ರಪ್ರಭಾವಾಹನ |
| ೯ | ರಥೋತ್ಸವ | ಅಶ್ವವಾಹನ |
| ೧೦ | ಪಲ್ಲಕ್ಕಿ ಉತ್ಸವ | ಅವರೋಹಣ ತಿರುಚ್ಚಿ |

ಇದಲ್ಲದೆ ಗರುಡೋತ್ಸವ ಮುಂ. ಉತ್ಸವಗಳೂ ನಡೆಯುತ್ತವೆ.

## ೭೧ನೆಯ ಹಾಡು

೧ **ಸುಕೃತ**=ಪುಣ್ಯ

**ನೊಸಲ**=ಹಣೆಯಲ್ಲಿರುವ

**ಥಾಳ**=ಹೊಳಪು

**ಅಮೃತಸಾರರಸ**=ಅಮೃತದ ತಿರುಳಿನ ರಸದಂತಿರುವ

**ಸೊಬಗ**=ಸುಂದರ

೨ **ಕೋನೇರಿ**=ಸ್ವಾಮಿಪುಷ್ಕರಿಣಿ

**ಗಿರಿವಾಸ**=ಶೇಷಾದ್ರಿಯಲ್ಲಿರುವವ

**ಒಂಟೆ**=ಬಾವುಲಿ (ಕಿವಿಯ ಆಭರಣ)

೩ **ಪನ್ನಗಗಿರಿ**=ಶೇಷಾಚಲ

**ಹಾವುಗೆ**=ಪಾದುಕೆ

**ನೇಲುಗಿರಿವಾಸ**=ತಿರುಪತಿ(ತಿರುಮಲೆ)ಯಲ್ಲಿ ಇರುವವ.

**ಎರಡೇಳು**=ಹದಿನಾಲ್ಕು

## ೭೨ನೆಯ ಹಾಡು

೧ **ಧರಣಿ**=ಭೂದೇವಿ.

**ವಿಹಂಗರಥ**=ಗರುಡನೇ ವಾಹನವಾದವ

**ಅಚ್ಛಿನ್ನ**=ಪರಿಪೂರ್ಣ

೨ **ಸ್ಥೂಲಸೂಕ್ಷ್ಮದೊಳಗಿರುವವನು:—**

ಏಕೋದೇವಃ ಸರ್ವಭೂತೇಷು ಗೂಢಃ
ಸರ್ವವ್ಯಾಪಿಸ್ಸರ್ವಭೂತಾಂತರಾತ್ಮಾ (ಶ್ವೇತಾಶ್ವತರ)

**ಸಾಕ್ಷಿಭೂತನಾದ ಸರ್ವೇಶ್ವರ:—**

ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ
ಸಾಕ್ಷಿ ಚೇತಾ ಕೇವಲೋನಿರ್ಗುಣಶ್ಚ ॥ (ಶ್ವೇತಾಶ್ವತರ ೬)

೩ **ಸಾಂದೀಪನ** (ಸಾಂದೀಪನಿ):—ಕಾಶ್ಯಕುಲದ ಬ್ರಾಹ್ಮಣ. ಅವಂತಿಯಲ್ಲಿ ವಾಸವಾಗಿದ್ದ, ಬಲರಾಮ, ಕೃಷ್ಣ, ಸುದಾಮರ ಗುರು, ವಿದ್ಯೆ ಕಲಿಯುವುದಾದ ಬಳಿಕ ಗುರುದಕ್ಷಿಣೆ ಏನು ಕೊಡಬೇಕೆಂದು ಕೇಳಿದಾಗ ತೀರಿದ ತನ್ನ ಮಗನನ್ನು ತರಬೇಕೆಂದು ಗುರು ಶ್ರೀಕೃಷ್ಣನಿಗೆ ಹೇಳಿದ ಸಮುದ್ರ ಪ್ರವೇಶಿಸಿ, ಗುರುಪುತ್ರನನ್ನು ಕದ್ದ ಪಂಚಜನನೆಂಬ ರಾಕ್ಷಸನನ್ನು ಕೊಂದು. ಅಲ್ಲಿ ಅವನನ್ನು ಕಾಣದೆ ಯಮಲೋಕಕ್ಕೆ ಹೋಗಿ ಸಾಂದೀಪನ ಮಗನನ್ನು ತಂದು ಒಪ್ಪಿಸಿದರು. (ಭಾಗವತ ೧೦)

**ಸಿಂಧುಶಯನ**=ಕ್ಷೀರಸಾಗರಶಯನ

**ಆನಂದಮೂರುತಿ**= (ಆನಂದಂ ಬ್ರಹ್ಮೇತಿ ವ್ಯಜಾನಾತ್—ತೈತ್ತಿರೀಯ ಭೃಗುವಲ್ಲಿ-೬ನೆಯ ಅನುವಾಕ)

## ೭೩ನೆಯ ಹಾಡು

(೭೩–೮೦ ಈ ಹಾಡುಗಳಲ್ಲಿ ದಾಸರು ಧ್ಯಾನದಲ್ಲಿ ಕಂಡ ಪರಮಾತ್ಮನನ್ನು ಕೊಂಡಾಡಿ ಹಾಡಿದ್ದಾರೆ.)

**ಪುಂಡರೀಕ**=ಬಿಳಿಯ ಕಮಲ

**ಪಾಂಡವಪಕ್ಷ**=ಪಾಂಡವರ ಬೆನ್ನು ಕಟ್ಟಿದವ

೨ **ಯಾದವಕುಲಜ**=ಕೃಷ್ಣ

**ವೇದಾಂತವೇದ್ಯ**=ಉಪನಿಷದಾದಿಗಳಿಂದ ತಿಳಿಯತಕ್ಕವ
(ವೇದಾಂತ ವೇದ್ಯೋಹರಿಃ)

೩ **ಶರಣಾಗತ**=ಭಕ್ತ

**ವಜ್ರಪಂಜರ**= (ವಜ್ರದಂತೆ ಇರುವ ರಕ್ಷಣಸ್ಥಾನ) ತಪ್ಪದೆ ಸಂರಕ್ಷಿಸುವವ.

**ಬೇಲೂರ ಚೆನ್ನಿಗನ**= (ಪದ ೫೨ ನುಡಿ ೨)

## ೭೪ನೆಯ ಹಾಡು

**ಕಾರಣಾತ್ಮಕ**= ವಿಶ್ವಕ್ಕೆ ಕಾರಣನಾದವ (ಓಂ ಜನ್ಮಾದ್ಯಸ್ಯ ಯತಃ-ಬ್ರಹ್ಮ ಸೂತ್ರ ೧-೧) (ಯತೋವಾ ಇಮಾನಿ ಜಾಯಂತೇ—ತೈತ್ತಿರೀಯೋ)

**ತಿರುಮಣಿ= ಪವಿತ್ರವಾದ ರತ್ನ (ತಿರು = ಶ್ರೀ)**

**ಭೂರಿದೈವದ ಗಂಡ**= ದೇವೋತ್ತಮ

**ತಪ್ಪುಗಾಣಿಕೆ**= ತಪ್ಪುದಂಡ

**ಉಪ್ಪುವೋಗರ**= ಚಿತ್ರಾನ್ನ

**ಉಚಿತ**= ಪ್ರಕ್ಯಟೆಯಾಗಿ

**ಒಪ್ಪ**= ಉಚಿತರೀತಿ

**ನಾರದ:**— ಬ್ರಹ್ಮನ ಹತ್ತು ಮಂದಿ ಮಾನಸಪುತ್ರರಲ್ಲಿ ಕೊನೆಯವ. ಅವನ ತೊಡೆಯಿಂದ ಹುಟ್ಟಿದನು. ಪರಮೇಶ್ವರನ ಶಾಪದಿಂದ ಮರಳಿ ಜನ್ಮ ಪಡೆದ. ಇವನು ದೇವ ಋಷಿ. ತ್ರಿಲೋಕಸಂಚಾರಿಯೆಂಬ ಹೆಸರು ಈತನಿಗೆ ಇದೆ.

**ಕಿನ್ನರ:**— ಕಶ್ಯಪ-ಸುರಸೆಯರ ಮಕ್ಕಳು. ದೇಹ ಮನುಷ್ಯರಂತೆಯೂ ಮುಖ ಕುದುರೆಯಂತೆಯೂ ಇರುವ ಒಂದು ಬಗೆಯ ದೇವಯೋನಿವಿಶೇಷ. ಇವರು ಕುಬೇರನ ಪ್ರಜೆಗಳು. ಸಂಗೀತನಿಪುಣರು.

**ಶರಧಿಶಯನ**= ಕ್ಷೀರಸಾಗರಶಯನ

## ೭೫ನೆಯ ಹಾಡು

**ಕಂಚಿ**= (ಪದ ೫೩), ನುಡಿ ೪

**ಕರಿರಾಜವರದ**= ಗಜೇಂದ್ರನನ್ನು ಉದ್ಧಾರಮಾಡಿದವನು.

**ಕರಿರಾಜ:**— ಪಾಂಡ್ಯದೇಶದ ಅರಸು ಇಂದ್ರದ್ಯುಮ್ನ. ಇವನ
ಮಹಾ ವಿಷ್ಣುಭಕ್ತ. ಅಗಸ್ತ್ಯಋಷಿಯ ಶಾಪದಿಂದ ಗಜನಾಗಿ ಹುಟ್ಟಿ ಮೊಸಳೆಯ
ಬಾಯಿಗೆ ಸಿಕ್ಕು, ಪರಮಾತ್ಮನ ಕೃಪೆಯಿಂದ ಪಾರಾದನು. ಈ ಗಜರಾಜನನ್ನು
ಹಿಡಿದ ಮೊಸಳೆ 'ಹೂಹೂ' ಎಂಬ ಶಾಪಗ್ರಸ್ತ ಗಂಧರ್ವ. (ಭಾಗವತ ೮–೪)

**ಸನಕಾದಿಗಳು**=ಇವರು ಸೃಷ್ಟಿಯ ಆದಿಯಿಂದ ಇರುವ ಬ್ರಹ್ಮ
ಮಾನಸಪುತ್ರರು. ಇವರು ನಾಲ್ಕುಮಂದಿ, ಸನಕ, ಸನಂದನ, ಸನತ್ಸುಜಾತ
ಸನತ್ಕುಮಾರ. ಚಿಕ್ಕಮಕ್ಕಳ ರೂಪದವರು; ಮಹಾಜ್ಞಾನಿಗಳು.

(ಭಾ. ೩–೧೫, ೧೬

೨ **ಪೆರೆನೊಸಲು**=ಅರ್ಧಚಂದ್ರನಂತೆ ಹಣೆ

**ಅಭಯಹಸ್ತ**=ಇದೊಂದು ಹಸ್ತಮುದ್ರೆ. ಬೆರಳುಗಳನ್ನು ಕೂಡಿ
ಹಸ್ತದಿಂದ ನಿರ್ಭಯತೆಯನ್ನು ಸೂಚಿಸುವುದು.

೩ **ಲೋಲ**= ಅಲುಗಾಡುವ

**ಮಕರಕುಂಡಲ**=ಮೊಸಳೆಯ ಆಕಾರದ ಕುಂಡಲ

**ಕಮಲಾಲಯಾ**=ಲಕ್ಷ್ಮಿ

೪ **ಹವ್ಯವಾಹನ**=ಬೆಂಕಿ (ಅಗ್ನಿ)

**ಮುನಿಮಾನಸಹಂಸ**= (ಭಾಗವತ ೧೧/೨–೫೬)

೫ **ದೇವಗಂಗೆ**=ಭಾಗೀರಥಿ

**ತುಂಗಚತುರ್ಭುಜ........ಅಂಗಾಲಿಲೊಪ್ಪುವನ:**—

ಸಂಚಿಂತಯೇತ್ ಭಗವತಶ್ಚರಣಾರವಿಂದಂ
ವಜ್ರಾಂಕುಶಧ್ವಜ ಸರೋರುಹಲಾಂಛನಾಢ್ಯಂ ॥ (ಭಾಗವತ)

**ಗಂಗೆಯ ಪಿತ**=(ಭಾಗವತ೫/೨೬–೧.)

## ೭೬ನೆಯ ಹಾಡು

೧ **ಮನ್ನಾರು**—(ಪದ ೫೨, ನುಡಿ ೫)

**ದಕ್ಷಿಣದ ದ್ವಾರಕಿ**= ಮನ್ನಾರುಗುಡಿ

**ದೇವಕಿ:**— ಉಗ್ರಸೇನನ ತಮ್ಮನಾದ ದೇವಕನ ಮಗಳು. ಕಂಸನ ತಂಗೆ. ವಸುದೇವನ ಹೆಂಡತಿ, ಕೃಷ್ಣನ ತಾಯಿ.

**ಸಾಸಿರನಾಮ:**— ವಿಷ್ಣುವಿಗೆ ಸಾವಿರ ಹೆಸರುಗಳಿವೆ.

(ವಿಷ್ಣು ಸಹಸ್ರನಾಮ. ಭಾರತ ಅನುಶಾಸನ)

## ೨೭ನೆಯ ಹಾಡು

**ಶಿಖಾಮಣಿ** = ತಲೆಯಲ್ಲಿ ಧರಿಸುವ ರತ್ನ. ಶ್ರೇಷ್ಠ

**ಕೇಸಕ್ಕಿ** = ಕೆಂಪುಗೆರೆಗಳುಳ್ಳ ಅಕ್ಕಿ.

**ದಾಸರು** = ಭಕ್ತರು. (ಮದ್ಭಕ್ತಾ ಯತ್ರಗಾಯಂತಿ ತತ್ರ ತಿಷ್ಠಾಮಿ ನಾರದ)

**ಗಂಟೆನೊಲ್ಲಿ:**— ದಪ್ಪನೂಲಿನ ಹಚ್ಚಡದಂತಹ ಒಲ್ಲಿ

**ಹೊರಹೊಂಟು ಹೋಗಿ...... ಬೇಟೆಯಾಡುತಲಿಹನ:**—

(ಶ್ರೀವೆಂಕಟೇಶನು ಬೇಟೆಯಾಡಲು ಹೋದ ಕಥೆ, ಭವಿಷ್ಯೋತ್ತರ ಪುರಾಣಾಂತರ್ಗತ ವೆಂಕಟೇಶ ಮಾಹಾತ್ಮ್ಯದಲ್ಲಿ ಬರುವುದು.)

**ಗಂಟೆನಾದಕೆ ಒಲಿಯುವನ:**— ತಿರುಪತಿಯ ಗುಡಿಯಲ್ಲಿ ಎರಡು ದೊಡ್ಡ ಗಂಟೆಗಳಿವೆ. ಪೂಜೆಯ ವೇಳೆಗೆ ಇವನ್ನು ತಪ್ಪದೆ ಬಾರಿಸುತ್ತಾರೆ. ಒಂದು ಗಂಟೆ ಗೋವಿಂದನೆಂದೂ ಇನ್ನೊಂದು ನಾರಾಯಣನೆಂದೂ ನುಡಿಯುತ್ತದೆಂದು ಭಕ್ತರು ಹೇಳುತ್ತಾರೆ.

**ಭೂವೈಕುಂಠ** = ತಿರುಪತಿ

**ಭೂವೈಕುಂಠ...ತೋರಿದವನ:**— ಭೂಮುದ್ರಾ ಅಥವಾ ಧಾತ್ರೀಮುದ್ರಾ (ಪದ ೪೧ ನುಡಿ ೬)

## ೨೮ನೆಯ ಹಾಡು

ಈ ಹಾಡಿನಲ್ಲಿ ತಿರುಪತಿಯ ದೇವಸ್ಥಾನದ ವರ್ಣನೆಯೊಂದಿಗೆ ವೆಂಕಟೇಶನ ಮಾಹಾತ್ಮ್ಯವೂ ವರ್ಣಿಸಲ್ಪಟ್ಟಿದೆ.

**ಸ್ವಾಮಿಪುಷ್ಕರಿಣಿ** (ಪದ ೭ ನುಡಿ ೪)

**ವರಾಹದೇವರು** = ಸ್ವಾಮಿಪುಷ್ಕರಿಣಿಯ ಪಶ್ಚಿಮಕ್ಕೆ ಇರುವ ಗು
ಯಲ್ಲಿ, ವರಾಹದೇವನು ಇದ್ದಾನೆ. ಇಲ್ಲಿಯ ನಿಯಮದಂತೆ ಮೊದಲ
ವರಾಹದೇವನ ದರ್ಶನಮಾಡಿಕೊಂಡು ಬಳಿಕ ವೆಂಕಟರಮಣನ ದರ್ಶನಮಾ
ಬೇಕಾಗುವುದು,

**ಶ್ರೀಸ್ವಾಮಿಮಹಾದ್ವಾರ** = ಗುಡಿಯ ಒಂದನೆಯ ಮಹಾದ್ವಾರ
**ಶರೀರವನು ಈಡಾಡಿ** = ದಂಡಪ್ರಣಾಮ ಮಾಡಿ
**ಗರುಡಗಂಬ** = ಮಹಾದ್ವಾರ ದಾಟಿದ ಬಳಿಕ ಗರುಡಗಂಬವು ಕಾಣುತ್ತದೆ

೨ **ಕೃಷ್ಣಾಜಿನದವರು** = ಕೃಷ್ಣಾಜಿನದ ಚಾಟಿಯನ್ನು ಪ್ರಯೋಗಿ
ಗದ್ದಲವನ್ನು ನಿಯಂತ್ರಿಸುವ ಸೇವಕರು. ಇವರು ಗರ್ಭಗುಡಿಯ
ಮುಂದಿರುವ ನವರಂಗದಲ್ಲಿ ಇರುತ್ತಿದ್ದರು.
**ತಲೆಚಿಟ್ಟಿಟ್ಟು** = ಪೂರ್ಣಬೇಸತ್ತು
**ಕಟ್ಟಾಂಜನಕೆ** = ಕಟಾಂಜನಕ್ಕೆ
**ಬೆಟ್ಟದಧಿಪತಿ** = ಶೇಷಾಚಲದ ಒಡೆಯ

೩ **ಶ್ರೀವತ್ಸ** = ವಿಷ್ಣುವಿನ ಬಲಗಡೆಯ ಎದೆಯಮೇಲಿನ ಲಕ್ಷ್ಮೀದೇವಿಯ
ಗುರುತು. (ಶ್ರೀವತ್ಸಾಂಕಿತ)
**ನಿರುಪ** = (ನಿರುಪಮ ಶಬ್ದದ ಸಂಕ್ಷೇಪರೂಪ) ಎಣೆಯಿಲ್ಲದ.

೪ **ಅಕ್ಷತ್ರಯ** = ಶಿವ.
**ನಿರಪೇಕ್ಷ** = ಯಾವ ಅಪೇಕ್ಷೆಯೂ ಇಲ್ಲದವ (ಸ್ವರಮಣ)

೫ **ಉರಗಗಿರಿ** = ಶೇಷಾದ್ರಿ
**ವೃಶ್ಚಿಕ** = ಚೇಳು
**ಸ್ಮರ** = ಕಾಮ

## ೭೯ನೆಯ ಹಾಡು

೧ **ರಕ್ಷಣಶಿಕ್ಷಣದಕ್ಷ** = ಶಿಷ್ಟರನ್ನು ಸಂರಕ್ಷಿಸುವುದರಲ್ಲಿಯೂ ದುಷ್ಟರನ್ನು
ಶಿಕ್ಷಿಸುವುದರಲ್ಲಿಯೂ ಆಸಕ್ತ.

೩ **ಅಂತರವಿಲ್ಲದೆ** = ಸತತವಾಗಿ

**ಹೊಂತಕಾರಿ** = ಅಂತ ತಿಳಿಯಗೊಡದವ, ಪಾಥಗಾರ.

## ೮೦ನೆಯ ಹಾಡು

೧ **ಪರಾಕುಮಾಡು** = ಆದರಪೂರ್ವಕ ಬಿನ್ನವಿಸು.

**ಪರಾಮರಿಸು** = ಬಿನ್ನಹಕೇಳು, ಲಾಲಿಸು

**ಧರಾರಮಣ** = ಭೂರಮಣ

**ಫಣಿಧರ** = ಶಿವ

**ಪಾಮರ** = ಹಳ್ಳಿಗ, ಹುಂಬ

೨ **ಅಪಹತವ ಮಾಡು** = ಕಳೆ

೩ **ತರಳ** = ಬಾಲಕ—ಧ್ರುವ (ಉತ್ತಾನಪಾದ-ಸುನೀತಿಯರ ಮಗ. ಮಲತಾಯಿಯಾದ ಸುರುಚಿಯ ಮತ್ಸರಕ್ಕೆ ಬೇಸತ್ತು, ಸ್ಥಿರವಾದ ಸ್ಥಾನವನ್ನು ದೇವರಿಂದ ಪಡೆದುಕೊಳ್ಳಬೇಕೆಂದು ತಪಸ್ಸಿಗೆ ಹೋಗುವನು. ಅವನ ತಪಸ್ಸಿಗೆ ಮೆಚ್ಚಿ ಶ್ರೀಹರಿ, ಪ್ರತ್ಯಕ್ಷನಾಗಿ ಅವನಿಗೆ ಧ್ರುವಪದವಿಯನ್ನು ಕೊಟ್ಟನು. (ಭಾಗವತ ೪, ೮-೧೨)

**ಪುರಾರಿ** = ಶಿವ (ತ್ರಿಪುರಾರಿ).

## ೮೧ನೆಯ ಹಾಡು

**ರುಕುಮಾಂಗದ** = ಋತುಧ್ವಜನ ಮಗ. ಇವನ ಹೆಂಡತಿ ವಿಂಧ್ಯಾವಳಿ. ಮಗ ಧರ್ಮಾಂಗದ. ಇವನು ಏಕಾದಶಿ ವ್ರತವನ್ನು ತಪ್ಪದೆ ಪಾಲಿಸುತ್ತಿದ್ದನು. ಅದನ್ನು ಮುರಿಯಲು ಬ್ರಹ್ಮನು ಕಳಿಸಿದ ಮೋಹಿನಿ, ಇವನನ್ನು ಲಗ್ನವಾಗಿ, ಇವನ ವ್ರತಗೆಡಿಸಬೇಕೆಂದು ಯತ್ನ ಮಾಡಿದಳು. ಆದರೆ ಇವನು ಮಗನನ್ನು ಬಲಿಕೊಡಲು ಸಿದ್ಧನಾದನೇ ಹೊರತು ವ್ರತ ಮುರಿಯಲು ಒಪ್ಪಲಿಲ್ಲ. ಇವನನ್ನು ನೋಡಿ ವಿಷ್ಣು ಪ್ರತ್ಯಕ್ಷನಾಗಿ ಮೋಕ್ಷವನ್ನು ಕೊಟ್ಟನು. (ನಾರದ, ೨-೩೩)

**ಶುಕಮುನಿ:**— ವೇದವ್ಯಾಸರ ಮಗ. ಈತನು ಜನಕ. ನಾರದ ಮೊದ
ಲಾದವರಲ್ಲಿ ಬ್ರಹ್ಮವಿದ್ಯೆ ಹೊಂದಿ ವೈರಾಗ್ಯಭರಿತನಾದನು. ಇವನು
ಪರೀಕ್ಷಿದ್ರಾಜನಿಗೆ ಭಾಗವತವನ್ನೂ ಗಂಧರ್ವನಿಗೆ ಭಾರತವನ್ನೂ ತಿಳಿಸಿ
ಕೊಟ್ಟನು. ಸಂಕೀರ್ತನಭಕ್ತರಲ್ಲಿ ಶುಕನು ಮೊದಲಿಗನು.
(ಭಾಗವತ ೧, ೧೯–೨೫. ಭಾರತ ಶಾಂತಿ ೨೩೪; ೩೨೯)

**ಬಕವೈರಿ**=ಭೀಮಸೇನ

**ದೇವಕಿಯಂತೆ**=ತಾಯಿಯ ಮಮತೆಯಿಂದ

೨ **ವರಕಪಿ**=ಹನುಮಂತ

**ಸಿರಿ**=ಲಕ್ಷ್ಮಿ

೩ **ಬಲಿ:**— ಪ್ರಹ್ಲಾದನ ಮಗನಾದ ವಿರೋಚನನ ಮಗ. ಇವನ ಹೆಂಡತಿ
ವಿಂಧ್ಯಾವಳಿ, ಇವನು ಮಹಾಪರಾಕ್ರಮಿ. ದೇವತೆಗಳೊಂದಿಗೆ ಯುದ್ಧ
ಮಾಡಿ ಇಂದ್ರನನ್ನು ಪದಚ್ಯುತಗೊಳಿಸಿದನು. ಇಂದ್ರನ ಪದವಿಯನ್ನು
ಪಡೆಯಬೇಕೆಂದು ನೂರು ಅಶ್ವಮೇಧಗಳನ್ನು–ಶುಕ್ರಾಚಾರ್ಯರ ಪೌರೋ
ಹಿತ್ಯದಲ್ಲಿ–ಮಾಡಲಾರಂಭಿಸಿದನು. ಬ್ರಹ್ಮನ ಮೊರೆ ಕೇಳಿ ವಿಷ್ಣು
ವಾಮನನಾಗಿ ಬಂದು, ಮೂರು ಪಾದ ಭೂಮಿದಾನ ಬೇಡಿ, ತ್ರಿವಿಕ್ರಮ
ರೂಪ ತಾಳಿ, ಇವನನ್ನು ರಸಾತಳಕ್ಕೆ ಇಳಿಸಿದನು. ಇವನ ಯೋಗ್ಯತೆಯನ್ನು
ತಿಳಿದು ವಿಷ್ಣು ಇವನ ಬಾಗಿಲ ಕಾಯುವವನಾದನು. ಬಲಿಯೇ ಮುಂದೆ
ಇಂದ್ರಪದವಿಗೇರುವವನು. (ಭಾಗವತ ೮ನೆಯ ಸ್ಕಂಧ)

**ಪ್ರಹ್ಲಾದ:**— ಹಿರಣ್ಯಕಶಿಪು ಕಯಾಧು ಇವರ ಮಗ. ಇವನು
ಪರಮ ಭಾಗವತ. ಇವನ ವಿಷ್ಣುಭಕ್ತಿಯನ್ನು ಸಹಿಸದೆ ಹಿರಣ್ಯಕಶಿಪು
ಇವನನ್ನು ನಾನಾ ರೀತಿಯಲ್ಲಿ ಹಿಂಸಿಸಿದನು. ಪ್ರಹ್ಲಾದನನ್ನು ಸಂರಕ್ಷಿಸಲು
ಶ್ರೀಹರಿ ನೃಸಿಂಹಾವತಾರ ತಾಳಿ ಅವನನ್ನು ಕೊಂದನು. ಇವನು ದೃಢ-
ಭಕ್ತಿಯ ಸಲುವಾಗಿ ಹೆಸರಾಗಿದ್ದಾನೆ. (ಭಾಗವತ ಸ್ಕಂಧ ೭)

**ಅರ್ಜುನ**=ಕುಂತಿಯಲ್ಲಿ ಇಂದ್ರಾಂಶದಿಂದ ಹುಟ್ಟಿದವ. ಶ್ರೀಕೃಷ್ಣನ
ಪರಮಭಕ್ತ ಮತ್ತು ಗೆಳೆಯ. ಇವನು ಸಖ್ಯಭಕ್ತಿಗೆ ಆದರ್ಶವಾಗಿದ್ದಾನೆ.

## ೮೨ನೆಯ ಹಾಡು

ಗಂಗಾಜನಕ = ಶ್ರೀಹರಿ (ಗಂಗೆಯ ಉಂಗುಟದಿ ಪಡೆದವ)

ಇರವು = ಸ್ಥಿತಿ

ಹತ್ತುನೂರು = ಸಾವಿರ

ಅಯ್ಯೊ ಅನ್ನು = ಮರುಗು

ಸಲ್ಲದ ನಾಣ್ಯ = ನಡೆಯದ ನಾಣ್ಯ

ನಖಶಿಖಪರ್ಯಂತ = ಪೂರ್ಣವಾಗಿ

ಮುಖವರಿಯದ = ಗುರುತಿಲ್ಲದ

ಕಕಮಕಮಾಡು = ದಿಕ್ಕುತಪ್ಪಿಸು. ಕಂಗೆಡಿಸು

ಮುಟ್ಟಿ = ಮನಮುಟ್ಟಿ

## ೮೩ನೆಯ ಹಾಡು

ತನ್ನ ದೈನ್ಯಾವಸ್ಥೆಯನ್ನೂ ಪರಮಾತ್ಮನ ಘನತೆಯನ್ನೂ ಪೂರ್ಣವಾಗಿ ಅರಿತ್ತು, ತನ್ನನ್ನು ಅನುಗ್ರಹಿಸಲು ಪರಮಾತ್ಮನನ್ನು ಪ್ರಾರ್ಥಿಸುತ್ತಾನೆ.

ಮಂದಮತಿ = ಅಜ್ಞಾನದ ಮೂಲಕ ಕಳೆಗೆಟ್ಟ ಸ್ವರೂಪದವ

ರೂಪಛಾಯ = ಹೊರತೋರಿಕೆ; ಹೊರಮಿಂಚು

ಪರಮಪಾತಕಿ = ಬಹಳ ಪಾಪ ಮಾಡಿದವ

ಗರುವಮತಿ = ಅಹಂಕಾರಿ

ಹಿಂದುಮುಂದಿನ ಸುದ್ದಿ = ಭೂತ-ಭವಿಷ್ಯಗಳ ತಿಳಿವಳಿಕೆ

## ೮೪ನೆಯ ಹಾಡು

ಕಂಗೆಟ್ಟು ... ಅಪ್ಪಿಕೊಂಡೆ = ನರಸಿಂಹಾವತಾರ

೨ **ಗಮನವಾಗು** = ಏರಿಹೋಗು

**ಕರಿರಾಜ** = ಗಜೇಂದ್ರ

೩ **ಅಜಮಿಳ (ಅಜಾಮಿಲ)** = ಕಾನ್ಯಕುಬ್ಜದ ಒಬ್ಬ (ಕನೋಜ-ಉತ್ತರ ಪ್ರದೇಶ) ಬ್ರಾಹ್ಮಣ: ತಂದೆ-ತಾಯಿ, ಹೆಂಡತಿಯರನ್ನು ಬಿಟ್ಟು ಸೂಳೆಯ ಮನೆಯಲ್ಲಿ ಇದ್ದು, ಅನೇಕ ದುರಾಚಾರಮಾಡಿ, ಹೊಟ್ಟೆ ಹೊರೆಯುತ್ತಿದ್ದನು. ಇವನ ಹತ್ತುಮಕ್ಕಳಲ್ಲಿ ಕೊನೆಯವನ ಹೆಸರು ನಾರಾಯಣ; ಸಾಯುವ ವೇಳೆಯಲ್ಲಿ ನಾರಾಯಣ(ನಾರಗ)ನ ಹೆಸರನ್ನು ನೆನೆದುದರಿಂದ, ನಾಮಸ್ಮರಣಮಹಿಮೆಯಿಂದ ಈತ ದಿವ್ಯಪದವಿ ಪಡೆದನು. (ಭಾಗವತ ೬/೧)

**ವಿಭೀಷಣ** = ರಾವಣನ ತಮ್ಮ, ರಾಮನ ಪರಮಭಕ್ತ. ಶ್ರೀರಾಮ, ಯುದ್ಧದಲ್ಲಿ ರಾವಣನನ್ನು ಸಂಹರಿಸಿದ ಮೇಲೆ, ಇವನನ್ನು ಲಂಕಾಧಿಪತಿಯನ್ನಾಗಿ ಮಾಡಿದನು. (ರಾಮಾಯಣ ಯುದ್ಧ. ೧೧೪-೧೧೫)

**ಐವರು** = ಪ್ರಹ್ಲಾದ, ಕರಿರಾಜ, ಅಜಾಮಿಳ, ವಿಭೀಷಣ. ರುಕ್ಮಾಂಗದ (ಪದ ೪೧-೧)

**ಭಜನೆಗೆ** = ನಾಮಸ್ಮರಣೆಮಾಡಲಿಕ್ಕೆ

**ಹಿತರೆ** = ಇಷ್ಟರಾದವರೆ ?

## ಲಜನೆಯ ಹಾಡು

೧ **ಕಾಕುಮಾಡು** = ನಿರ್ಲಕ್ಷಿಸು

**ಸಂಗ** = ಸಹವಾಸ, ಸಂಸಾರ

**ಮಂದಮತಿಯಿಂದ** = ಬುದ್ಧಿಗೆಟ್ಟು

೨ **ತಿನ್ನು** = ಪೀಡಿಸು

**ಮುಂಡಮೋಚಿದೆ** = ತಲೆಬೋಳಿಸಿಕೊಂಡೆ = ಪರಲು ಪರಿದುಕೊಂಡೆ

೩ **ದಿಟ್ಟಿಯಲಿ** = ದೃಷ್ಟಿಯಿಂದ

## ನಾಣ್ಣುಡಿ

**ಅಟ್ಟಮೇಲೆ ಒಲೆ ಉರಿಯುವಂತೆ**
**ಕೆಟ್ಟ ಮೇಲೆ ಅರಿವು ತಾ ಬಂದಿತು.**

## ೮೬ನೆಯ ಹಾಡು

೧ **ಮುರಹರ** = ಶ್ರೀಕೃಷ್ಣ. ಮುರ ಎಂಬ ಅಸುರನು ನರಕಾಸುರನ ಪರಿವಾರದಲ್ಲಿ ಒಬ್ಬ; ಶ್ರೀಕೃಷ್ಣನು ಇವನನ್ನು ಕೊಂದನು,

(ಭಾಗವತ ೧೮/೫೯)

**ನಗಧರ**=ವಿಷ್ಣು (ಕೂರ್ಮಾವತಾರದ ಕಥೆ)

**ಧರಣಿ-ಲಕ್ಷ್ಮೀಕಾಂತ**=ಭೂದೇವಿ-ಶ್ರೀದೇವಿಯರ ಪತಿ.

**ಶಕಟಮರ್ದನ**=ಶ್ರೀಕೃಷ್ಣ. ಕಂಸನ ಪರಿವಾರದ ರಾಕ್ಷಸನು ಶಕಟ, ಬಂಡಿಯ ರೂಪದಿಂದ ಕೃಷ್ಣನನ್ನು ಕೊಲ್ಲಹೋಗಿ ಅವನಿಂದ ಮಡಿದ.

(ಭಾಗವತ ೮/೭)

**ಆದಿನಾರಾಯಣ**=(ಅಹಮಾದಿರ್ಹಿ ದೇವಾನಾಂ. ಗೀತಾ ೧೦/೨)

**ರುಕುಮಿಣಿಪತಿ**=ಶ್ರೀಕೃಷ್ಣ.

'ರುಕ್ಮಿಣಿ ವಿದರ್ಭದೇಶದ ಭೀಷ್ಮಕನ ಮಗಳು. ಇವಳ ಅಣ್ಣನಾದ ರುಕ್ಮಿಯು ಇವಳನ್ನು ಚೇದಿದೇಶದ ಅರಸನಾದ ಶಿಶುಪಾಲನಿಗೆ ಕೊಡಬೇಕೆಂದು ನಿಶ್ಚಯಮಾಡಿದ್ದ. ಆಗ ರುಕ್ಮಿಣಿ ಶ್ರೀಕೃಷ್ಣನಿಗೆ ಪತ್ರಬರೆದು ಸ್ವಯಂವರದ ವೇಳೆಯಲ್ಲಿ ಕರೆಸಿಕೊಂಡು, ಶ್ರೀಕೃಷ್ಣನ ಸಂಗಡ ದ್ವಾರಕೆಗೆ ಹೋದಳು. ಅಲ್ಲಿ ಇವರಿಬ್ಬರ ವಿವಾಹವಾಯಿತು.

೨ **ಸುಪರ್ಣಗಮನ**=ಗರುಡಗಮನ=ವಿಷ್ಣು

**ಪೂರ್ಣಚರಿತ**=ಅರಿತುಕೊಳ್ಳಲು ಸಾಧ್ಯವಿರದಂತಹ ಮಹಾಮಹಿಮ.

(ಭಾ. ತಾ. ನಿ. ೧-೨೦)

**ಹೊನ್ನಹೊಳೆ**=ಹೊನ್ನಾಳಿ (ಶಿವಮೊಗ್ಗ ಜಿ.) ತುಂಗಭದ್ರೆಯ ತೀರದಲ್ಲಿದೆ. ಅಲ್ಲಿರುವ ಶ್ರೀಕೃಷ್ಣನ ಮಾಹಾತ್ಮ್ಯವನ್ನು ಇಲ್ಲಿ ದಾಸರು ವರ್ಣಿಸಿದ್ದಾರೆ.

## ೮೭ನೆಯ ಹಾಡು

೧ **ದುರಿತಗಜಪಂಚಾನನ**=ಪಾಪವೆಂಬ ಆನೆಗೆ ಸಿಂಹನಾದವನು (ಪಂಚಾನನ=ಸಿಂಹ)

**ರಂಭೆ**=ದೇವಲೋಕದ ಅಪ್ಸರೆ= ಅತಿಸುಂದರಿ

**ಪರಸು**=ಸ್ಪರ್ಶಮಣಿ: (ಈ ಮಣಿ ಯಾವ ಧಾತುವಿಗೆ ತಾಗಿದರ ಅದು ಬಂಗಾರವಾಗುತ್ತದೆ.)

೩ **ಕಾಲುಹೊಳೆ**=ದಾಟಲು ಬರುವಂತಿದ್ದ ಹೊಳೆ

೫ **ಅಜಮಿಳ**=(ಪದ ೮೪, ನುಡಿ ೩)

## ನಾಣ್ನುಡಿಗಳು

೧ ಹೆತ್ತ ಮಕ್ಕಳು ಮರುಳಾದರೆ ತಾಯ್ತಂದೆ ಎತ್ತದೆ ಇಳಿಸದೆ ಬಿಸುಡುವರೆ ?

೨ ಅರಸು ಮುಟ್ಟಲು ದಾಸಿ ರಂಭೆಯು

೩ ಪರಸು ಮುಟ್ಟಲು ಲೋಹ ಹೊನ್ನು

೪ ಹೆಸರುಳ್ಳ ನದಿಗಳನೊಳಗೊಂಬ ಜಲಧಿಯು ಬಿಸುಡುವುದೆ ಕಾಲು ಹೊಳೆಗಳನು ?

ವಿ. ಸೂ:— ಈ ಪದದಲ್ಲಿ ದೃಷ್ಟಾಂತಾಲಂಕಾರಗಳನ್ನು ನುಡಿ ೧, ೨, ೩ ರ ನೋಡಬಹುದು.

## ೮೮ನೆಯ ಹಾಡು

೧ **ವಾರಿಜನಾಭ**=ಕಮಲವು ನಾಭಿಯಲ್ಲಿ ಉಳ್ಳವನು, ಶ್ರೀಹರಿ.

೨ **ಇಹಪರ**=ಈಲೋಕ ಮತ್ತು ಪರಲೋಕ.

೩ **ಕರಿರಾಜವರದ**=(ಪದ ೮೦. ನುಡಿ ೩)

**ಸದ್ಗುಣಸಾರ್ವಭೌಮ**=ಸದ್ಗುಣಗಳಿಗೆಲ್ಲ ರಾಜರಾಜ.

(ಕಾಂತಾಯ ಕಲ್ಯಾಣಗುಣೈಕಧಾಮ್ನೇ ... ಮಧ್ವವಿಜಯ ೧/೧

## ೮೯ನೆಯ ಹಾಡು

೧ **ದ್ರುಪದಜೆ**=ದ್ರೌಪದಿ

**ದ್ರುಪದಜೆಯು.... ಪತಿಗಳೆಲ್ಲ** :—

ಜೂಜಿನಲ್ಲಿ ಧರ್ಮರಾಯನು ತನ್ನ ಸರ್ವಸ್ವವನ್ನು ಸೋತಮೇಲೆ, ದ್ರೌಪದಿಯನ್ನು ಪಣಕ್ಕೆ ಹಚ್ಚಿ ಸೋತನು. ಆಗ ದುರ್ಯೋಧನನು ದುಃಶಾಸನ ನಿಂದ ಅವಳನ್ನು ಸಭೆಗೆ ಎಳತರಿಸಿ, ಸೀರೆ ಸೆಳೆಯಿಸಿ ಅಪಮಾನಮಾಡಿದ. ಶ್ರೀಕೃಷ್ಣನು ಅವಳ ಪ್ರಾರ್ಥನೆಯನ್ನು ಕೇಳಿ ಅಕ್ಷಯಾಂಬರ ದಾನಮಾಡಿ ಅವಳ ಅಭಿಮಾನ ಕಾಯ್ದನು. (ಭಾರತ, ಸಭಾ, ೮೯, ೯೦)

**ಗರಹೊಯ್ದರಂತೆ**=ಗ್ರಹಬಾಧೆಯಾದವರಂತೆ. ದೆವ್ವಬಡಿದವರಂತೆ.

೨ **ನೆಗಳು**=ಮೊಸಳೆ

**ಅಂದು........ನರಹರಿಯೆ** —(ಪದ ೮೦, ನುಡಿ ೩)

೩ **ಅಜಮಿಳ**=(ಪದ ೮೪, ನುಡಿ ೩)

**ಕುಲಗೆಟ್ಟು**=ಶೂದ್ರಸ್ತ್ರೀ ಸಹವಾಸಮಾಡಿ

**ಕಾಲದೂತ**=ಯಮದೂತ

**ನಿಜಸುತ**=ನಾರಾಯಣನೆಂಬ ತನ್ನ ಮಗ (ನಾರಗ)

## ೯೦ನೆಯ ಹಾಡು

೧ **ಜಾತಿ**= ಬ್ರಾಹ್ಮಣ ಮೊದಲಾದ ವರ್ಣಗಳು

**ಯೋನಿ**= ಪಶ್ವಾದಿ ಜೀವಿಗಳು ಬೇರೆ ಬೇರೆ ರೂಪ ಹೊಂದುವುದಕ್ಕೆ ಮೂಲಕಾರಣ. (ಇವು ೮೪ ಲಕ್ಷವೆಂದು ಪರಂಪರೆಯಿದೆ.)

೨ **ಕಾಮಾದಿಷಡ್ವರ್ಗ**:—ಕಾಮ, ಕ್ರೋಧ, ಲೋಭ, ಮದ, ಮೋಹ ಮತ್ಸರ, ಎಂಬ (ಆರು) ಷಡ್ವರ್ಗಗಳು.

**ನಾಮಾಮೃತಪಾನಮಾಡು**=ನಾಮಸ್ಮರಣಮಾಡು

## ೯೧ನೆಯ ಹಾಡು

೧ **ರಕ್ಕಸತನುಜ**=ರಾಕ್ಷಸನ ಮಗ, ಹಿರಣ್ಯಕಶಿಪುವಿನ ಮಗ

**ಪ್ರಾಯ**= ವಯಸ್ಸು

**ಅಕ್ಕನ ಮಗ**=ಪ್ರೀತಿಯ ಸೋದರಳಿಯ

೨ **ಋಷಿಪತ್ನಿಯ ಶಾಪ**= ಅಹಲ್ಯೆಯ ಶಾಪ

ಅಹಲ್ಯೆ, ಮುದ್ಗಲಋಷಿಯ ಮಗಳು. ಗೌತಮ ಋಷಿಯೊಂದಿಗೆ ಮದುವೆಯಾಗಿದ್ದಿತು. ಇಂದ್ರನ ಮೋಸದ ನಡತೆಯ ಮೂಲಕ ಅಪರಾಧಿನಿಯಾದ ಅಹಲ್ಯೆ, ಗೌತಮರ ಶಾಪದಿಂದ ಕಲ್ಲಾಗಿದ್ದಳು. ಸೀತೆಯ ಸ್ವಯಂವರಕ್ಕೆಂದು ವಿಶ್ವಾಮಿತ್ರನ ಆಶ್ರಮದಿಂದ ಮಿಥಿಲಾನಗರಿಗೆ ಹೋಗುವ ಹಾದಿಯಲ್ಲಿ ರಾಮನ ಪಾದಸ್ಪರ್ಶದಿಂದ ಮತ್ತೆ ಅಹಲ್ಯೆಯಾದಳು. (ರಾಮಾಯಣ ಬಾಲ ೪೫-೪೯)

೩ **ಒಪ್ಪಿಡಿಯವಲಕ್ಕಿಯ ನಿನಗೆ ತಂದು ಒಪ್ಪಿಸಿದವ**=
ಸುದಾಮ=(ಕುಚೇಲ)

ಬಲರಾಮ, ಕೃಷ್ಣ, ಕುಚೇಲರು ಸಾಂದೀಪನಿ ಗುರುಗಳಲ್ಲಿ ಓದುತ್ತಿದ್ದರು. ಕುಚೇಲನು ಜ್ಞಾನಿ ಮತ್ತು ಅಯಾಚಿತ ವೃತ್ತಿಯವನು. ದಾರಿದ್ರ್ಯಕ್ಕೆ ಬೇಸತ್ತ ಅವನ ಹೆಂಡತಿ, ನಾಲ್ಕುಮುಷ್ಟಿ ಅವಲಕ್ಕಿಯನ್ನು ಕೊಟ್ಟು ಕೃಷ್ಣನ ಕಡೆಗೆ ಸಹಾಯಯಾಚನೆಗಾಗಿ ಕಳುಹಿದಳು. ಕೃಷ್ಣ ಕುಚೇಲನನ್ನು ಹಳೆಯ ಗೆಳೆಯನೆಂದು ಸಂತೋಷದಿಂದ ಬರಮಾಡಿಕೊಂಡು, ಅವನು ತಂದ ಅವಲಕ್ಕಿಯಲ್ಲಿ ಒಂದು ಹಿಡಿಯನ್ನು ತಿಂದು ಸಂತೋಷಪಟ್ಟನು. ಕುಚೇಲನು ಕೃಷ್ಣನಲ್ಲಿ ಏನನ್ನೂ ಯಾಚಿಸದೆ ಮರಳಿ ಹೋದಾಗ, ಆತನ ಮನೆ ಸಂಪತ್ತಿನಿಂದ ತುಂಬಿ ಹೋಗಿದ್ದಿತು. (ಭಾಗವತ ೧೦-೮೦)

**ಒಪ್ಪವೆ**=ಸಮ್ಮತವೆ ?

**ಅಪ್ಪಂತೆ**=ಹಾಗೆಯೆ

## ೯೨ನೆಯ ಹಾಡು

**ನಿರ್ಮಲಚಿತ್ತ**=ವಿಶುದ್ಧಾತ್ಮ (ಭಾರತ, ಅನುಶಾಸನ. ವಿಷ್ಣುಸಹಸ್ರ ೩೮)

**ಜ್ಞಾನಿಗಳರಸು**=ಜ್ಞಾನಿಗಳಿಗೆಲ್ಲ ಒಡೆಯ, ಶ್ರೀಹರಿ

**ಮಗುವಿನ ಮಾತೆಂದು**=ನಿಷ್ಪಾಪಬುದ್ಧಿಯವನ ಮಾತು ಎಂದು

**ದೀನಜನಮಂದಾರನೆ**=ನಿನ್ನ ಕರುಣೆಯನ್ನು ಪ್ರಾರ್ಥಿಸುವ ಭಕ್ತರಿಗೆ ಅಭೀಷ್ಟದಾಯಕನೆ.

**ಮಂದರೋದ್ಧಾರ**= ಮಂದರಪರ್ವತವನ್ನು ಬೆನ್ನಮೇಲೆ ಹೊತ್ತವ–ಕೂರ್ಮ (ಕೂರ್ಮಾವತಾರದ ಕಥೆ)

## ೯೩ನೆಯ ಹಾಡು

**ವೇಣುಗೋಪಾಲ**= ಮುರಲೀಧರ

**ವೇದವೇದ್ಯ**= ನಿಗಮಗೋಚರ

**ನಿತ್ಯಾನಂದ**=(ಆನಂದಂ ಬ್ರಹ್ಮೇತಿ ವ್ಯಜಾನಾತ್) (ತೈತ್ತಿರೀಯ ಭೃಗುವಲ್ಲಿ ಅನುವಾಕ ೬) (ವಂದೇವಂದ್ಯಂ ಸದಾನಂದಂ— ದ್ವಾದಶ ಸ್ತೋತ್ರ ೧–೧)

**ತತ್ಥಳಿಸು**= ತತ್ತರಿಸು

**ಅಂದದಿಂದ**= ರೀತಿಯಲ್ಲಿ

**ನೆನೆದ ಮಾತ್ರ**=ನಾಮಸ್ಮರಣೆಯಿಂದ ಮಾತ್ರ

## ೯೪ನೆಯ ಹಾಡು

**ಎರಕ**=ಪ್ರೀತಿ.

**ನಿರುಮಾಲ್ಯ (ನಿರ್ಮಾಲ್ಯ)**=ದೇವರಮೇಲೆ ಏರಿಸಿ ತೆಗೆದ ಹೂ ಮುಂ.

**ಕರಣ**=ಕರ್ಣ (ಕಿವಿ)

**ಓಲೈಸಿ**=ಒಲಿದು. ಅನುಸರಿಸಿ.

೩ **ತತ್ತ್ವಯೋಗಾಭ್ಯಾಸಕ್ಕಾಗಲಿ- ಉಕ್ತಿ**=ನನ್ನ ಮಾತುಗಳೆಲ್ಲ ತತ್ತ್ವ ಯೋಗ (ವೇದಾಂತ)ದ ಅಭ್ಯಾಸದಲ್ಲಿ ತೊಡಗಲಿ.

## ೯೫ನೆಯ ಹಾಡು

೧ **ಗಾಸಿಮಾಡು**=ದುಃಖಕೊಡು

**ಅಭಯಕರದ ಮೇಲಿನ ಕುಸುಮ ಶಿರದಮೇಲಿರಿಸೋ**=

ನಿನ್ನ ಅಭಯಕರವನ್ನು ನನ್ನ ತಲೆಯಮೇಲಿಡು.

೨ **ಕಡೆಗಣ್ಣು** = ನಿರ್ಲಕ್ಷ್ಯದ ದೃಷ್ಟಿ, ಓರೆಗಣ್ಣು

## ೯೬ನೆಯ ಹಾಡು

೧ **ರನ್ನ**= (ರತ್ನ) ಶ್ರೇಷ್ಠ

**ಕರುಣವಿದ್ಯೆಯನೆನ್ನ ಅಂಗಕ್ಕೆ ತೊಡಿಸೊ:—**

ಕರುಣೆ ಎಂಬ ನಿನ್ನ ಸಹಜಗುಣವನ್ನು ನನ್ನ ದೇಹಕ್ಕೆ ಅಳವಡಿಸು

**ಆರಡಿ**= ತುಂಬಿ

೨ **ಗಂಗೆಯ ಪಡೆದಂಥ ಪಾದ:—** (ಗಂಗಾ ವಿಷ್ಣುಪದೀ-.ಇತ್ಯಮರಃ ವಾರಿವರ್ಗ ೨೮೫)

೩ **ಚಂದಿರನಾಗು**= ಮಾರ್ಗದರ್ಶನ ಮಾಡು

**ಸೆರಗೊಡ್ಡಿ ಬೇಡು**=ಅಂಗಲಾಚು

## ೯೭ನೆಯ ಹಾಡು

೧ **ಚಕೋರ**= ರಾತ್ರಿ ಬಾಳುವ ಹಕ್ಕಿ: ಬೆಳುದಿಂಗಳು ಇದರ ಆಹಾರ.

೩ **ಅನುಶ್ರುತ**=ಶ್ರುತಿಗಳನ್ನು ಅನುಸರಿಸಿದ

**ಪ್ರಣವ**=ಓಂಕಾರ

ವಿ. ಸೂ: ಪ್ರತಿಯೊಂದು ನುಡಿಯ ಮೂರು ಚರಣಗಳಲ್ಲಿ ಉಪಮಾಲಂಕಾರವಿದ್ದು ನಾಲ್ಕನೆಯ ಚರಣದಲ್ಲಿಯ ವಿಷಯವನ್ನು ಅವು ಉದ್ದೀಪಿಸುತ್ತವೆ. ಆದುದರಿಂದ ಇವು ದೀಪಕಾಲಂಕಾರಕ್ಕೆ ಉತ್ತಮ ಉದಾಹರಣೆಗಳಾಗಿವೆ.

## ೯೮ನೆಯ ಹಾಡು

**ಬಾಲ**= ಪ್ರಹ್ಲಾದ

**ಪಾಷಾಣ**=ಕಲ್ಲಾಗಿಬಿದ್ದ ಅಹಲ್ಯೆ

**ಯೋಷಿದ್ರೂಪ**=ಸ್ತ್ರೀರೂಪ,

**ಇನಕುಲಾಂಬುಧಿ ಚಂದ್ರ**=ಸೂರ್ಯವಂಶದ ಅಭ್ಯುದಯಕ್ಕೆ ಕಾರಣ

## ೯೯ನೆಯ ಹಾಡು

**ಪಟ್ಟದ ರಾಣಿ**=ಲಕ್ಷ್ಮೀದೇವಿ.

**ಹುಟ್ಟಬಾಹ ಜನ್ಮಂಗಳ**=ಪುನರ್ಜನ್ಮಗಳನ್ನು

**ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ:**— ಅಜ್ಞಾನದಿಂದ ದೂಷಿತವಾದ ಜೀವವನ್ನು ಶುದ್ಧಗೊಳಿಸು.

**ಉತ್ಕೃಷ್ಟ ಬಂಗಾರದೊಳು ಎನ್ನ ಕೂಡಿಸೊ:**—ಜ್ಞಾನಿಗಳಲ್ಲಿ ನನ್ನನ್ನು ಕೂಡಿಸು.

**ಬೊಟ್ಟಿಗೆ ಉಂಗುರವ ಮಾಡಿ ಎನ್ನ ಸೇರಿಸೊ:**—ನಿನ್ನ ಸಾನ್ನಿಧ್ಯ ದೊರೆಯುವಂತೆ ಮಾಡು.

**ದಿಟ್ಟ ಪುರಂದರವಿಠಲನೆಂಬುದನೆ**=ನಿನ್ನ ನಾಮಸ್ಮರಣೆಯನ್ನೇ

(ಈ ನುಡಿಯ ಮೊದಲಿನ ಮೂರು ಚರಣಗಳಲ್ಲಿ ಪ್ರತಿಮಾಲಂಕಾರವಿದೆ.)

## ೧೦೦ನೆಯ ಹಾಡು

ಈ ಹಾಡನ್ನು ದಾಸರು ಪೂರ್ಣವಾಗಿ ಸಂಸ್ಕೃತದಲ್ಲಿ ರಚಿಸಿದ್ದಾರೆ. ಇದು ಸಂಗೀತ ಪದ್ಧತಿಗೆ ತುಂಬ ಅನುಕೂಲವಾಗಿದೆ.

೧ **ಪಂಕಜನೇತ್ರ**=ಕಮಲನಯನ

**ಚಿನ್ಮಯರೂಪ**= ಚೈತನ್ಯಸ್ವರೂಪ

**ಅಂಬುಜಭವ**= ಬ್ರಹ್ಮ (ಚತುರ್ಮುಖ)

**ವಿನುತ**=ಸ್ತುತಿಸಲ್ಪಟ್ಟವ

**ತುಂಬುರು:**— ಕಶ್ಯಪ-ಅರಿಷ್ಟೆಯರ ಮಗ, ದೇವಗಂಧರ್ವರಲ್ಲಿ ಒಬ್ಬ ನಾರದರ ಸಂಗಡ ಇರುವ ಬ್ರಹ್ಮನ ಸಭೆಯ ಗಾಯಕ, ಕುಬೇರನ ಶಾಪದಿಂ ಇವನು ವಿರಾಧನೆಂಬ ರಾಕ್ಷಸನಾಗಿ ಹುಟ್ಟಿ, ಶ್ರೀರಾಮನಿಂದ ಮರಣ ಹೊಂ ತನ್ನ ಮೂಲರೂಪವನ್ನು ಪಡೆದನು.

(ಭಾಗವತ ೧೨, ೧೧-೧೩, ರಾಮಾಯಣ ಅರಣ್ಯ.

೨ **ಪಾಹಿ**=ರಕ್ಷಿಸು

**ಫಣಿಪತಿ**=ಆದಿಶೇಷ

**ಕರಣ**=ಮಾಡುವವ

೩ **ಸಕಲವೇದವಿಚಾರಂ**= ಎಲ್ಲ ವೇದಗಳ ವಿಚಾರಕ್ಕೂ ಕಾರಣನಾದವ

**ನೇತಾರ**=ನಾಯಕ

**ವಿಪೋಷಣ**=ರಕ್ಷಕನು

## ೧೦೧ನೆಯ ಹಾಡು

೧ **ಬೆನ್ನುಬೀಳು**= ಮೊರೆಹೊಗು

**ಅಮರೇಂದ್ರ**=ದೇವೇಂದ್ರ

**ಕಮಲಸಖ**=ಸೂರ್ಯ

**ಕಮಲಸಖಾನಂತಕರನೆ**=ಸೂರ್ಯನಂತೆ ಅನಂತ ಕಿರಣಗಳುಳ್ಳ ವ

೨ **ಅಂಬರೀಷ**:— ಸೂರ್ಯವಂಶದ ವೈವಸ್ವತಮನುವಿನ ಮಗನಾ ನಾಭಾಗನ ಮಗನು. ಇವನು ವಿಷ್ಣುಭಕ್ತಾಗ್ರೇಸರ; ಏಕಾದಶಿವ್ರ ಪರಾಯಣನು. ದುರ್ವಾಸ ಋಷಿಗಳು ಇವನ ವ್ರತ ಕೆಡಿಸಬೇಕೆಂ ಬಂದು, ವಿಷ್ಣುವಿನ ಚಕ್ರಾಯುಧಕ್ಕೆ ಸಿಲುಕಿ ತೊಂದರೆಪಟ್ಟು. ಮ

ಅಂಬರೀಷನನ್ನು ಮೊರೆಹೊಕ್ಕು ಚಕ್ರಾಘಾತದಿಂದ ಉಳಿದುಕೊಂಡರು. (ಭಾಗವತ ೯-೪)

**ವಿದುರ:** — ವಿಚಿತ್ರವೀರ್ಯನ ಹೆಂಡತಿಯಾದ ಅಂಬಿಕೆಯು ದಾಸಿಯು ಮಗ: ವೇದವ್ಯಾಸರ ಅನುಗ್ರಹದಿಂದ ಜನಿಸಿದವ; ಯಮನ ಅಂಶಸಂಭೂತ; ಮಹಾವಿಷ್ಣುಭಕ್ತ ಮತ್ತು ಜ್ಞಾನಿ. ಶ್ರೀಕೃಷ್ಣನು ಸಂಧಾನಕ್ಕಾಗಿ ಹಸ್ತಿನಾವತಿಗೆ ಹೋದಾಗ, ದುರ್ಯೋಧನನ ಅರಮನೆಯನ್ನು ಬಿಟ್ಟು ಈತನ ಆತಿಥ್ಯ ಪಡೆದನು. ಈತ ಪಾಂಡವರಿಗೆ ಯಾವಾಗಲೂ ಅನುಕೂಲನಾಗಿದ್ದ. (ಮಹಾಭಾರತ-ಆದಿಪರ್ವ)

**ಗಿರಿಜೇಶಗೆ ಒಲಿದ:**— ರುದ್ರದೇವರಿಗೆ ವಿಷ್ಣು ಒಲಿದ ಹಲವಾರು ಸಂದರ್ಭಗಳಿವೆ. (ಭಸ್ಮಾಸುರನ ಕಥೆ; ಬಾಣಾಸುರನ ಕಥೆ ಇವು ಈ ವಿಷಯವನ್ನು ತಿಳಿಸಿ ಹೇಳುತ್ತವೆ.)

**ಅರ್ಜುನ**=ಚಂದ್ರವಂಶದ ಪಾಂಡುರಾಜ-ಕುಂತಿಯರ ಮಗ. ದೇವೇಂದ್ರನ ಅಂಶದಿಂದ ಹುಟ್ಟಿದವ. ಪ್ರಸಿದ್ಧ ಕೃಷ್ಣಭಕ್ತ; ಇವನ ಕಾರಣದಿಂದಲೇ ಭಗವದ್ಗೀತೆ ಹುಟ್ಟಿತು.

**ದ್ವಿಜಸುತ**=ಕುಚೇಲ (ಸುದಾಮ)

**ಪುಂಡರೀಕ**=ಒಬ್ಬ ಬ್ರಾಹ್ಮಣ. ಸಕಲಶಾಸ್ತ್ರವಿಶಾರದ. ನಾರಾಯಣನ ಸರ್ವೋತ್ತಮತ್ವದ ವಿಷಯವಾಗಿ ನಾರದನ ಕೂಡ ವಾದಮಾಡಿದನು. ಇವನು ಅಂಬರೀಷನ ಗೆಳೆಯ. ಅಧರ್ಮಾಚರಣದಿಂದ ಪತಿತನಾಗಿ ಪ್ರಾಯಶ್ಚಿತ್ತ ಹೊಂದಿ, ಮುಂದೆ ಪರಮಾತ್ಮನ ಅಪರೋಕ್ಷಜ್ಞಾನದಿಂದ ಮೋಕ್ಷ ಪಡೆದನು. (ಭಾರತ ಅನುಶಾಸನ, ೧೮೩)

**ಅವಸರ**=ಪ್ರಸಂಗ

**ಅಂಜನೆಕಂದ**=ಹನುಮಂತ

**ಉಬ್ಬಸ**=ಸಂಕಟ

**ಗೌತಮನ ಸತಿ**=ಅಹಲ್ಯೆ.

## ೧೦೨ನೆಯ ಹಾಡು

ಭಕ್ತನ ಕೋರಿಕೆಯಿದು.

**ದುರಿತ**=ಪಾಪ

೨ ಹಾನಿ=ಕಷ್ಟ; ಕೊರತೆ.
ಕೈಯಾನು=ಕೈಯೊಡ್ಡು.

## ೧೧೩ನೆಯ ಹಾಡು

೧ ಬಿಂಕ=ಅಹಂಕಾರ, ಸೆಡವು
ನೀರೊಳು ಪೊಕ್ಕರು:—ಮತ್ಸ್ಯಾವತಾರ
ಬೆನ್ನಭಾರ ಪೊತ್ತಿಹೆ:—ಕೂರ್ಮಾವತಾರ
ಕೋರೆಯ.... ಬಿಡೆ:—ವರಾಹಾವತಾರ
ಕೊಸರಿಕೊಳ್ಳು=ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳು
ಘೋರರೂಪವ ತೋರಿ:—ನರಸಿಂಹಾವತಾರ.
೨ ತಿರುಕ:—ವಾಮನಾವತಾರ
ತರಿದ... ಕೊರೆಕ: ಪರಶುರಾಮ
ಕಾಡಸೇರಲು ಬಿಡೆ;—ರಾಮಾವತಾರ
ಆರದೆ=ಸಮರ್ಥನಾಗದೆ
ಮಡುವಿನಲ್ಲಿ ಧುಮುಕಿದರೂ ಬಿಡೆ:—ಕೃಷ್ಣಾವತಾರ
೩ ಕಡುಬತ್ತಲೆ:—ಬೌದ್ಧಾವತಾರ
ತೇಜಿಯನ್ನೇರಿ ಓಡಲು:—ಕಲ್ಕ್ಯವತಾರ
ಕಡಹಾಯ್ಸುವ=ಪಾರುಮಾಡುವ
ಭಾರಕರ್ತ=ಹೊಣೆಗಾರ

## ೧೧೪ನೆಯ ಹಾಡು

ದಾಸರು ದೇವರನ್ನು ಅಂಬಿಗನ ರೂಪಕದಿಂದ ಕೊಂಡಾಡಿ, ಅವನನ್ನು ಭವಸಾ[ಗರ]ದಿಂದ ದಾಟಿಸೆಂದು ಬೇಡಿಕೊಂಡಿದ್ದಾರೆ.

೧ ಜಗದಂಬಾರಮಣ=ಲಕ್ಷ್ಮೀರಮಣ.
ಹರಿಗೋಲು:—ದೇಹ
ಒಂಬತ್ತು ಛಿದ್ರಗಳು=ನವದ್ವಾರ— (ಬಾಯಿ, ಎರಡು ಕಿವಿಗ[ಳು], ಎರಡು ಕಣ್ಣುಗಳು; ಮೂಗಿನ ಎರಡು ಹೊರಳೆಗಳು; ಗುದ ಮತ್ತು ಜನನೇ[ಂ]ದ್ರಿಯ.)
ಸಂಭ್ರಮ=ಉತ್ಸಾಹ

**ಹೊಳೆ**=ಜೀವನ

**ಸುಳಿ**=ತಿರುಗಣಿ

**ಹತ್ತುಬೆಂಬಡಿಗರು**:—ದಶೇಂದ್ರಿಯಗಳು

ಪಂಚಕರ್ಮೇಂದ್ರಿಯ=ಕೈ, ಕಾಲು, ಗುದ, ಉಪಸ್ಥ, ಬಾಯಿ.

ಪಂಚಜ್ಞಾನೇಂದ್ರಿಯ=ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ.

**ಬೆಂಬಡಿಗರು**=ಘಾತಕರು, ಸುಲಿಗೆಗಾರರು

**ಹತ್ತುವರೆತ್ತಲು**:—ಸುತ್ತುವರಿದಿರುವರು.

**ಆರುತೆರೆ**:— ಷಡ್ರಿಪುಗಳು — ಕಾಮ, ಕ್ರೋಧ, ಲೋಭ, ಮದ, ಮೋಹ, ಮತ್ಸರ.

**ಆರೆನು**=ಅಸಮರ್ಥನು

**ಓದು**=ಜ್ಞಾನ

**ಮುಕ್ತಿಮಂಟಪ**=ಮೋಕ್ಷ

ವಿ. ಸೂ.— ಸತ್ವವಂತನಾಗಿ ಜ್ಞಾನ ಭಕ್ತಿಗಳನ್ನು ಹೊಂದಿದರೆ ಮೋಕ್ಷ ಸಿಕ್ಕುವು ...ೆಂಬ ಭಾವ.

## ೧೦೫ನೆಯ ಹಾಡು

**ತಾರಿಸೊ**=ದಾಟಿಸೊ

**ಪಾಂಡುರಂಗ**=ಪಂಢರಪುರದ ವಿಟ್ಠಲ

ಈ ನುಡಿಯಲ್ಲಿ ನರಸಿಂಹಾವತಾರದ ವರ್ಣನೆ ಇದೆ.

**ಪೂತನಿ**=ಕಂಸನ ತಂಗಿ. ಅಣ್ಣನ ಪ್ರೇರಣೆಯಿಂದ ಬಾಲಕೃಷ್ಣನನ್ನು ಕೊಲ್ಲಲು ಗೋಕುಲಕ್ಕೆ ಬಂದು, ಕೃಷ್ಣನಿಗೆ ವಿಷತುಂಬಿದ ಮೊಲೆ ಕುಡಿಸಲು, ಅವನು ಇವಳ ಪ್ರಾಣ ಹೀರಿ ಕೊಂದನು.

(ಭಾಗವತ ೧೦/೬)

**ಶಶಿಮುಖಿ**=ದ್ರೌಪದಿ

**ಶಿಶುವಾಗಿ ಬಾಲಲೀಲೆಗಳತೋರಿದೆ**=ಕೃಷ್ಣಾವತಾರದ ಲೀಲೆಗಳು

## ೧೦೬ನೆಯ ಹಾಡು

ಇದು ಪಂಢರಪುರದ ವಿಟ್ಠಲನನ್ನು ವರ್ಣಿಸಿದ ಹಾಡು.

**ಎರವು**=ಪಕ್ಷಪಾತ; ಭೇದ

೨ **ಅರಸಿ ರುಕ್ಮಿಣಿಗೆ ನೀನೇನೆಂದೆಯೊ ವಿಠಲ**=ಪಂಢರಪುರ
ದೇವಾಲಯದಲ್ಲಿ ವಿಟ್ಠಲನೊಬ್ಬನೆ ಇದ್ದಾನೆ. ಜೊತೆಗೆ ರುಕ್ಮಿಣಿ ಇಲ್ಲ
ಅದನ್ನು ದಾಸರು ವಿನೋದದಿಂದ 'ನೀನು ರುಕ್ಮಿಣಿಗೆ ಏನು ಎಂದಿ
ಅವಳು ನಿನ್ನಲ್ಲಿ ಇಲ್ಲವೇಕೆ ?' ಎಂದು ದೇವರನ್ನು ಕೇಳುತ್ತಾರೆ.

**ಬಿರುದಿನ**=ನಿನ್ನ ವಿಶಿಷ್ಟಚಿಹ್ನವಾದ (ಶಂಖ)

**ಅರಿತು ಇಟ್ಟಿಗೆಯ ಮೇಲೆ ನಿಂತೆಯೊ**:—ಪುಂಡಲೀಕನೆಂಬ ಒಬ್ಬ
ಬ್ರಾಹ್ಮಣ, ಹೆಂಡತಿಯ ಮಾತುಕೇಳಿ ತಾಯಿ-ತಂದೆಗಳ ಸೇವೆಯನ್ನು ಬಿಟ್ಟು
ಕೊಟ್ಟಿದ್ದ; ಮುಂದೆ ಅವನಿಗೆ ಪಶ್ಚಾತ್ತಾಪವುಂಟಾಗಿ, ತಾಯಿ-ತಂದೆಗಳ ಸೇವೆ
ಯನ್ನು ನಿಷ್ಠೆಯಿಂದ ಮಾಡತೊಡಗಿದ. ಇವನನ್ನು ಪರೀಕ್ಷಿಸಬೇಕೆಂದು
ಶ್ರೀಹರಿ ಪ್ರತ್ಯಕ್ಷನಾಗಿ ಬಂದಾಗ, ನನ್ನ ಸೇವೆ ಮುಗಿಯುವವರೆಗೆ ಇಟ್ಟಿಗೆಯ
ಮೇಲೆ ನಿಲ್ಲೆಂದು ದೇವರಿಗೆ ಹೇಳಿದ. ಅಲ್ಲಿಯೇ ದೇವರು ವಿಟ್ಠಲನಾಗಿ
ಮೂರ್ತಿಗೊಂಡನೆಂದು ಲೋಕಕಥೆಯಿದೆ.

೨ **ಕುಶಲದಿ ಗಜುಗವನಾಡಿದೆ ವಿಠಲ** = ಕೃಷ್ಣನು ಬಾಲಕನಾಗಿ
ಗೋಪಾಲಕರೊಂದಿಗೆ ಗಜುಗ–ಚಿಣಿಕೋಲು ಚಂಡುಗಳನ್ನಾಡಿದ ಸ್ಥಳ
ವೆಂದು ಜನರು ಪಂಢರಪುರದಲ್ಲಿ ಇಂದಿಗೂ ತೋರಿಸುತ್ತಾರೆ. 'ಡಿಂಡೀರ
ವನ' ಎಂದು ಆ ಸ್ಥಳಕ್ಕೆ ಹೆಸರಿದೆ.

**ಕುಸುಮಬಾಣ**=ಕಾಮ

೩ **ಅಂಡಜಾಧಿಪ**=ಗರುಡ

**ಪಂಢರಿಕ್ಷೇತ್ರ**= (ಹಾಡು ೫೨ ನುಡಿ ೨)

## ೧೦೭ನೆಯ ಹಾಡು

೧ **ಇಭರಾಜವರದ**:—ಗಜೇಂದ್ರಮೋಕ್ಷದ ಕಥೆ

೨ **ಜಾಲ**=ಮೋಸ

೩ **ಕದಡುವ**=ಕೆಣಕುವ

**ಸದರ**=ಸುಲಭ, ಹಗುರು

## ೧೦೮ನೆಯ ಹಾಡು

೧ **ಧೃಷ್ಟನಾಗಿ**=ಧೈರ್ಯಶಾಲಿಯಾಗಿ

**ಭ್ರಷ್ಟ**=ಆಚಾರ-ವಿಚಾರಹೀನ

ಪಟ್ಟೆಪಟ್ಟಾವಳಿ=ರೇಶಿಮೆಯ ಉಡುಪು
ಕಟ್ಟೆ=ದಂಡೆ

## ೧೦೯ನೆಯ ಹಾಡು

ಈ ಹಾಡಿನಲ್ಲಿ ದಾಸರು ಶ್ರೀಹರಿಯ ಸರ್ವೋತ್ತಮತ್ವವನ್ನು ಅನೇಕ ಉದಾಹರಣೆ
ಳಿಂದ ಸಿದ್ಧಮಾಡಿದ್ದಾರೆ.

ಶ್ರೀಕಾಂತ=ಲಕ್ಷ್ಮೀರಮಣ

ಗುರುವುತನದಲಿ........ಜಗದಾದಿಗುರುವು; --

ಬ್ರಹ್ಮಾಂತಾ ಗುರವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತುಮೇ ಜನ್ಮಜನ್ಮನಿ ॥

ಹೀಗೆ ದಿನಾಲು ಗುರುಪರಂಪರೆಯನ್ನು ಸ್ಮರಿಸುವ ರೂಢಿಯಿದೆ. ಇದ
ಲ್ಲಿ ಬ್ರಹ್ಮನು ಮುಖ್ಯಗುರು; ಅವನ ತಂದೆ ಶ್ರೀಹರಿ ಆದಿಗುರು.

ಪಾವನತ್ವ=ಪಾವಿತ್ರ್ಯ

ಅಮರಗಂಗಾಜನಕ:— (ಹಾಡು ೯೬ ನುಡಿ ೨)

ದಿವಿಜರು=ದೇವತೆಗಳು

ಲೋಕಮೋಹಕ=ಕಾಮ

ಅಹಿಪ=ಆದಿಶೇಷ

ಪರಿಯಂಕ=ಮಂಚ

## ೧೧೦ನೆಯ ಹಾಡು

ಕ್ಷಣವೊಂದು ಯುಗ........ವ್ಯಥೆಯು:— ದುಃಖ ಬಂದು ಒದಗಿ
ಾಗ ಅಲ್ಪಕಾಲವೂ ಯುಗದಂತೆ ಎನಿಸುವುದು. ಕಡ್ಡಿ ಗುಡ್ಡವಷ್ಟು ಭಾರ
ನಿಸುವುದು.

ಹೊನ್ನೂರು=ಪೊಳಲಿಹೊನ್ನೂರು. (ಇದು ಶಿವಮೊಗ್ಗಾ ಜಿಲ್ಲೆಯಲ್ಲಿ
ತುಂಗಾನದಿಯ ತಟದಲ್ಲಿದೆ. ಶ್ರೀದಾಸರು ಅಲ್ಲಿಗೆ ಹೋದಾಗ ಅಲ್ಲಿಯ
ಸ್ಥಳದೈವತವನ್ನು ಸಂಬೋಧಿಸಿ ಈ ಹಾಡನ್ನು ಹಾಡಿದ್ದಾರೆ.)

## ೧೧೧ನೆಯ ಹಾಡು

ತುರುವಿಂಡು=ಆಕಳಹಿಂಡು

ತಲೆಯೆತ್ತು=ಬೆಳೆದು ನಿಲ್ಲು

೨ **ಸದನ**=ಮನೆ

**ಪಾವಕ**=ಅಗ್ನಿ

೩ **ಮಸಿಮಣ್ಣಮಾಡು**=ಹೊಲಸುಮಾಡು; ಕೆಡಿಸು

೪ **ಬಾವುಗ**=ಗಂಡುಬೆಕ್ಕು

೫ **ಹಿರಿದುಮಾಡಿ ಮತ್ತೆ ಕಿರಿದುಮಾಡುವುದು**=ಉದ್ಧಾರಮಾ
ಮರಳಿ ದೀನನನ್ನು ಮಾಡುವುದು.

ವಿ. ಸೂ.:– ಮೊದಲಿನ ನಾಲ್ಕು ನುಡಿಗಳಲ್ಲಿ ದೃಷ್ಟಾಂತಾಲಂಕಾರವಿದೆ.

## ೧೧೨ನೆಯ ಹಾಡು

೧ **ಗಿರಿಯ ರಾಯ**=ತಿರುಪತಿಯ ವೆಂಕಟೇಶ

**ದೂರು**=ಹೇಳಿಕೊಳ್ಳು; ಬಿನ್ನವಿಸು

**ಬಿಟ್ಟುಕಳೆ**=ದೂರಮಾಡು; ಕೈಬಿಡು

೨ **ಮಂದರಧರ**:—ಕೂರ್ಮಾವತಾರ

೩ **ಸೀಗೆಮುಳ್ಳು**=ಡೊಂಕಾದ ಸೀಗೆಯ ಮುಳ್ಳು

**ಸೊಗ**=ಸುಖ

೪ **ಈಡಾಗಿ**=ಚೆನ್ನಾಗಿ, ಪೂರ್ಣವಾಗಿ

೫ **ಪಾದಜಲಜ**=ಚರಣಕಮಲ

**ಸೂರೆಗಾರರು**=ಸುಲಿಗೆಗಾರರು; (ತತ್ತ್ವಾಭಿಮಾನಿ ದೇವತೆಗಳು)

ನನ್ನ ದೇಹದಲ್ಲಿರುವ ತತ್ತ್ವಾಭಿಮಾನಿ ದೇವತೆಗಳು ನನ್ನ ಆಧ್ಯಾತ್ಮಿ
ಸಂಕಟಗಳನ್ನು ಸುಲಿದುಕೊಂಡರು. ಅದರಿಂದ ನಾನು ನಿನ್ನ ಭಕ್ತನಾದೆನು.

ವಿ. ಸೂ. ನಾಲ್ಕನೆಯ ನುಡಿಯಲ್ಲಿ ಸುಂದರವಾದ ದೃಷ್ಟಾಂತಾಲಂಕಾರವಿದೆ.

## ೧೧೩ನೆಯ ಹಾಡು

೧ **ಕಡೆಗಣ್ಣಿಂದ ನೋಡು**=ನಿರ್ಲಕ್ಷ್ಯಿಸು

**ಚಿತ್ತಸುಖದಾತ**=ಮನಸ್ಸಿಗೆ ಸಮಾಧಾನ ಕೊಡುವವ

೨ **ಸೌಂದರ್ಯನಿಧಿ**:— (ಕಂದರ್ಪಪಿತ)

## ೧೧೪ನೆಯ ಹಾಡು

೧ **ಮನಕೆಬರು**=ಮನಸ್ಸಿಗೆ ಒಪ್ಪಿಗೆಯಾಗು

**ವಾಲ್ಮೀಕಿ:**— ಈತನು ಪ್ರಚೇತಸಋಷಿಯ ಮಗನಾಗಿದ್ದರೂ, ಬೇಡರ ಸಂಗದಲ್ಲಿ ಬೆಳೆದು ದಾರಿಯನ್ನು ಬಡಿಯುವವನಾಗಿದ್ದ. ಒಮ್ಮೆ ಸಪ್ತರ್ಷಿಗಳನ್ನು ಕಂಡು ಅವರಿಂದ ಜ್ಞಾನ ಪಡೆದು, ಬ್ರಹ್ಮರ್ಷಿಯಾಗಿ ರಾಮಾಯಣವನ್ನು ಬರೆದ. (ರಾಮಾಯಣ ಉತ್ತರ-೭)

**ಕುಬುಜೆ:**—ಕಂಸನ ದಾಸಿ. ಇವಳು ಗಂಧದ ಊಳಿಗದವಳು. ಬಲರಾಮ-ಕೃಷ್ಣರು ಬಿಲ್ಲುಹಬ್ಬಕ್ಕೆಂದು ಮಥುರೆಗೆ ಹೋದಾಗ, ಇವಳು ಕಂಸನಿಗಾಗಿ ಒಯ್ಯುತ್ತಿದ್ದ ಗಂಧವನ್ನು ಅವರಿಬ್ಬರೂ ಲೇಪಿಸಿಕೊಂಡರು. ಶ್ರೀಕೃಷ್ಣನು ಅವಳನ್ನು ಅನುಗ್ರಹಿಸಿ ಬೆನ್ನಿನ ಗೂನನ್ನು ತಿದ್ದಿದನು. (ಭಾಗವತ ೧೦–೪೨)

**ತೊತ್ತಿನಮಗ**=ವಿದುರ (ಹಾಡು ೧೦೧–ನುಡಿ ೨)

**ಐದೆ** = ಸುಮಂಗಲೆ

**ಐದು ಮಂದಿಯು ಕೂಡ ಸರಸವು ದ್ರೌಪದಿಗೆ:—**

(ಭಾರತತಾತ್ಪರ್ಯ–೧೮. ೧೦೬–೧೯೮)

ಈ ಭಾಗದಲ್ಲಿ—ಶ್ಯಾಮಲಾ, ಶಚಿ. ಉಷಾ, ಮತ್ತು ಪಾರ್ವತಿಯರು ಚತುರ್ಮುಖನಿಂದ ಶಾಪಗ್ರಸ್ತರಾಗಿ, ಆ ಶಾಪವನ್ನು ಕಳೆದುಕೊಳ್ಳುವುದಕ್ಕೆ ವಾಯುದೇವರ ಪತ್ನಿಯಾದ ಭಾರತೀದೇವಿಯನ್ನು ಮೊರೆಹೊಕ್ಕು, ಅವಳಲ್ಲಿ ಅಂತರ್ಯಾಮಿಗಳಾಗಿ ದ್ರೌಪದೀರೂಪದಿಂದ ಅವತರಿಸಿದ ಕಥೆಯನ್ನು ಹೇಳಲಾಗಿದೆ.

## ೧೧೫ನೆಯ ಹಾಡು

**ಕಮಲಸಖ**=ಸೂರ್ಯ

**ಶಿಶುಪಾಲ:**—ಚೇದಿದೇಶಾಧಿಪತಿ ದಮಘೋಷ ಹಾಗು ವಸುದೇವನ ತಂಗೆಯಾದ ಶ್ರುತಶ್ರವೆ ಇವರ ಮಗ. ಪಾಂಡವರೂ ಇವನೂ ಅಬ್ಬಕ್ಕಿ-ತಾಯಿಮಕ್ಕಳು. ಇವನು ಹುಟ್ಟಿದಾಗ ಇವನಿಗೆ ನಾಲ್ಕು ಕೈ, ಮೂರು ಕಣ್ಣುಗಳು ಇದ್ದುವು. ಆಕಾಶವಾಣಿ 'ಇವನನ್ನು ಯಾರ ತೊಡೆಯ ಮೇಲೆ ಮಲಗಿಸಿದಾಗ, ಇವನ ಎರಡು ಕೈಗಳು. ಹಣೆಗಣ್ಣು ಇಲ್ಲದಂತಾಗುವುವೊ, ಅವನಿಂದಲೆ ಈತನ ಮರಣ' ಎಂದು ಸಾರಿತು. ಕೃಷ್ಣನಿಂದಲೆ ಇವನ ಸಾವು ಎಂಬುದು ಗೊತ್ತಾದಾಗ, ಇವನ ತಾಯಿ ತನ್ನ ಮಗನನ್ನು ಬದುಕಿಸೆಂದು ಬೇಡಿಕೊಂಡಳು. ಆಗ ಕೃಷ್ಣ 'ನೂರು ತಪ್ಪು ಮಾಡುವ

ವರೆಗೆ ತಾಳಿ, ಆಮೇಲೆ ಇವನನ್ನು ಕೊಲ್ಲುತ್ತೇನೆ ' ಎಂದು ಹೇಳಿದನು
ರಾಜಸೂಯ ಯಾಗದಲ್ಲಿ ಅಗ್ರಪೂಜೆಯ ಕಾಲಕ್ಕೆ ಕೃಷ್ಣನು ಇವನನ್ನು
ಕೊಂದನು. ಇವನು ಪೂರ್ವಜನ್ಮದಲ್ಲಿ ಹಿರಣ್ಯಕಶಿಪು, ರಾವಣ ಆಗಿ
ದ್ದನು. (ಭಾರತ, ಸಭಾ, ೬೫-೬೬)

**ದಂತವಕ್ತ್ರ**—ಕರೂಷದೇಶಾಧಿಪತಿಯಾದ ವೃದ್ಧಶ್ರವ ಹಾಗು ವಸು
ದೇವನ ತಂಗೆಯಾದ ಶ್ರುತದೇವಿ ಇವರ ಮಗ. ಪಾಂಡವರ ರಾಜ
ಸೂಯಯಾಗ ಸಮಯದಲ್ಲಿ ಸಹದೇವನು ಇವನನ್ನು ಸೋಲಿಸಿದನು
ಇವನು ಅಸುರಾಂಶನಾದುದರಿಂದ, ಕೃಷ್ಣನು ಇವನನ್ನು ಕೊಂದನು.

(ಭಾಗವತ ೧೧/೭೮)

**ಪಶುಪತಿಯ ಆಭರಣ**=ಹಾವು

## ೧೧೬ನೆಯ ಹಾಡು

೧ **ಇಂಬಿತ್ತು**=ಅವಕಾಶಕೊಟ್ಟು

**ಕಂಬು**=ಶಂಖ

೨ **ಮಕ್ಕಳ ಮಾಣಿಕ್ಯ**=ಬಾಲಕರಲ್ಲಿ ಶ್ರೇಷ್ಠ

**ಮಾಯೆ**=ಅಜ್ಞಾನ

**ಅದನರಿತು ಅರಿಯದಾದೆ**:—ಅಜ್ಞಾನಿಯಿರುವೆನೆಂದು ತಿಳಿದಿದ್ದರೂ
ಅದನ್ನು ನಿವಾರಿಸಲು ಸಮರ್ಥನಾಗಲಿಲ್ಲ.

## ೧೧೭ನೆಯ ಹಾಡು

೧ **ಮಲ್ಲಮರ್ದನ** - ಚಾಣೂರ-ಮುಷ್ಟಿಕರನ್ನು ಕೊಂದವ

**ಸುಪ್ಪಾಣಿ ಮುತ್ತು**=(ಶೂರ್ಪಕರಣ=ಸುಪ್ಪಾಣಿ) ಆರಿಸಿದ ಮುತ್ತು

೨ **ಪುನಗು**=ಒಂದು ಜಾತಿಯ ಕಾಡುಬೆಕ್ಕಿನಿಂದಾಗುವ ಸುಗಂಧದ್ರವ್ಯ

## ೧೧೮ನೆಯ ಹಾಡು

**ಆಪನ್ನರಕ್ಷಕ**:—ಸಂಕಟದಲ್ಲಿ ಇದ್ದವರನ್ನು ಸಂರಕ್ಷಿಸುವವ.

**ಪ್ರಸನ್ನ**=ಮನಸ್ಸನ್ನು ಸಮಾಧಾನ ಪಡಿಸುವವ

೨ **ಭೂರಿ**=ಬಹಳ

**ಕರುಣಾಲವಾಲ**=ಕರುಣೆಯ ತವರು

**ನೀರದ**=ಮೋಡ

**ಅಪ್ರಮೇಯ**=ಅಸಾಮಾನ್ಯ, ಅಳೆಯಲು ಬಾರದ
**ಯೋಗಿಧ್ಯೇಯ**=ಯೋಗಿಗಳಿಗೆ ಆದರ್ಶನಾದವ
**ಸುರಮುನಿ ಹೃದಯನಿಕಾಯ**=ಸುರರ ಹಾಗು ಮುನಿಗಳ ಹೃದಯನಿವಾಸಿ

## ೧೯೯ನೆಯ ಹಾಡು

**ಬಹೆನೊ**=(ಬಪ್ಪೆನೊ) ಬರುವೆನೊ.
**ಪುಲು-ಮರವು ಗಿಡ-ಬಳ್ಳಿ ಇವುಗಳಲಿ** (೨೦ ಲಕ್ಷ)
**ಜಲಜೀವ**=ಜಲಚರಪ್ರಾಣಿ (೯ ಲಕ್ಷ)
**ಕ್ರಿಮಿಕೀಟ**=ಹುಳುಹುಪ್ಪಡಿ (೧೧ ಲಕ್ಷ)
**ಅಳಲಿ**=ತೊಂದರೆಪಟ್ಟು
**ಅಂಡಜ**=ಪಕ್ಷಿಜಾತಿ (೧೦ ಲಕ್ಷ)
**ಚರಣನಾಲ್ಕರಲಿ**=ದನಗಳ ಜಾತಿಯಲ್ಲಿ (೩೦ ಲಕ್ಷ)
**ನರ**=ಮನುಷ್ಯಕುಲದಲ್ಲಿ (೪ ಲಕ್ಷ)
**ಸರಸಿಜಸಂಭವನ ಕಲ್ಪ**=ಬ್ರಹ್ಮಕಲ್ಪ
**ಲೀಲೆಯಲಿ**:—ದೇವರಸೃಷ್ಟಿಯೆಲ್ಲವೂ ಅವನ ಲೀಲೆ (ಲೋಕವತ್ತು ಲೀಲಾ ಕೈವಲ್ಯಂ – ಬ್ರಹ್ಮಸೂತ್ರ ೨/೧/೩೪)
**ಕುಂಭಿನಿ**=ಭೂಮಿ

**ವಿ. ಸೂ:- (೧) ಎಂಬತ್ತುನಾಲ್ಕುಲಕ್ಷ ಯೋನಿ**=

ಜಲಜೋಃ ನವಲಕ್ಷಂತು ಸ್ಥಾವರೋಃ ಲಕ್ಷವಿಂಶತಿಃ ।
ಕ್ರಿಮಿಜೋಃ ರುದ್ರಸಂಖ್ಯಶ್ಚ ಪಕ್ಷಿಣಾಂ ದಶಲಕ್ಷಕಂ !
ತ್ರಿಂಶಲ್ಲಕ್ಷಂತು ಪಶ್ವಾದಿ ಚತುರ್ಲಕ್ಷಂತು ಮಾನುಷಃ ॥

(ಪದ್ಮಪುರಾಣ)

೧ ಜಲಜಯೋನಿ (ಜಲಜೀವ) = ೯ ಲಕ್ಷ
೨ ವೃಕ್ಷಾದಿಯೋನಿ (ಪುಲುಮರ) = ೨೦ ಲಕ್ಷ
೩ ಕ್ರಿಮಿಯೋನಿ (ಕ್ರಿಮಿಕೀಟ) = ೧೧ ಲಕ್ಷ
೪ ಅಂಡಜ.ಸ್ವೇದಜಯೋನಿ (ಅಂಡಜ) = ೧೦ ಲಕ್ಷ
೫ ಪಶ್ವಾದಿಯೋನಿ (ಚರಣನಾಲ್ಕು) = ೩೦ ಲಕ್ಷ
೬ ಮಾನುಷಯೋನಿ = ೪ ಲಕ್ಷ

೮೪ ಲಕ್ಷ

(೨) ಕಲ್ಪವೆಂದರೆ ಬ್ರಹ್ಮನ ಒಂದು ಹಗಲು ಅಥವಾ ಒಂದುಸಾವಿ
ಮಾನುಷಯುಗಗಳು.

(೩) ನಾಲ್ಕುಯುಗಗಳೆಂದರೆ ಒಂದು ಮಹಾಯುಗ—ಎಂದರೆ ೪೩ ಲ
೨೦ ಸಾವಿರ ವರ್ಷಗಳು.

### ೧೨೦ನೆಯ ಹಾಡು

೧ **ಮುಂದರಿಯದೆ** = (ಮುಂದು + ಅರಿಯದೆ) ಮುಂದಾಗುವುದನ
ತಿಳಿದುಕೊಳ್ಳದೆ

**ಸ್ಥೂಲ**=ಜಡ

೨ **ಅಜನ ಲೋಕ ಮುಟ್ಟುತಲಿದೆ:**—ಕೊನೆಯಿಲ್ಲದಂತಾಗಿದೆ.

### ೧೨೧ನೆಯ ಹಾಡು

೩ **ಪಾಂಚಾಲಿ**=ದ್ರೌಪದಿ

**ಹರಿಸರ್ವೋತ್ತಮನೆಂಬ ಬಾಲಕ**=ಪ್ರಹ್ಲಾದ

**ನರಹರಿ**=ನರಸಿಂಹ

**ವಿಶ್ವಾತ್ಮಕ**=ವಿಶ್ವವೆಂಬ ಹೆಸರುಳ್ಳವ

೩ **ಇಳೆಗೊಡೆಯ**=ಉತ್ತಾನಪಾದರಾಜ

**ಆ ಲಲನೆ**=ಸುರುಚಿ

**ಅರ್ಭಕ**=ಧ್ರುವ

**ಧ್ರುವಪಟ್ಟ**=ಸ್ಥಿರಪಟ್ಟ

೪ **ಗೌತಮಸತಿ**=ಅಹಲ್ಯೆ

೫ **ಜಗದೇಕಮಾತೆ**=ಸೀತಾದೇವಿ

೬ **ಡೊಂಬೆ**=ನಟನೆ

### ೧೨೨ನೆಯ ಹಾಡು

೧ **ವೇದವನು ಅಜಗಿತ್ತೆ**— (ಭಾಗವತ ೧/೧)

**ವಾದಿಸಿ........ಆದಿಶೇಷಶಯನನೆ:**— ಎರಡು ಸಾವಿರ ನಾಲ
ಯುಳ್ಳ ಆದಿಶೇಷನು ನಿನಗೆ ಹಾಸಿಗೆಯಾಗಿರುವಾಗ, ಒಂದೇ ನಾಲಗೆಯು
ನಾನು ನಿನ್ನೊಂದಿಗೆ ಹೇಗೆ ವಾದಮಾಡಲಿ ?

೨ **ಮೃಡನ + ಅಯ್ಯ**=ಶಿವನ ತಂದೆ ಎಂದರೆ ಚತುರ್ಮುಖ

ಆದಿ.........ಮೃಡನಯ್ಯನಯ್ಯನೆ:— ವೇದವೇಮುಖಗಳಾರುವ ಬ್ರಹ್ಮನೇ ನಿನ್ನ ಮಗನಾಗಿರುವಾಗ, ನಾನು ಹೇಗೆ ನಿನ್ನಂಗಡ ಮಾತನಾಡಿ ಮೆಚ್ಚಿಸಲಿ ?

ಪವನಜನ ಒಡೆಯ:— ಹನುಮಂತನ ಒಡೆಯ. ಹನುಮಂತನು ಸಂಗೀತಶಾಸ್ತ್ರವಲ್ಲಿ ನಿಪುಣನು. ಈತನು ರಚಿಸಿದ ಸಂಗೀತಗ್ರಂಥವನ್ನು ಸಂಗೀತರತ್ನಾಕರಕಾರನು ಉದಾಹರಿಸಿದ್ದಾನೆ. ಅಂಥವನ ಒಡೆಯನಾದ ನಿನ್ನನ್ನು ಹೇಗೆ ಹಾಡಿ ಮೆಚ್ಚಿಸಲಿ ?

## ೧೨೩ನೆಯ ಹಾಡು

**ಚಿಂತಾಯುತ**= ಚಿಂತಿಸಿದಂತೆ ಮಹಿಮೆ ವಿಸ್ತಾರಗೊಳ್ಳುವವ.

**ನಿನ್ನ........ಕೋಟಿ**=ನಿನ್ನ ನಾಮವು ನನಗೆ ಅಪಾರ ಸಂಪತ್ತಿದ್ದ ಹಾಗೆ.

**ಪಾವನೆಯಾದ ಗಂಗೆ ಪಾದೋದ್ಭವೆ** (ಭಾಗವತ ೫/೧೭–೧)

**ಉದುಭವಿಸಿಹನು ಅಜ....ಪೂವಿನಲಿ**=(ಭಾರತ ಆದಿ ೧)

**ಕಂಗಳು—ಸಪ್ತದ್ವೀಪ....ಬೆಳಗುತಿಹವೊ**—

(ಋಗ್ವೇದ ೧೦ನೆಯ ಮಂಡಲ ಪುರುಷಸೂಕ್ತ:— ಚಕ್ಷೋಃ ಸೂರ್ಯೋಽಜಾಯತ)

**ಸಪ್ತದ್ವೀಪ**=ಜಂಬು, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ.

**ಆಪೋಶನವಾಯ್ತು ವಿಳಂಬುಧಿಗಳು:—** (ಭಾಗವತ ೩/೩೩/೪)

## ೧೨೪ನೆಯ ಹಾಡು

**ಗಂಗೆಯು....ಪಡೆದಿಹೆಯೊ** (ಭಾಗವತ ೫/೧೭–೧)

**ಒಪ್ಪಯಿಸು**=ಸಮರ್ಪಿಸು

**ಮೋಟುದೀವಿಗೆ**=ಕುರುಡುದೀವಿಗೆ

**ಪ್ರೋಟುಕಾಸು**=ಒಡಕುಬಿಲ್ಲೆ

**ಸಮೀರಣ**=ವಾಯುದೇವರು

**ನಿತ್ಯಗುಣಾರ್ಣವ**=ಅನಾದ್ಯನಂತಗುಣಗಳುಳ್ಳ

(ಭಾರತ ತಾತ್ಪರ್ಯ ೧.೧— ನಾರಾಯಣಾಯ ಪರಿಪೂರ್ಣಗುಣಾರ್ಣವಾಯ)

**ನಿಜಸುಖಪರಿಪೂರ್ಣ**=ಆತ್ಮತೃಪ್ತ. (ಭಾರತತಾತ್ಪರ್ಯ ೧/೨– ಸ್ವರತಃ [illegible]

## ೧೨೫ನೆಯ ಹಾಡು

೧ **ಸಿಂಧುಸಾಗರಕೋಟಿ**=ಅನೇಕ ಪವಿತ್ರಸಮುದ್ರಗಳು.

(ಸಿಂಧುಸಾಗರ=ಜೋಡುಸುದಿ

೨ **ಮಧು**=ಜೇನುತುಪ್ಪ

**ಪಂಚಾಮೃತ**:— ಆಕಳಹಾಲು, ಮೊಸರು, ತುಪ್ಪ, ಜೇನುತುಪ್ಪ ಸಕ್ಕರೆ.

**ಮಧುಪರ್ಕ**:— ಮೊಸರು, ತುಪ್ಪ, ಜಲ, ಜೇನುತುಪ್ಪ ಮತ್ತು ಸಕ್ಕರೆ ಇವು ಕೂಡಿದ ಒಂದು ರಸದ್ರವ್ಯ. ಇದನ್ನು ಅತಿಥಿಗಳಿಗೆ ಅಥವಾ ಮದುಮಗನಿಗೆ ಕೊಡುತ್ತಾರೆ.

**ಮೋಹದೆ**=ಮನಸ್ಸುಮೆಚ್ಚಿಸುವವಳು

೩ **ಪಂಚವಾದ್ಯ**=ಮದ್ದಳೆ, ಜಾಂಗಟೆ, ತಾಳ, ತಮ್ಮಟಿ, ಭೇರಿ.

**ಪಂಚದಿವ್ಯ ಅಮೃತಾನ್ನ**=ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ, ಪೇಯ, ಎಂಬ ಐದುಬಗೆಯ ಆಹಾರಗಳು.

೪ **ಮಂತ್ರ**=ವೈದಿಕಮಂತ್ರಗಳು

**ಮಹಾಮಂತ್ರ**= 'ಓಂನಮೋ ನಾರಾಯಣಾಯ' ಎಂಬ ಮಂತ್ರ

**ಪುರುಷಸೂಕ್ತ**= ಋಗ್ವೇದದ ೧೦ನೆಯ ಮಂಡಲದಲ್ಲಿ ಏಕದೈವತ್ವ ವಾದಿಯಾದ ಸೂಕ್ತ

**ತಂತು**=ಎಳೆಯಪ್ಪಾದರೂ

**ತಂತ್ರಸಾರ**=ವೈಷ್ಣವ ಆಚಾರ-ವಿಚಾರಗಳನ್ನು ಹೇಳುವುದಕ್ಕಾಗಿ ಶ್ರೀಮಧ್ವಾಚಾರ್ಯರು ಪಂಚರಾತ್ರಾಗಮದಿಂದ ಆರಿಸಿ ಸಂಗ್ರಹಿಸಿದ ಗ್ರಂಥ.

೫ **ಮಂಜರಿ**=ಗೊಂಚಲು

## ೧೨೬ನೆಯ ಹಾಡು

೧ **ಅಗುರು**=ಒಂದು ಸುಗಂಧದ್ರವ್ಯ

**ಸಾಮ್ರಾಣಿ**=ಲೋಭಾನ, ಧೂಪ

೨ **ಹೊದ್ದಿದ**=ಒದಗಿಬಂದ

೩ **ದಂಡಿಗೆ**=ಒಂದು ಬಗೆಯ ತಂತುವಾದ್ಯ (ಚಿಕ್ಕತಂಬೂರಿ)

**ಕಿನ್ನರಿ**=ಒಂದು ಪ್ರಾಚೀನ ತಂತುವಾದ್ಯ

ಘನರಾಗ = ಜನಕರಾಗಗಳು

೪ ಧ್ವಜ=ಚಿಕ್ಕಬಾವುಟ

ಪತಾಕ= ದೊಡ್ಡ ಬಾವುಟ

### ೧೨೭ನೆಯ ಹಾಡು

ಏಕಾರತಿ = ಮೂರುಬತ್ತಿಗಳುಳ್ಳ ಆರತಿ (ನೈವೇದ್ಯಕ್ಕಿಂತ ಮೊದಲು ಇದನ್ನು ಬೆಳಗುತ್ತಾರೆ.)

ಸಾಜ್ಯಂತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।
ದೀಪಂ ಗೃಹಾಣ ದೇವೇಶ ತ್ರೈಲೋಕ್ಯತಿಮಿರಾಪಹಂ ॥

(ದೇವಪೂಜಾ ಪದ್ಧತಿ)

### ೧೨೮ನೆಯ ಹಾಡು

೧ ಷಡುರಸ=ಕಾರ, ಹುಳಿ, ಸಿಹಿ, ಉಪ್ಪು, ಕಹಿ, ಒಗರು ಇವು ಆರು ರಸಗಳು.

ಪರಮಾನ್ನ = ಪಾಯಸ

೨ ಲವಣಶಾಕ=ಉಪ್ಪಿನಕಾಯಿ, ಬಾಳಕ

ಚಿತ್ರಾನ್ನ = ಕಲಸನ್ನ

ಅಪ್ಪಾಲು = ಸವಿಯಾದ ಹುದುವನ್ನು ಹಾಕಿ ಮಾಡಿದ ಚಿಕ್ಕ ಹೋಳಿಗೆ

ಅತಿರಸ = ಅನಾರಸ

೩ ದಧಿವಡೆ = ಮೊಸರುವಡೆ

ತಿಂಥಿಣಿ=ರಾಶಿ, ಗುಂಪು

ಪಡಿಪದಾರ್ಥ = ಊಟದ ಸಲುವಾಗಿ ಕೊಡುವ ಸಿದ್ಧಪದಾರ್ಥಗಳು (ಉಲ್ಪಿ ಅಥವಾ ಸೀದಾ)

### ೧೨೯ನೆಯ ಹಾಡು

೧ ಆರೋಗಣೆ=ಊಟ

೨ ನಾಟ್ಯ=ಕುಣಿತ

### ೧೩೦ನೆಯ ಹಾಡು

೧ ಭೋಗ=ಊಟ-ಉಪಹಾರಗಳು

ಜ್ಯೋತಿಶ್ಚಕ್ರ=ಸುತ್ತಲೂ ದೀಪಿಗೆಗಳುಳ್ಳ ತೂಗುದೀಪದಾನಿ.

೨ **ಹೇರೀಳೆ**= ದೊಡ್ಡೀಳೆಕಾಯಿ.

**ಕಾಯುನೆಲ್ಲೆ** = ರಾಯನೆಲ್ಲೆ (ತಪ್ಪಿಕಾಯ್‌ಬಿದ್ದಿರಬಹುದು.)

**ಅಂಬಟೆಕಾಯಿ** = ಸಣ್ಣಸಣ್ಣ ಮಾವಿನಕಾಯಿಯಂತಹ ಹುಳಿಗಾಯಿ. ಇವನ್ನು ಉಪ್ಪಿನಕಾಯಿ ಹಾಕುವ ರೂಢಿಯಿದೆ.

**ಮಾಂಗಾಯಿ** = ಮಾವಿನಕಾಯಿ

**ಬೇಲ** = ಬೆಳವಲಹಣ್ಣು

**ಮಂಗರೋಳಿ** = ಬಳ್ಳಿಜಾತಿ—ಚಟ್ಟಣಿಗಾಗಿ ಉಪಯೋಗಿಸುತ್ತಾರೆ.

**ಪಾಪಟೆಕಾಯಿ** = (ಪರ್ಪಟಫಲ) ಮೆಕ್ಕೆಕಾಯಿ.

೩ **ಸಿಖರಿಣಿ** = ಸೀಕರಣೆ

೪ **ಖೀರಾನ್ನ**=ಖೀರು

**ಶಾಲ್ಯನ್ನ** = ಸಣ್ಣಕ್ಕಿಯ ಅನ್ನ

೫ **ಗದುಗಿನ ವೀರನಾರಾಯಣ**:— ಧಾರವಾಡ ಜಿಲ್ಲೆಯ ಗದುಗಿನಲ್ಲಿರುವ ಪ್ರಸಿದ್ಧ ನಾರಾಯಣನ ಮೂರ್ತಿ. ಇದನ್ನು ಕುಮಾರವ್ಯಾಸನು ತನ್ನ ಕೃತಿಯ ಅಂಕಿತವನ್ನಾಗಿ ಬಳಸಿದ್ದಾನೆ. ಪುರಂದರದಾಸರು ಗದುಗಿಗೆ ಬಂದಾಗ ಈ ಹಾಡನ್ನು ರಚಿಸಿರಬಹುದು.

## ೧೩೧ನೆಯ ಹಾಡು

೫ **ಕೆಂಬಾಳೆ** = **ಚಂದ್ರಬಾಳೆ**

**ಬದರಿ** = ಬೋರೆಹಣ್ಣು

**ಜಂಬೀರ** = ಸಕ್ಕರೆಲಿಂಬೆ

೨ **ಜಂಬು** = ನೀರಲ

**ನಾರಂಗ** = ಕಿತ್ತಳೆ ಜಾತಿಯ ಹಣ್ಣು

**ಮುತ್ತಾದ** = ಹಣ್ಣಾದ

**ಔದುಂಬರ** = ಅತ್ತಿ, (ಅಂಜೂರಿಯಾಗಿರಬಹುದೇ ?)

**ಒತ್ತಿದ ಬೇಳೆ** = ಕೋಸಂಬರಿ

೩ **ರಸಾಯನ** = ಸೀಕರಣೆ

**ಸೀಯಾಳು** = ಎಳನೀರು

ಪೂರ್ಣಾನಂದ ಮಹೋದಧೇಃ ಪ್ರಿಯತಮಾ ಭಲ್ಲಾತಕೀ ದಾಡಿಮಾ।
ಚೂತೋ ದಾರಿತನಾರಿಕೇಲ ಬದರೀ ಮುಖ್ಯೇತ್ವದೀಯೋದಿನೇ ॥
ಖರ್ಜೂರಂ ಕದಲೀ ರಸಾಲ ಪನಸಂ ದ್ರಾಕ್ಷಾ ಕಪಿತ್ಥಾದಿಕಂ।
ಸರ್ವಂ ಸ್ವಾದ್ವಮೃತೋಪಮಂ ನವನವಂ ಸಂಗೃಹ್ಯತಾಮಚ್ಯುತ॥
(ಇತಿ ನೈವೇದ್ಯ ಪ್ರಕರಣೇ–ಹರಿಪೂಜಾ ಕಲ್ಪಲತಾ)

## ೧೩೨ನೆಯ ಹಾಡು

೧ನೆಯ ನುಡಿಯಲ್ಲಿ ಮೊದಲಿನ ನಾಲ್ಕು ಅವತಾರಗಳ ವರ್ಣನೆ:—
೨ನೆಯ ನುಡಿಯಲ್ಲಿ ಐದರಿಂದ ಎಂಟು ಅವತಾರಗಳ ವರ್ಣನೆ:—
ಕೊನೆಯ ನುಡಿಯಲ್ಲಿ ಉಳಿದೆರಡು ಅವತಾರಗಳ ವರ್ಣನೆ ಇದೆ.

## ೧೩೩ನೆಯ ಹಾಡು

೧ ಇದರಲ್ಲಿ ಮತ್ಸ್ಯಾವತಾರದ ಕಥೆಯನ್ನು ಹೇಳಿದೆ:

**ಶಕ್ರ**=ಇಂದ್ರ

**ಬಿಸಜಸಂಭವ**=ಬ್ರಹ್ಮ

**ನಿಗಮ**= ವೇದ

**ವಿಷ**=ನೀರು: **ವಿಷಧಿ**=ಜಲಧಿ.

೨ ಇದರಲ್ಲಿ ಕೂರ್ಮಾವತಾರದ ಕಥೆ ಬರುತ್ತದೆ.

**ನೇಣು**=ಹಗ್ಗ

**ಘನಾಚಲ**=ಮಂದರಾದ್ರಿ

೩ ಇದರಲ್ಲಿ ವರಾಹಾವತಾರದ ಕಥೆಯನ್ನು ಹೇಳಲಾಗಿದೆ.

**ದಿಂಡುಗೆಡಹಿ**=ನೆಲಕ್ಕೆ ಕೆಡವಿ

**ಕನಕಾಕ್ಷ**=ಹಿರಣ್ಯಾಕ್ಷ

೪ ನರಸಿಂಹಾವತಾರದ ವರ್ಣನೆ ಇಲ್ಲಿದೆ.

**ನರಮೃಗ**=ನರಸಿಂಹ

೫ ವಾಮನಾವತಾರದ ಕಥೆಯನ್ನು ಇಲ್ಲಿ ಬಣ್ಣಿಸಲಾಗಿದೆ.

**ಕುಲಿಶ**=ವಜ್ರಾಯುಧ

**ಕುವಲಯ**=ಭೂಮಂಡಲ

**ವಾಜಿಮೇಧ**=ಅಶ್ವಮೇಧ

**ಹಮ್ಮು**=ಅಹಂಕಾರ
**ಜಲಜಜಾಂಡ**=ಬ್ರಹ್ಮಾಂಡ
**ಸುಮನಸನದಿ**=ದೇವಗಂಗಾ

೬ ಪರಶುರಾಮಾವತಾರವನ್ನು ಇಲ್ಲಿ ಹೇಳಿದೆ :

**ಕಾರ್ತವೀರ್ಯ:—** ಈತನು ಮಾಹಿಷ್ಮತಿಯ (ಕೃತವೀರ್ಯನೆಂಬ ರಾಜನ ಮಗನು. ಇವನು ಸಾವಿರ ತೋಳುಗಳ ಪರಾಕ್ರಮಿ; ರಾವಣನನ್ನು ಕೂಡ ಸೋಲಿಸಿದವನು. ಜಮದಗ್ನಿಋಷಿಗಳ ಆಶ್ರಮದಿಂದ ಇವನ ಕಾಮಧೇನುವನ್ನು ಒತ್ತಾಯದಿಂದ ತೆಗೆದುಕೊಂಡು ಹೋಗಲು, ಪರಶು ರಾಮನು ಇವನನ್ನು ಸಂಹರಿಸಿದನು. (ಭಾರತ, ಸಭಾ. ೪೯)

**ಮಾತೆಯ ಶಿರವ ಕಡಿದು:—** ಇವನ ತಾಯಿ ರೇಣುಕೆ. ಪ್ರಸೇನಜಿ ಎಂಬ ಅರಸನ ಮಗಳು; ಜಮದಗ್ನಿಯ ಹೆಂಡತಿ. ಇವಳು ಒಂದು ದಿ ಗಂಗಾನದಿಗೆ ನೀರುತರಲು ಹೋದಾಗ, ಅಲ್ಲಿ ಜಲಕ್ರೀಡೆಯಾಡುತ್ತಿದ್ದ ಚಿತ್ರ ರಥನೆಂಬ ಗಂಧರ್ವನನ್ನು ಕಂಡು, ಮನಸ್ಸು ವಿಚಲಿತಗೊಂಡು, ಯಜ್ಞಕಾ ತಪ್ಪಿ ಆಶ್ರಮಕ್ಕೆ ಮರಳಿದಳು. ಆಗ ಜಮದಗ್ನಿ ಋಷಿ ಇವಳ ಮನಃಸ್ಥಿ ಯನ್ನು ಅರಿತು, 'ವ್ಯಭಿಚಾರಿಣಿ' ಎಂದು ನಿರ್ಣಯಿಸಿ, ಶಿರಶ್ಛೇದ ಶಿಕ್ಷೆ ಗುರಿಪಡಿಸಿದನು. ಪರಶುರಾಮನು ತಂದೆಯ ಅಪ್ಪಣೆಯಂತೆ ತಾಯಿಯ ಶಿರಸ್ಸನ್ನು ಕಡಿದನು. (ಭಾರತ, ವನ. ೧೧೬)

**ಗಂಡುಗೊಡಲಿ**=ಚಪ್ಪಗೊಡಲಿ

೭ ರಾಮಾವತಾರದ ಕಥೆ ಇದರಲ್ಲಿದೆ :

**ವಿಷಕಂಠಧನು**=ಶಿವನ ಧನುಸ್ಸು:—

ಇದನ್ನು ಪರಶುರಾಮನು ಜನಕರಾಜನಿಗೆ— ಸೀತೆಯ ಸಾಮರ್ಥ್ಯಕ್ಕೆ ಮೆಚ್ಚಿ-ಕೊಟ್ಟಿದ್ದನು. ಅಲ್ಲದೆ ಇದನ್ನು ಹೆದೆಯೇರಿಸಿದವನಿಗೆ ಸೀತಾದೇವಿ ಯನ್ನು ಮದುವೆಮಾಡಿಕೊಡಬೇಕೆಂದು ಹೇಳಿದ್ದನು. ಅದರಂತೆ ಸ್ವಯಂವರ ಕಾಲದಲ್ಲಿ ಶ್ರೀರಾಮನು ಇದನ್ನು ಮುರಿದು ಸೀತಾದೇವಿಯನ್ನು ಮದುವ ಯಾದನು. (ಆನಂದರಾಮಾಯಣ)

**ದಶರಥ:—** ಸೂರ್ಯವಂಶದ ಇಕ್ಷ್ವಾಕುಕುಲದ ಅಜರಾಜನ ಮಗ ಇವನು ಅಯೋಧ್ಯೆಯಲ್ಲಿ ಆಳುತ್ತಿದ್ದನು. ಇವನಿಗೆ ಕೌಸಲ್ಯಾ, ಸುಮಿತ್ರಾ

ಕೇಯಿ ಎಂಬ ಮೂವರು ಹೆಂಡಂದಿರು. ಪುತ್ರಕಾಮೇಷ್ಟಿಯನ್ನು ಮಾಡಿ
ಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ಮಕ್ಕಳನ್ನು ಪಡೆದನು.

(ರಾಮಾಯಣ–ಬಾಲ: ೨-೧೬)

**ಕೌಸಲ್ಯಾ:**— ಇವಳು ದಶರಥರಾಜನ ಹಿರಿಯ ಹೆಂಡತಿ. ಕೋಸಲ
ೇಶದ ಅಧಿಪತಿಯಾದ ಭಾನುಮಂತನ ಮಗಳು. ಇವಳ ಮಗನು ಶ್ರೀರಾಮ-
ಂದ್ರ. (ರಾಮಾಯಣ–ಬಾಲಕಾಂಡ ೭)

**ತ್ರಿಶಿರ:**—ದೂಷಣನೆಂಬ ರಾಕ್ಷಸರಾಜನ ನಾಲ್ಕು ಮಂದಿ ಮಂತ್ರಿಗಳಲ್ಲಿ
ಬ್ಬ. ಶೂರ್ಪಣಖೆಗಾದ ಅಪಮಾನದ ಮುಯ್ಯನ್ನು ತೀರಿಸಲೆಂದು,
ರೀರಾಮನ ಮೇಲೇರಿ ಹೋಗಿ, ಅವನಿಂದ ಕೊಲ್ಲಲ್ಪಟ್ಟನು.

**ದೂಷಣ:**— ವಿಶ್ರವಸ ಋಷಿ ಮತ್ತು ರಾಕಾ ಎಂಬ ರಾಕ್ಷಸಿ ಇವರ
ುಗ. ಖರನೆಂಬ ರಾಕ್ಷಸನು ಇವನ ಅಣ್ಣ. ಖರನ ಸೇನಾಪತಿಯಾದ ಇವನು
ಾಮನ ಸಂಗಡ ಯುದ್ಧ ಮಾಡಿ ಮಡಿದನು. (ಭಾರತ–ವನ ೨೯೭)

**ಖರ:**— ಇವನು ದೂಷಣನ ಅಣ್ಣ. ರಾವಣನ ಮಲತಮ್ಮ, ಶೂರ್ಪ
ಣಖೆ ಇವನ ತಂಗಿ. ರಾಮನ ಸಂಗಡ ಯುದ್ಧ ಮಾಡಿ ತೀರಿದನು.

(ಭಾರತ–ವನ ೨೭೮)

**ಗರುವ**=ಉತ್ತಮ; ಶ್ರೇಷ್ಠ

ಇಲ್ಲಿ ಕೃಷ್ಣಾವತಾರದ ಕಥೆಯಿದೆ:

**ಪನ್ನಗ**=ಕಾಳಿಯನೆಂಬ ಸರ್ಪ.

(**ಗೋವರ್ಧನಗಿರಿ:**— ಮಥುರೆಯಿಂದ ಗೋವರ್ಧನವು ೧೬ ಮೈಲಿನ
ಲ್ಲಿದೆ. ಇದೊಂದು ಪರ್ವತಪ್ರದೇಶ. ಇದರ ಉದ್ದಳತೆ ೪ ಮೈಲು
ದ್ದರೂ ಎತ್ತರ ಮಾತ್ರ ತೀರ ಕಡಮೆ.)

**ಗೋವರ್ಧನ ಗಿರಿಯೆತ್ತಿ:**— ಗೊಲ್ಲರು ಇಂದ್ರಯಾಗ ಮಾಡ
ಬೇಕೆಂದಿರುವಾಗ ಶ್ರೀಕೃಷ್ಣ ಆ ಯಾಗವನ್ನು ಬಿಟ್ಟು, ಗೋವರ್ಧನಗಿರಿಯ ಪೂಜೆ
ಮಾಡಬೇಕೆಂದು ಹೇಳಿದನು. ಇದರಿಂದ ಇಂದ್ರನು ಸಿಟ್ಟಾಗಿ ಅತಿವೃಷ್ಟಿಯನ್ನು

ಪ್ರಾರಂಭಿಸಿದಾಗ, ಶ್ರೀಕೃಷ್ಣನು ಗೋವರ್ಧನಗಿರಿಯನ್ನು ಎತ್ತಿ ಹಿಡಿದು ಗೋ
ರನ್ನೂ ಗೋವುಗಳನ್ನೂ ರಕ್ಷಿಸಿದನು. (ಭಾಗವತ ೧೦, ೨೪-೨

**ಪಾರಿಜಾತ:**— ಇದು ಕ್ಷೀರಸಮುದ್ರದಲ್ಲಿ ಹುಟ್ಟಿದ ೧೪ ರತ್ನಗಳ
ಒಂದು. ಇಂದ್ರನು ಇದನ್ನು ಸುರಲೋಕಕ್ಕೆ ಒಯ್ದಿದ್ದನು. ಸತ್ಯಭಾಮೆ
ಅಪೇಕ್ಷೆಯಂತೆ ಇದನ್ನು ಶ್ರೀಕೃಷ್ಣನು ಸ್ವರ್ಗದಿಂದ ಅಪಹರಿಸಿ ದ್ವಾರಕೆಗೆ ತೆಗೆ
ಕೊಂಡು ಬಂದನು. (ಭಾಗವತ ೧೦-೫

**ವಿಪ್ರ**=ಗುರುವಾದ ಸಾಂದೀಪನಿ

**ಪೋದಪತ್ಯವನಿತ್ತ** = (ಹಾಡು ೨೩. ನುಡಿ ೩)

೯ ಬೌದ್ಧಾವತಾರದ ಕಥೆ ಇಲ್ಲಿ ನಿರೂಪಿತವಾಗಿದೆ.

**ಖೇಚರ** = ಆಕಾಶಮಾರ್ಗ

**ಸಾಮಜವರದ** = ಕರಿರಾಜವರದ

೧೦ ಕಲ್ಕ್ಯವತಾರದ ಕಥೆಯನ್ನು ಇಲ್ಲಿ ಕಾಣಬಹುದು.

**ಚರ್ಮ** = ಢಾಲು, ಹರಿಗೆ

**ದ್ರುಹಿಣ** = ಬ್ರಹ್ಮ

**ಕಲಿದನುಜ** = ಕಲಿಯುಗದ ರಾಕ್ಷಸರು, ಕಲಿಪುರುಷ.

**ದಿನಮಣಿ**=ಸೂರ್ಯ

೧೧ **ಆದಿತ್ಯ**=ಅದಿತಿಯ ಮಕ್ಕಳು, ದೇವತೆಗಳು.
**ತ್ರಿಸ್ಥಾನ** = ಶ್ವೇತದ್ವೀಪ. ಅನಂತಾಸನ, ವೈಕುಂಠ.

## ೧೩೪ನೆಯ ಹಾಡು

೧ **ಅಹೋಬಲ-ನರಸಿಂಹ:** — ಮದ್ರಾಸ್—ರಾಯಚೂರು ರೇಲ್
ಮಾರ್ಗದ ಮೇಲಿರುವ ಕಡಪಾ ನಿಲ್ದಾಣದಿಂದ ಅಹೋಬಲಕ್ಕೆ
ಹೋಗುವ ದಾರಿಯಿದೆ. ಇಲ್ಲಿ ಶ್ರೀನರಸಿಂಹನ ಒಂಬತ್ತು ಬೇರೆಬೇ

ಹೆಸರಿನ ವಿಗ್ರಹಗಳಿವೆ. ಸ್ಥಳಪುರಾಣದಲ್ಲಿ ಇದು ಹಿರಣ್ಯಕಶಿಪುವಿನ ರಾಜಧಾನಿಯಾಗಿತ್ತೆಂಬ ಉಲ್ಲೇಖವಿದೆ.

**ತರಣಿ**=ಸೂರ್ಯ

**ತಾರಾಪತಿ**= ಚಂದ್ರ

**ಪುರಂದರ**=ಇಂದ್ರ

**ಗರುಡಾದ್ರಿ**=ಅಹೋಬಲದಲ್ಲಿರುವ ಮೂರು ಬೆಟ್ಟಗಳಲ್ಲಿ ಒಂದು.

## ೧೩೫ನೆಯ ಹಾಡು

**ಪಂಥವಾಡಿ**=ಜಿದ್ದುಕಟ್ಟಿ

**ಅವರು**=ಬಂಧುಬಾಂಧವರು ಮತ್ತು ತಂದೆ-ತಾಯಿ.

**ಇವರು**=ಸತಿಸುತರು

## ೧೩೬ನೆಯ ಹಾಡು

**ಸತಿ**=ದ್ರೌಪದಿ

**ಸತಿಯ ಸಮಯ**=ದ್ರೌಪದಿಯ ಸೀರೆಸೆಳೆಯುವ ಪ್ರಸಂಗ

(ಮದಗಜ) **ಅದರ ಸಮಯ**=ಮೊಸಳೆ ಅದರ ಕಾಲನ್ನು ಹಿಡಿದಾಗ.

**ಶಿಲೆಯ ಕಾಯ**=ಕಲ್ಲಾದ ಅಹಲ್ಯೆ

**ಬಲಿಯೆನ್ನದೆ**=ಬಲಿ ರಾಕ್ಷಸನೆನ್ನದೆ

## ೧೩೭ನೆಯ ಹಾಡು

**ಬಲುಭವ**= ಘೋರಸಂಸಾರ

**ಪಾಪ....ಲೇಪವಾಗಿರೆ**:— ಪೂರ್ವಜನ್ಮದ ಪಾಪಪರಿಣಾಮದಿಂದ ಈ ಜನ್ಮದಲ್ಲಿ ಕಷ್ಟಪಡುತ್ತಲಿರಲು

## ೧೩೮ನೆಯ ಹಾಡು

**ಅಳುಪು**=ದುರಾಶೆಪಡು

**ಪರಸತಿಯರ ಒಲುಮೆ ನಿನಗೆ ಒಪ್ಪಿತು:—** ಕೃಷ್ಣಾವತಾರದ
ಗೋಪಿಯರೊಂದಿಗೆ ಆಡಿದ ಲೀಲೆಯನ್ನೆತ್ತಿ ದಾಸರು ಹೇಳಿದ ಮಾತಿದು.

## ೧೪೯ನೆಯ ಹಾಡು

೧ **ಕಾವೇರಿರಂಗ** = ಆದಿರಂಗ, ಮಧ್ಯರಂಗ ಅಂತರಂಗಗಳಲ್ಲಿ
ಶ್ರೀರಂಗನಾಥ. (ಹಾಡು ೫೨, ನುಡಿ ೧ ಮತ್ತು

**ದ್ರುಪದ** = ಪಾಂಚಾಲದೇಶದ ರಾಜ:— ಇವನು ಸೋಮಕವಂಶ
ಪೃಷತ ಮತ್ತು ಮೇನಕೆಯರ ಮಗ. ಇವನಿಗೆ ಯಜ್ಞಸೇನ, ಪಾಂಚಾಲ ಮತ
ಪಾರ್ಷತ ಎಂಬ ಹೆಸರುಗಳಿವೆ. ದ್ರೌಪದಿ ಇವನ ಮಗಳು. ದ್ರೋಣಾ
ಚಾರ್ಯರ ಸಹಪಾಠಿ. ದ್ರೋಣಾಚಾರ್ಯರು ಇವನನ್ನು ಯುದ್ಧದ
ಸಂಹರಿಸಿದರು. (ಭಾರತ-ಆದಿ ೧೪೦, ೧೫೦, ೧೮೦; ದ್ರೋಣ. ೧೮೭)

೨ **ನಾರಗ:—** ನಾರಾಯಣ ಎಂಬುದರ ಸಲುಗೆಯ ಹೆಸರು. ಅಜಾಮಿ
ಮತ್ತು ಅವನ ಶೂದ್ರಸ್ತ್ರೀ—ಇವರ ಮಗ.

೩ **ಪರವಸ್ತು** = ಪರಮಾತ್ಮ

## ೧೫೦ನೆಯ ಹಾಡು

೧ **ವಿಧಿ** = ಸಾಧಕನು ಮಾಡತಕ್ಕ ಕಾರ್ಯನಿಯಮ.

**ನಿಷೇಧ** = ಸಾಧಕನು ಮಾಡಬಾರದ ಕಾರ್ಯದ ನಿಯಮ,

**ಗಯೆ:—** ಕಲಕತ್ತೆಯಿಂದ ದಿಲ್ಲಿಗೆ ಹೋಗುವ ಪೂರ್ವರೇಲ್ವೆಯ ಮೇ
ಗಯಾ ಒಂದು ಪ್ರಸಿದ್ಧ ನಿಲ್ದಾಣ. ಪಾಟ್ನಾ ಪಟ್ಟಣದಿಂದ ಗಯೆಯವರ
ಒಂದು ರೇಲ್ವೆದಾರಿಯೂ ಇದೆ. ಇದು ಪಿತೃಕ್ಷೇತ್ರ. ಇಲ್ಲಿ ವಿಷ್ಣುಪಾದ
ಮಂದಿರವೇ ಮುಖ್ಯ ಮಂದಿರವು. ಈ ಪಟ್ಟಣದ ಪೂರ್ವಕ್ಕೆ ಫಲ್ಗುನ
ಹರಿಯುತ್ತಿದೆ.

**ವಾರಣಾಸಿ:—** (ವಾರಾಣಸಿ) ವರಣಾ ಮತ್ತು ಅಸೀನದಿಗಳ ಸಂಗ
ದಲ್ಲಿದೆ. ಇದಕ್ಕೆ ಕಾಶಿಯೆಂದೂ ಹೆಸರಿದೆ. ಇಲ್ಲಿಯ ವಿಶ್ವೇಶ್ವರಮಂದಿರ

ಪ್ರಸಿದ್ಧವಿದೆ. ಇದು ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದು. ಇದರ ಹತ್ತಿರದಲ್ಲಿ ಗಂಗಾನದಿ ಹರಿಯುತ್ತಿದೆ.

**ಕುರುಕ್ಷೇತ್ರ:—** ಉತ್ತರಪ್ರದೇಶದಲ್ಲಿ ದಿಲ್ಲಿಯ ಬಳಿಯಲ್ಲಿರುವ ಒಂದು ದೊಡ್ಡ ಬಯಲು. ಇದು ೨೫೦೦ ಚದುರುಮೈಲು ವಿಸ್ತಾರವಾಗಿದೆ. ಇದು ಧರ್ಮಕ್ಷೇತ್ರವೆಂದು ಭಗವದ್ಗೀತೆ (೧/೧) ಹೇಳುತ್ತದೆ. ಇಲ್ಲಿ ಏಳು ಪುಣ್ಯನದಿಗಳು ಹರಿದಿರುವುವಲ್ಲದೆ, ಎಷ್ಟೋ ತೀರ್ಥಗಳಿವೆ.

೨ **ಭಾಗವತಜನ**=ಶ್ರೀಹರಿಯ ಭಕ್ತರು.

೩ **ಗಾಯತ್ರೀಮಂತ್ರ:** –ಇದಕ್ಕೆ ಸಾವಿತ್ರಿ, ಸರಸ್ವತಿ ಎಂಬ ನಾಮಾಂತರಗಳೂ ಇವೆ. ಗಾಯತ್ರಿಯ ಉಪಾಸನೆ ಮಾಡುವುದಕ್ಕೆ ಸಾಧನವಾದ ಈ ಮಂತ್ರಕ್ಕೆ ಗಾಯತ್ರೀಮಂತ್ರವೆಂಬ ಹೆಸರಿದೆ. ಇದು ವೈದಿಕ ಮಂತ್ರ. ಗಾಯತ್ರೀ ಛಂದಸ್ಸಿನಲ್ಲಿದೆ.

**ಲಕ್ಷಪ್ರದಕ್ಷಿಣೆ:—** ಲಕ್ಷ ನಮಸ್ಕಾರ, ಲಕ್ಷ ಪ್ರದಕ್ಷಿಣೆ, ಲಕ್ಷ ಬತ್ತಿ ಮುಂತಾದುವು ವ್ರತಗಳಲ್ಲಿ ಸಮಾವೇಶಗೊಂಡಿವೆ.

೪ **ಆಗಾಮಿಕರ್ಮ:—** ಕರ್ಮಗಳಲ್ಲಿ ಮೂರುವಿಧ. ಪೂರ್ವಜನ್ಮದ ಕರ್ಮ–ಸಂಚಿತಕರ್ಮ. ಸಂಚಿತಕರ್ಮದಲ್ಲಿ ಸದ್ಯ ಅನುಭವಿಸುವ ಭಾಗ ಪ್ರಾರಬ್ಧಕರ್ಮ. ಈ ಜನ್ಮದಲ್ಲಿ ಮಾಡುವ ಕರ್ಮಗಳು ಆಗಾಮಿ ಕರ್ಮಗಳು.

೫ **ಪ್ರಾಯೋಪವೇಶ**=ಅನ್ನನೀರುಗಳನ್ನು ತೊರೆದು ಪ್ರಾಣಬಿಡುವುದು. ಇದೊಂದು ವ್ರತ. ಜೈನರಲ್ಲಿ ಇಂತಹ ವ್ರತಕ್ಕೆ 'ಸಲ್ಲೇಖನ' ಎಂಬ ಹೆಸರಿದೆ.

**ಸಮಾಧಿ:—** ಪರಮಾತ್ಮನಲ್ಲಿ ಚಿತ್ತವನ್ನು ಕೇಂದ್ರೀಕರಿಸುವುದು. (ಪಾತಂಜಲ ಯೋಗಸೂತ್ರದಲ್ಲಿ ಇದರ ವಿವರಣೆಇದೆ.)

ವಿ. ಸೂ. : ಭಗವದ್ಭಕ್ತಿಗೆ ಬೇರೆ ಯಾವ ಆಚಾರ-ವಿಚಾರಗಳು ಅಗತ್ಯವಿಲ್ಲವೆಂಬ ಭಾವ ಈ ಹಾಡಿನಲ್ಲಿದೆ. ಪ್ರತಿಯೊಂದು ಕರ್ಮವೂ ಹರಿಯುಸೇವೆಯೆಂದು ಭಾವಿಸಬೇಕೆಂದು ದಾಸರು ಇಲ್ಲಿ ಹೇಳಿದ್ದಾರೆ.

## ನಾಣ್ನುಡಿಗಳು

೧ ಮದದಾನೆ ಪೋದುದೆ ಬೀದಿ

೨ ಸೆಟ್ಟಿ ಮೆಟ್ಟಿದ್ದೆ ಪಟ್ಟಣ

## ೧೪೧ನೆಯ ಹಾಡು

ಜೀವರನ್ನು ಶ್ರೀಹರಿಯಲ್ಲದೆ ಬೇರೆ ಯಾರೂ ರಕ್ಷಿಸಲಾರರು—ಎಂದು ದಾಸರು ಹಾಡಿದ್ದಾರೆ.

೧ **ಉಗ್ರಸೇನ:**— ಅಂಧಕವಂಶದ ಆಹುಕರಾಜನ ಎರಡನೆಯ ಮಗ. ಇವನ ಹೆಂಡತಿ ಪದ್ಮಾವತಿ. ಮಗ ಕಂಸ ಮುಂ. ಕಂಸನು ಇವನನ್ನು ಪಟ್ಟದಿಂದ ತಳ್ಳಿ ತಾನೇ ಪಟ್ಟವೇರಿದ್ದ. ಕೃಷ್ಣನು ಕಂಸನನ್ನು ಕೊಂದು ಇವನನ್ನು ಮತ್ತೆ ಪಟ್ಟಕ್ಕೆ ಕುಳ್ಳಿರಿಸಿದನು.

೨ **ದಾತೃ**=ದಾನಿ.

## ೧೪೨ನೆಯ ಹಾಡು

೧ **ಅಕ್ಕಸ (ಆಕ್ರೋಶ)**=ಮೊರೆ

೨ **ತಲೆಹತ್ತರವ**=ರಾವಣ

**ಉತ್ತಾನಪಾದ:**— ಸ್ವಾಯಂಭುವ ಮನು ಹಾಗು ಶತರೂಪೆ ಇವರ ಕಿರಿಯ ಮಗ. ಈತನಿಗೆ ಸುನೀತಿ, ಸುರುಚಿ ಎಂಬ ಇಬ್ಬರು ಹೆಂಡಂದಿರು. ಧ್ರುವನು ಸುನೀತಿಯ ಮಗನು.

## ೧೪೩ನೆಯ ಹಾಡು

೧ **ಗೋಕರ್ಣ:**— ಉತ್ತರಕನ್ನಡ ಜಿಲ್ಲೆಯ ಸಮುದ್ರತೀರದಲ್ಲಿರುವ ಒಂದು ಪುರಾಣಪ್ರಸಿದ್ಧವಾದ ಕ್ಷೇತ್ರ. ಇದು ಹುಬ್ಬಳ್ಳಿಯಿಂದ ೧೦೦ ಮೈಲಿನ ಮೇಲಿದೆ. ಇಲ್ಲಿಯ ಮಹಾಬಳೇಶ್ವರನ ದೇವಸ್ಥಾನವು ರಾಮಾಯಣಕಾಲದಿಂದಲೂ ಹೆಸರಾಗಿದೆ.

೨ **ಭೂವೈಕುಂಠ**=ತಿರುಪತಿ.

೩ **ಪರಕೆನಡಸು**=ಹರಕೆಯನ್ನು ಒಪ್ಪಿಸು.

## ೧೪೪ನೆಯ ಹಾಡು

ಭಕ್ತನ ಪ್ರತಿಯೊಂದು ಕರ್ಮವೂ ಹರಿಸೇವೆಯಾಗಿದೆಯೆಂಬ ಭಾವ ಈ ಗೀತದಲ್ಲಿದೆ.

೧ **ಎಡೆ**=ಬಡಿಸಿದ ಎಲೆ.

೨ **ಬೆಳ್ಪುಡೆ**=ಮಡಿಬಟ್ಟೆ

೩ **ನಾಟಕಧಾರಿ**=ತನ್ನ ಲೀಲೆಗಾಗಿ ಸೃಷ್ಟಿಸ್ಥಿತಿಲಯಗಳೆಂಬ ನಾಟಕಗಳನ್ನು ಆಡುವವ, ಮತ್ತು ಆಡಿಸುವವ; ಪರಮಾತ್ಮ.

**ಕೈಟಭಮರ್ದನ**=(ಶ್ರೀಹರಿ) ಕೈಟಭನು ಮಧುಧೈತ್ಯನ ತಮ್ಮ. ಇವರಿಬ್ಬರೂ, ಶ್ರೀಹರಿಯ ಆಲದೆಲೆಯ ಮೇಲೆ ಮಲಗಿದ ಬಾಲರೂಪದ ಕರ್ಣಮಲದಿಂದ ಜನಿಸಿದವರು. ಇವರು ಚತುರ್ಮುಖ ಬ್ರಹ್ಮನನ್ನು ಕಾಡತೊಡಗಿದಾಗ, ಬ್ರಹ್ಮನ ಮೊರೆಕೇಳಿ ಶ್ರೀಹರಿ ಇವರನ್ನು ಉಪಾಯದಿಂದ ಕೊಂದನು,

(ಭಾರತ, ವನ. ೧೦೬)

**ಅಂತರ್ಯಾಮಿ**=ಜೀವರಲ್ಲಿ ನೆಲಸಿದವ.

**ಕಪಟನಾಟಕ** = ಸೃಷ್ಟಿ ಮುಂತಾದುವುಗಳ ಬಂಧನವಿಲ್ಲದೆ, ಅವುಗಳನ್ನು ನಡಸುವವ.

೪ **ಜಾಗರ**=ಎಚ್ಚರಿಕೆ

**ಭದ್ರಗಜನಿಧಿ**=ಪಟ್ಟದಾನೆಯ ವರೆಗಿನ ಸಂಪತ್ತು.

**ಮಾಯೆ**=ಇಚ್ಛೆ.

೫ **ಮುದ್ರೆ**=ಧಾರ್ಮಿಕಚಿಹ್ನ

**ಪ್ರಣವ**=ಓಂಕಾರ

## ೧೪೫ನೆಯ ಹಾಡು

೧ **ಸಾಯುಜ್ಯ**=ಮುಕ್ತಿಯ ಒಂದು ವಿಧ. ಮುಕ್ತಿಸ್ಥಿತಿಯಲ್ಲಿ ನಾಲ್ಕು ವಿಧಗಳಿವೆ. ಪ್ರತಿಯೊಂದು ವಿಧವು ಬೇಬೇರೆ ಅಧಿಕಾರಿಗಳಿಗೆ ದೊರೆಯುವುದು.

೧ **ಸಾಲೋಕ್ಯ** — ಮುಕ್ತಿಯೋಗ್ಯ ಮಾನವನಿಗೆ ಮಾತ್ರ ಈ ಮುಕ್ತಿ.

೨ **ಸಾಮೀಪ್ಯ**—ಋಷಿಗಳಿಗೆ ಅವರವರ ಯೋಗ್ಯತೆಯಂತೆ ಈ ಮುಕ್ತಿ ದೊರಕುತ್ತದೆ.

೩ **ಸಾರೂಪ್ಯ**—ಪರಮಾತ್ಮನ ಪರಿವಾರದವರಾದ ಜಯ-ವಿಜಯ ಮೊದಲಾದವರಿಗೆ ಇಂತಹ ಮುಕ್ತಿಯಿದೆ.

೪ **ಸಾಯುಜ್ಯ**—ಇದು ದೇವತೆಗಳಿಗೆ ಮಾತ್ರ ದೊರಕುವ ಮುಕ್ತಿ.

ಚತುರ್ಮುಖ ಬ್ರಹ್ಮನೊಬ್ಬನೇ ಪೂರ್ಣಸಾಯುಜ್ಯಸ್ಥಿತಿಯನ್ನು ಅನುಭವಿಸಬಲ್ಲನು.

**ದಾವಾನಲನ ಪಿಡಿದು ನುಂಗಿದನ:**— ಒಂದುದಿನ ಗೋಕುಲದ ಗೋಪಾಲಕರು ಹಸುಗಳನ್ನು ಹೊಡೆದುಕೊಂಡು 'ಈಷಿಕಾ' ಎಂಬ ಅಡವಿಗೆ ಹೋದರು. ಅಲ್ಲಿ ಒಮ್ಮೆಲೆ ಬೇಗೆ ಹಬ್ಬಿ, ಗೋಪಾಲಕರು ದನಗಳು ಅದರಲ್ಲಿ ಸಿಕ್ಕಿಕೊಂಡು, ಎಲ್ಲರೂ ಕೃಷ್ಣನನ್ನು ಪ್ರಾರ್ಥಿಸತೊಡಗಿದರು. ಆಗ ಕೃಷ್ಣನು ತನ್ನ ಯೋಗಶಕ್ತಿಯಿಂದ, ಆ ಬೇಗೆಯನ್ನು ನುಂಗಿಬಿಟ್ಟನು. (ಭಾಗವತ ೧೦/೧೯)

೨ **ಕುಂಜರ**=ಆನೆ

**ಧನಂಜಯನ ಜೀವವಂ........ಕಾಯ್ದವನ:**—

ಮಹಾಭಾರತದಲ್ಲಿ ಶ್ರೀಕೃಷ್ಣನು ಅರ್ಜುನನ ಜೀವವನ್ನು ಕರುಣೆಯಿಂದ ಉಳಿಸಿದ ಪ್ರಸಂಗಗಳಲ್ಲಿ ಕೆಳಗಿನವೆರಡು ಮುಖ್ಯವಾಗಿವೆ;

(೧) ಅಭಿಮನ್ಯುವಧೆಯಾದ ಮೇಲೆ ಅರ್ಜುನನು ಪ್ರತಿಜ್ಞೆಮಾಡಿದಂತೆ ಅಗ್ನಿ ಪ್ರವೇಶಕ್ಕೆ ಸಿದ್ಧನಾಗಲು, ಮರೆಮಾಡಿದ್ದ ಸೂರ್ಯನನ್ನು ಮತ್ತೆ ತೋರಿಸಿ, ಶ್ರೀಕೃಷ್ಣ ಜಯದ್ರಥನನ್ನು ಅವನಿಂದ ಕೊಲ್ಲಿಸಿ, ಅರ್ಜುನನ ಜೀವ ಉಳಿಸಿದನು.

(೨) ಯುದ್ಧದಲ್ಲಿ ಕರ್ಣನು ಸರ್ಪಾಸ್ತ್ರ ಹೂಡಿದಾಗ, ರಥವನ್ನು ಭೂಮಿಗೊತ್ತಿ, ಅರ್ಜುನನ ಕುತ್ತಿಗೆಗೆ ಅದು ತಾಗದಂತೆ ಕಾಪಾಡಿದನು.

**ನಂಜಿನೊಡೆಯ**=ಆದಿಶೇಷ

**ತನುದೊಳಗೆ........ಬೆಳಗುವವನ**=ಪ್ರಳಯಕಾಲದಲ್ಲಿ ಅಂಧಂತ ಮಸ್ಸು ಮುಸುಕಿದಾಗ ಪರಮಾತ್ಮನು, ದಿವ್ಯಜ್ಯೋತಿಯಾಗಿ ಕಾಣಿಸಿಕೊಳ್ಳು ವನು.

(ತುಚ್ಛೇನಾಭ್ವಾ ಸಹಿತಂ. ಬ್ರ. ಸೂ. ಭಾ. ೨/೩ ಛಾಂದೋಗ್ಯೋದಾಹೃತಶ್ರುತಿ)

## ೧೪೬ನೆಯ ಹಾಡು

೧ **ತಾಮಸಬುದ್ಧಿ**=ಅಜ್ಞಾನವು ಮುಸುಕಿದ ಬುದ್ಧಿ.

**ಶ್ರವಣ**=ಕಿವಿ

೨ **ಹಾನಿವೃದ್ಧಿಗಳೆರಡನು ತಾ ಸಹಿಸಿ** = (ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ–ಭಗವದ್ಗೀತೆ ೨/೩೮)

**ಮಾನಾಪಮಾನ ಸಮಾನವೆಂದರಿದು**— (ಸಮಃಶತ್ರೌಚ ಮಿತ್ರೇಚ ತಥಾ ಮಾನಾಪಮಾನಯೋಃ. ಭಗವದ್ಗೀತೆ ೧೨–೧೮)

**ಸರ್ವಾಂತರ್ಯಾಮಿ**— (ಏಕಸ್ತಥಾ ಸರ್ವಭೂತಾಂತರಾತ್ಮಾ–ಕಾಠಕೋಪನಿಷತ್ ಅ. ೨ ವಲ್ಲಿ ೨.)

**ಸರ್ವೇಶ್ವರ**— (ತಮೀಶ್ವರಾಣಾಂ ಪರಮಂ ಮಹೇಶ್ವರಮ್ ।
ಶ್ವೇತಾಶ್ವತರ ಉಪ. ಅ. ೬. ಶ್ಲೋ. ೭)

**ಸ್ವರಮಣ**;—ತನ್ನಲ್ಲಿಯೇ ದಿವ್ಯಾನಂದವನ್ನು ಅನುಭವಿಸುವವ
(ಭಾರತತಾತ್ಪರ್ಯ ೧–೨– ಸ್ವರತಃ)

**ಸರ್ವಾನುಗ**=ಎಲ್ಲರಿಗೂ ಬೆಂಬಲವಾಗಿರುವವ. (ಮಯಾತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ. (ಭಗವದ್ಗೀತೆ. ೯–೪)

## ೧೪೭ನೆಯ ಹಾಡು

೨ **ಮೇಳ**=ಕಲಾವಿದರ ಗುಂಪು

**ಅಖಿಳವಾದ್ಯ**=ವಾದ್ಯಗಳಲ್ಲಿ ನಾಲ್ಕು ವಿಧಗಳಿವೆ :

೧) **ಆನದ್ಧ**=ಮುಚ್ಚಿಗೆಯುಳ್ಳ ವಾದ್ಯ. ಉದಾ:— ಮದ್ದಳೆ, ತಬಲಾ ಮುಂ.

೨) **ಸುಷಿರ**=ಊದುವುದರಿಂದ ಸ್ವರಹೊರಡಿಸುವ ವಾದ್ಯ.
ಉದಾ:— ಕೊಳಲು, ಬಜಂತ್ರಿ, ಶಂಖ.

೩) **ತತ**=ತಂತಿಯುಳ್ಳ ವಾದ್ಯ. ಉದಾ:— ತಂಬೂರಿ, ವೀಣೆ ಮುಂ.

೪) **ಘನ**=ಬಡಿದು ಬಾರಿಸುವ ವಾದ್ಯ. ಉದಾ:— ತಾಳ, ಜಾಂಗಟೆ ಗಂಟೆ.

**ಕೊಂಬು**=ಪಶುಗಳ ಕೊಂಬಿನಿಂದಾದ ವಾದ್ಯ.

**ಸಾರ**=ಸವಿ; ತಿರುಳು

೨ **ಭಾವ**=ಮನಸ್ಸಿನ ಏರಿಳಿತಗಳ ಸೂಚನೆ

**ಸ್ವರಜ್ಞಾನ**=ಸಂಗೀತಶಾಸ್ತ್ರದ ಮೂಲಭೂತವಾದ ಹನ್ನೆರಡು ಸ್ವರ ಅಥವಾ ೨೨ ಶ್ರುತಿಗಳ ಜ್ಞಾನ.

**ಮನೋಧರ್ಮ**=ರಾಗದ ಸ್ವರೂಪವನ್ನು ಸ್ವತಂತ್ರವಾಗಿ ವಿಸ್ತಾರ ಮಾಡಿ ಪ್ರದರ್ಶಿಸುವುದು.

**ಜಾತಿ**=ತಾಳಗಳ ಜಾತಿ.

೩ **ಹರಿಕೀರ್ತನ** = ಶ್ರೀಹರಿಯ ಮಹಿಮೆ-ಸ್ತೋತ್ರಗಳಿಂದ ಕೂಡಿದ ಹಾಡು.

## ೧೪೮ನೆಯ ಹಾಡು

೧ **ಮುಚುಕುಂದ:**— ಸೂರ್ಯವಂಶದ ಮಾಂಧಾತ ಮತ್ತು ಬಿಂದುಮತಿ ಇವರ ಮಗ. ದೇವ-ದಾನವರ ಯುದ್ಧದಲ್ಲಿ ದೇವತೆಗಳಿಗೆ ನೆರವಾದುದ ರಿಂದ, ಅವರು ವರ ಬೇಡೆನಲು 'ನನಗೆ ನಿದ್ದೆಬೇಕಾಗಿದೆ, ಹಾಗು ನಿದ್ದೆ ಯಿಂದೆದ್ದಾಗ—ನನ್ನ ಕಣ್ಣಿಗೆ ಮೊದಲು ಕಂಡವನು ಸುಟ್ಟು ಬೂದಿ ಯಾಗಲಿ; ಅಲ್ಲದೆ ಶ್ರೀಹರಿಯು ನನ್ನನ್ನು ಅನುಗ್ರಹಿಸಲಿ' ಎಂದು ಬೇಡಿಕೊಂಡ. ಇವನು ಒಂದು ಗವಿಯಲ್ಲಿ ಮಲಗಿದ್ದ. ಕೃಷ್ಣನು ಕಾಲಯುವನನನ್ನು ಉಪಾಯದಿಂದ ಈ ಗವಿಯಲ್ಲಿ ಹೊಗಿಸಿ, ಮುಚು-ಕುಂದನಿಂದ ಕೊಲ್ಲಿಸಿದನು. (ಭಾಗವತ ೧೦/೫೧)

**ವಿ. ಸೂ.** :— ಇದೊಂದು ಮಾಲೋಪಮೆಗೆ ಉತ್ತಮವಾದ ಉದಾಹರಣೆ.

೨ **ಪ್ರೌಢ**=ಜ್ಞಾನಿಯಾದ ಭಕ್ತ

**ಪರಮಪದವಿ**=ಮುಕ್ತಿ

**ಬಟ್ಟೆ**=ದಾರಿ

**ಚಿರಸ್ವಭಾವ**=ಸ್ಥಿರವಾದ ಮನಸ್ಸು

**ಕಣ್ಣೊರತೆ**=ಕಣ್ಣೀರಿನ ಧಾರೆ (ಆನಂದಬಾಷ್ಪ)

**ಹರಿ**=ಸಿಂಹ

**ಇಳಿ**=ಇಡಿಯಾಗಿ

**ನೀನೆ ಕರ್ತನು:**—ಶ್ರೀಹರಿಯೊಬ್ಬನಿಗೆ ಕರ್ತೃತ್ವಶಕ್ತಿಯಿದೆ.

**ಅಕರ್ತರು ಅಜಭವೇಂದ್ರಾದ್ಯಮರರು:**- ಬ್ರಹ್ಮ-ರುದ್ರಾದಿಗಳಿಗೆ ಕರ್ತೃತ್ವವಿಲ್ಲ,

ಕರ್ತೃತ್ವಂ ಕರಣತ್ವಂಚ ಸ್ವಭಾವಶ್ಚೇತನಾ ಧೃತಿಃ ।
ಯತ್ಪ್ರಸಾದಾದಿಮೇ ಸಂತಿ ನಸಂತಿ ಯದುಪೇಕ್ಷಯಾ (ಪೈಂಗಿಶ್ರುತಿ ॥
ಬ್ರ. ಸೂ. ಭಾ. ಅ. ೨. ಪಾ. ೩. ಸೂ. ೪೧)

**ನೀನೇ ಸ್ವತಂತ್ರ ಅಸ್ವತಂತ್ರರವರು:**—

ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ ।
ಸ್ವತಂತ್ರೋ ಭಗವಾನ್ ವಿಷ್ಣುಃ ನಿರ್ದೋಷಾಖಿಲಸದ್ಗುಣಃ ॥
(ತತ್ತ್ವವಿವೇಕ.)

**ನೀನೆ ಸಾರಾತ್ಮಕನಾಗಿ ಸ್ವೀಕರಿಸಿಸುವವ:** — ಶ್ರೀಹರಿ ಎಲ್ಲದರ ...ರವನ್ನು ತಾನೇ ಸ್ವೀಕರಿಸುತ್ತಾನೆಂಬುದನ್ನು ಶ್ರೀಮದಾಚಾರ್ಯರು ವಿವರಿ...ದ್ದಾರೆ:

ಅನಂತೇಂದ್ರಿಯ ಸಂಭೋಗ್ಯಾನ್ ಅತರ್ಕ್ಯಾಂಶ್ಚ ರಮಾದಿಭಿಃ ।
ಪೃಥಕ್ಪೃಥಗನಂತಾಂಸ್ತಾನ್ ವಿಜಾತೀಯಾಂಶ್ಚ ಸರ್ವತಃ ।
ಸ್ವಯಮೇವ ಹರಿರ್ಭುಂಕ್ತೇ ಸರ್ವಾನ್ ಸರ್ವವಿಲಕ್ಷಣಾನ್ ॥
(ಸತ್ತತ್ತ್ವರತ್ನಮಾಲಾ)

(ರಮಾ-ಬ್ರಹ್ಮಾದಿಗಳ ಆಲೋಚನೆಗೂ ಸಿಲುಕದ ಅನಂತರಸಗಳನ್ನು ಶ್ರೀಹರಿ ...ೀಕರಿಸುತ್ತಾನೆ.)

**ಜ್ಞಾನ ನಿನ್ನಧೀನ ಕರ್ಮ ನಿನ್ನಧೀನ:**—

ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ ।
(ಅನುವ್ಯಾಖ್ಯಾನೇ)

ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವಚ ।
ಯದನುಗ್ರಹತಃ ಸಂತಿ ನಸಂತಿ ಯದುಪೇಕ್ಷಯಾ ॥ (ಅನುವ್ಯಾಖ್ಯಾನೇ

**ಅನಾದಿಕಾಲದಿ ಇರುವ ಜೀವರಿಗೆ:—**

ನತ್ವೇವಾಹಂ ಜಾತುನಾಸಂ ನತ್ವಂ ನೇಮೇಜನಾಧಿಪಾಃ
ನಚೈವ ನಭವಿಷ್ಯಾಮಃ ಸರ್ವೇವಯಮತಃಪರಮ್ (ಭಗವದ್ಗೀತೆ ೨/೧೨

**ಅನಾದಿಗಳು ಜೀವಕರ್ಮಜ್ಞಾನ:—** (ಭಾಗವತ ೨/೨-೨)

**ನಿನ್ನಧಿಸವಯ್ಯ ಅನಾದಿಕರ್ಮ:—** (ಬ್ರಹ್ಮಾಂಡ ಪುರಾಣ

(ಮಹಾಭಾರತ ಶಾ. ನಿ. ೨೨-೮೫)

೫ **ಸಂಕರ್ಷಣನೆನಿಸಿ ಶಂಕರನಲ್ಲಿ....ಸಂಹಾರಮಾಡುವೆ:—**

ಶಂಕರನಲ್ಲಿ ಸಂಕರ್ಷಣರೂಪದಿಂದಿದ್ದು ಸಂಹಾರಕಾರ್ಯ ನಡೆಸುವೆ.

ಸಂಕರ್ಷಣಃ ಸಚಬಭೂವ ಪುನಃ ಸುನಿತ್ಯಃ
ಸಂಹಾರ ಕಾರಣವಪುಃ ತದನುಜ್ಞಯೈವ ॥ (ಮಹಾಭಾರತ ತಾತ್ಪರ್ಯ ೧/೭

**ಸರಸಿಜೋದ್ಭವನಲ್ಲಿ... ವಾಸುದೇವನಾಗಿ....ಮಾಡುವೆ**

ಸಸೃಷ್ಟಿಹೇತೋಃ ಪ್ರದ್ಯುಮ್ನತಾಮುಪಗತಃ (ಮಹಾಭಾರತ ತಾತ್ಪರ್ಯ ೧/೭

ಬ್ರಹ್ಮನಲ್ಲಿ ವಾಸುದೇವನ ರೂಪದಲ್ಲಿದ್ದು (ತಾತ್ಪರ್ಯ ೧/೨ ನಿರ್ಣಯದಲ್ಲಿ ಪ್ರದ್ಯುಮ್ನ ಎಂದು ಉಲ್ಲೇಖವಿದೆ) ಸೃಷ್ಟಿ ಕಾರ್ಯನಡಸುವನು.

**ಅನಿರುದ್ಧನೆನಿಸಿ ಪಾಲನೆಮಾಡುವೆ ಅನಾದಿಕಾಲದಿ:—**

'ಸ್ಥಿತ್ಯೈ ಪುನಃ ಸ ಭಗವಾನ್ ಅನಿರುದ್ಧ ನಾಮಾ...... ಅಭವತ್

(ಮಹಾಭಾರತ ತಾತ್ಪರ್ಯ ೧/೮

ನಾರಾಯಣನು ಅನಿರುದ್ಧರೂಪದಿಂದ ಸೃಷ್ಟಿಯ ಪಾಲನೆ ಮಾಡುವನು

**ಬ್ರಹ್ಮರುದ್ರರೇ ಅವರು**=ಬಹ್ಮ-ರುದ್ರರು ಅನಿತ್ಯರು

೬ **ಸ್ಥಿತಿ**=ಪಾಲನೆ

೭ **ಆಭಾಸ**=ತೋರಿಕೆ, ನೆರಳು,

**ಭಾರತಿಯ ಗಂಡ:**—ವಾಯುದೇವರು ಶ್ರೀಹರಿಯ ದಾಸನೆಂದೆನಿಸಿ

**ಶೌಂಡ**=ಸಮರ್ಥ

**ದ್ವಿಸಾಸಿರಾಂಬಕ**=ಎರಡುಸಾವಿರ ಕಣ್ಣುಳ್ಳವ — ಶೇಷ.

**ಅಪ್ರಾಕೃತರೂಪ**:—(ಭಾಗವತ ೧೦ ಪೂರ್ವಾರ್ಧ-೩-೧೩).

೮ **ಅಪ್ಪುನಿಧಿಯಲ್ಲಿ ಪುಟ್ಟಿದವಳು** = ಕ್ಷೀರಸಾಗರದಲ್ಲಿ ಹುಟ್ಟಿದವಳು, ಲಕ್ಷ್ಮೀ (ರಮಾದೇವಿ)

೯ ನಿನ್ನ ನಾಮಸ್ಮರಣೆ ಎಂದೂ ಮರೆಯದಂತೆ ನನ್ನನ್ನು ಎಂದಿಗೂ ದುಃಖದ ತೊಡಕಿನಲ್ಲಿ ಸಿಲುಕಿಸು — ಎಂದು ದಾಸರ ಕೋರಿಕೆ.

೧೦ **ಮುದ್ರಿಕೆಯಿಂದ ಗಾಸಿಮಾಡಿಸು** = ತಪ್ತ ಮುದ್ರೆಕೊಟ್ಟು ನನ್ನನ್ನು ಪವಿತ್ರನನ್ನಾಗಿ ಮಾಡು.

**ವಿ. ಸೂ**:—ಭಕ್ತನ ಆಚಾರಗಳನ್ನು ಒಬ್ಬ ಸೆರೆಯಾಳಿನ ದಂಡನೆಗಳಿಗೆ ಹೋಲಿಸಿ ಇಲ್ಲಿ ವಿವರಿಸಿದ್ದಾರೆ.

## ನಾಣ್ನುಡಿ

## ಹುಟ್ಟಿಸಿದ ದೇವರು ಹುಲ್ಲುಮೇಯಿಸುವನೇ ?

### ೧೪೯ನೆಯ ಹಾಡು

(೧)

ಶ್ರೀಹರಿ ಪರಿಪೂರ್ಣನಿರುವನೆಂಬುದನ್ನು ದಾಸರು ವಿವರವಿವರವಾಗಿ ಇದರಲ್ಲಿ ಹೇಳಿದ್ದಾರೆ. ಇದೇ ವಿಚಾರವು ಈಶಾವಾಸ್ಯೋಪನಿಷತ್ತಿನ ಶಾಂತಿ ಮಂತ್ರದಲ್ಲಿ ಕಾಣುತ್ತದೆ:—

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ ॥

* * * *

ತಥೈವಾವಯವಾನಾಂಚ ಗುಣಾನಾಂಚ ಪರಸ್ಪರಂ ॥
ಕ್ರಿಯಾಣಾಂ ತೇನ ಚೈತೇಷಾಂ ಭೇದವಿಚ್ಛೋಭಯಂ ಪದಃ ॥
ಯಾಂತ್ಯೇವಾಂಧಂತಮೋ ನಾತ್ರ ಕಾರ್ಯಾ ವಿಚಾರಣಾ ॥

(ಕಾಠಕೋಪನಿಷದ್ಭಾಷ್ಯೇ)

**ಜಾನು** = ಮೊಣಕಾಲು. **ಜಂಘೆ** = ಕಣಕಾಲು, **ಊರು** = ತೊಡೆ. **ಕಟಿ** = ನಡು. **ತ್ರಿವಳಿ** = ಕಿಬ್ಬೊಟ್ಟೆಯ ಮೇಲಿನ ಮೂರು ಗೆರೆಗಳು.
(ಇವು ಸೌಂದರ್ಯದ ಲಕ್ಷಣವೆಂದು ಕವಿಗಳು ಬಣ್ಣಿಸುತ್ತಾರೆ.)

**ಕಂಬು**=ಶಂಖ

**ವಿ.ಸೂ.**— ಪರಮಾತ್ಮನ ಪ್ರತಿಯೊಂದು ಅಂಗವೂ ಪರಿಪೂರ್ಣವಾಗಿದೆಯೆಂಬುದು ಇದರ ಭಾವ.

(೨)

ಪರಮಾತ್ಮನ ಭಾವಗಳೂ ಪರಿಪೂರ್ಣವೆಂಬ ವಿಚಾರವನ್ನು ಇಲ್ಲಿ ಕಾಣಬಹುದು.

**ಹಮ್ಮು**=ಅಹಂಕಾರ

**ಮುನ್ನು**=ಸಿಟ್ಟು,

**ಸುಮ್ಮಾನ**=(ಸುಮ್ಮಾನ) ಸಂತೋಷ

(೩)

**ಅನಂತಬಾಹು** ...

ಅನೇಕ ಬಾಹೂದರ ವಕ್ತ್ರನೇತ್ರಂ......(ಭಗವದ್ಗೀತೆ ೧೧/೧೬)
ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್
(ಋಗ್ವೇದ ೧೦ನೆಯ ಮಂಡಲ ೯ನೆಯ ಸೂಕ್ತ)

(೪)

ಪರಮಾತ್ಮನ ದಶೇಂದ್ರಿಯಗಳೂ ಪರಿಪೂರ್ಣ.

**ಶ್ರೋತುರ**=ಕಿವಿ, **ನೇತುರ**=ಕಣ್ಣು, **ರಸನ**=ನಾಲಗೆ, **ಪಾಯು**=ಗುದದ್ವಾರ, **ಉಪಸ್ಥ**=ಜನನೇಂದ್ರಿಯ. **ಮಾತರಿಶ್ವ**=ವಾಯುದೇವರು.

(೫)

ಸರ್ವರಲ್ಲಿ ಸರ್ವತ್ರದಲ್ಲಿ ಸರ್ವಕಾಲದಲ್ಲಿ ಪರಮಾತ್ಮನೊಬ್ಬನೇ ಪರಿಪೂರ್ಣ.

(೬)

**ಪರಿಪೂರ್ಣ**=ದೇಹ, ಗುಣ, ಕ್ರಿಯಾ ಮುಂ. ಪರಿಪೂರ್ಣ
**ಜ್ಞಾನಪೂರ್ಣ**=ಜ್ಞಾನದಿಂದ ಪರಿಪೂರ್ಣ
**ಆನಂದಪರಿಪೂರ್ಣ**=ಆನಂದದಿಂದ ಪರಿಪೂರ್ಣ

## ೧೫೦ನೆಯ ಹಾಡು

ಪರಮಾತ್ಮನೂ ಅವನ ಅವತಾರಗಳೂ ಒಂದೇ— ಎಂಬ ವಿಚಾರವನ್ನು ಮರೆಯ
ಬಾರದು.

ಈ ಹಾಡಿನಲ್ಲಿ ಪರಮಾತ್ಮನ ಒಂದೊಂದು ಅಂಗದಲ್ಲಿ ಒಂದೊಂದು ಅವತಾರ
ಕಲ್ಪಿಸಿ ಅದಕ್ಕೆ ಮಂಗಳವನ್ನು ಕೋರಿದ್ದಾರೆ.

೧ **ಸೂಕರ**=ವರಾಹ.

೨ **ಪಕ್ಷ**=ಬದಿ, ಮಗ್ಗಿಲು.

**ಕಕ್ಷ**=ಕೊಂಕುಳು

## ೧೫೧ನೆಯ ಹಾಡು

**ಇಭರಾಜ**=ಕರಿರಾಜ

**ವೃಂದಾರಕ**=ದೇವತೆ

**ಕ್ಷಿತಿಜನಪಾಲ**=ಲೋಕಸಂರಕ್ಷಕ

**ವ್ಯಾಸಾವತಾರ:—**ವ್ಯಾಸರು ವಿಷ್ಣುವಿನ ಅಂಶರೂಪದಿಂದ ಅವತಾರ
ತಾಳಿದವರೆಂದು ಉಲ್ಲೇಖವಿದೆ. (ಮತ್ಸ್ಯ ೫೨/೩-೧೧)

ಇವರು ವೇದಗಳನ್ನು ವ್ಯವಸ್ಥಿತರೂಪದಲ್ಲಿ ವಿಭಾಗಿಸಿದುದರಿಂದ
ಇವರಿಗೆ ವೇದವ್ಯಾಸರೆಂಬ ಹೆಸರಿದೆ. ಇವರ ತಂದೆ ಪರಾಶರ ಮುನಿ. ತಾಯಿ
ಸತ್ಯವತಿ. ಇವರು ಮಹಾಭಾರತ, ಭಾಗವತ, ಹರಿವಂಶ ಪುರಾಣಗಳ ಕರ್ತರು.
ಅಲ್ಲದೆ ಹದಿನೆಂಟು ಪುರಾಣಗಳನ್ನೂ ಇವರೇ ಬರೆದವರೆಂದು ಪರಂಪರೆ
ಹೇಳುತ್ತದೆ,

**ವಾಸಿತ+ಅನಂತಪದ**=ವೈಕುಂಠದಲ್ಲಿ ವಾಸಮಾಡುವ.

## ೧೫೨ನೆಯ ಹಾಡು

**ಮನ್ನಿಸು**=ಆದರಿಸು

**ಕಮ್ಮಗೋಲ**=ಪುಷ್ಪಬಾಣವುಳ್ಳವ. ಕಾಮ,

## ೧೫೩ನೆಯ ಹಾಡು

**ಭಾವಜ**=ಕಾಮ

**ಎಂಬತ್ತುನಾಲ್ಕುಲಕ್ಷ**= (ಹಾಡು ೧೧೯ ನೋಡಿರಿ)

## ೧೫೪ನೆಯ ಹಾಡು

೩ **ಬೊಂಬೆಯ ಮಾಡಿ.......ದೇವಗೆ,**— ಶ್ರೀಹರಿಯು ಜಗನ್ನಾಟಕ ಸೂತ್ರಧಾರ. ಎಲ್ಲ ಜೀವಿಗಳನ್ನೂ ಸೂತ್ರದ ಗೊಂಬೆಯಂತೆ ಕುಣಿಸು ವನು—ಎಂದು ಶ್ರೀದಾಸರು ತಮ್ಮ ಅನೇಕ ಕೃತಿಗಳಲ್ಲಿ ಹೇಳಿದ್ದಾರೆ.

## ೧೫೪ನೆಯ ಹಾಡು

ಇದರಲ್ಲಿ ದಶಾವತಾರದ ಮಂಗಳವನ್ನು ಹಾಡಿದ್ದಾರೆ.

## ೧೫೫ನೆಯ ಹಾಡು

೧ **ಮಧು** = ಕೈಟಭಾಸುರನ ಅಣ್ಣ, ವಟಪತ್ರಶಾಯಿ ನಾರಾಯಣನ ಕರ್ಣಮಲದಿಂದ ಹುಟ್ಟಿದವನು.

೨ **ಸುರಪತಿಯ........ಮಾಡಿದವಗೆ:**— ಕೃಷ್ಣನು ನರಕಾಸುರನನ್ನು ಸೋಲಿಸಿ, ಸತ್ಯಭಾಮೆ ಸಹಿತ ತಿರುಗಿ ಹೋಗುವಾಗ, ಪಾರಿಜಾತಪುಷ್ಪ ವನ್ನು ನೋಡಿದನು. ಸತ್ಯಭಾಮೆ ಅದನ್ನು ಬಯಸಿದಳು. ಕೊಡಲು ಹೇಳಿದರೆ ಇಂದ್ರನು ಅದನ್ನು ಕೊಡಲಿಲ್ಲ. ಆಗ ಶ್ರೀಕೃಷ್ಣ ಅದನ್ನು ಕದ್ದೊಯ್ದನು. ಇಂದ್ರ ಮತ್ತು ಅವನ ಮಗ ಜಯಂತ ಇಬ್ಬರೂ ಇವನ ಮೇಲೆ ಯುದ್ಧಕ್ಕೆ ಬಂದು ಸೋತುಹೋದರು,

(ಹರಿವಂಶ ೨/೬೫)

## ೧೫೬ನೆಯ ಹಾಡು

೧ **ತ್ರಿವಿಕ್ರಮ**=ಶ್ರೀಹರಿ
**ಶಕ್ರ**=ಇಂದ್ರ

**ಶಕ್ರನ ಗರ್ವವ....ಮಾಡಿದ:**—ಬಲಿಚಕ್ರವರ್ತಿ ವಿಶ್ವಜಿತ್ ಎಂಬ ಯಾಗಮಾಡಿ ಶಕ್ತಿಯನ್ನು ಸಂಪಾದಿಸಿ, ಇಂದ್ರನ ಸಂಗಡ ಯುದ್ಧಮಾಡಿ, ಅವನನ್ನು ಸೋಲಿಸಿ ಸ್ವರ್ಗರಾಜ್ಯ ವಶಪಡಿಸಿಕೊಂಡನು.

(ಭಾಗವತ ೮/೧೫)

**ಶುಕ್ರನ ಶಿಷ್ಯ**=ಬಲಿಚಕ್ರವರ್ತಿ. (ಶುಕ್ರಾಚಾರ್ಯರು ಇವನ ಗುರುಗಳು)

**ಭೃಂಗಕುಂತಳೆಯರ....ಕೆಡಿಸಿದ:**— ಬೌದ್ಧಾವತಾರದ ಕಥೆ

## ೧೫೭ನೆಯ ಹಾಡು

ಇದರಲ್ಲಿ ಶ್ರೀಹರಿ, ಲಕ್ಷ್ಮಿ ಇವರಿಬ್ಬರಿಗೂ ದಾಸರು ಮಂಗಳವನ್ನು ಕೋರಿದ್ದಾರೆ.

೨ **ಭೀಷ್ಮಕ**=ವಿದರ್ಭದೇಶದ ಅರಸು, ರುಕ್ಮಿಣಿಯ ತಂದೆ.

**ದಂಪತಿ**=ಗಂಡ-ಹೆಂಡಿರ ಜೊತೆ

೩ **ಜನಕ**— (ಹಾಡು ೫೩ ನೋಡಿರಿ)

## ೧೫೮ನೆಯ ಹಾಡು

೧ **ವಾತಸುತ**=ವಾಯುಪುತ್ರ

## ೧೫೯ನೆಯ ಹಾಡು

**ಗಮಕ**=ಸೌಂದರ್ಯಸೂಚಕ ಕ್ರಿಯೆ

೩ **ಆಜ್ಯ**=ತುಪ್ಪ

೪ **ಕಮಲದ ತಟ್ಟೆ**=ಕಮಲದ ಚಿತ್ರ ಬರೆದ ತಟ್ಟೆ

**ಹರಿದ್ರ**=ಹಳದಿ, ಅರಿಶಿಣ.

**ಕದಡಿ**=ಕಲಕಿ (ಕಮಾರತಿ ಕಮಲಾರತಿಯಾಗಿದೆ.)

**ವಿ. ಸೂ.**— ಆರತಿ ಎತ್ತುವವರು ವಿಶೇಷವಾಗಿ ಸುಮಂಗಲಿಯರು. ಸುಮಂಗಲಿಯರ ಅಲಂಕಾರಗಳನ್ನು ಭಕ್ತನ ಬಯಲಿಂದು ಸಮ್ಮುಗಕ್ಕೆ ಹೋಲಿಸಿ ಇದರಲ್ಲಿ ಹೇಳಿದ್ದಾರೆ.

## ೧೬೦ನೆಯ ಹಾಡು

೧ **ಮಧುರವಾಕ್ಯಸುಭಾಷ್ಯಗೆ** = ಮಧುರಭಾಷೆಯಲ್ಲಿ ಭಾಷ್ಯ ಬ
ದವನಿಗೆ.

**ಲಂಕಿಣಿ:—** ಹನುಮಂತನು ಲಂಕಾಪಟ್ಟಣವನ್ನು ಪ್ರವೇಶಿಸುವಾ
ಲಂಕೆಯ ಅಭಿಮಾನಿದೇವತೆಯಾದ ಲಂಕಿಣಿ ಅಥವಾ ಲಂಕೆ ಇವನನ್ನು ತ
ದಳು, ಆಗ ಹನುಮಂತನು ಮುಷ್ಟಿಯಿಂದ ಅವಳನ್ನು ಹೊಡೆದು ಸೋಲಿಸಿ
ಅವಳ ಸಹಾಯದಿಂದಲೇ ಲಂಕಾಪಟ್ಟಣವನ್ನು ಹೊಕ್ಕನು.

(ಮಹಾಭಾರತ ತಾತ್ಪರ್ಯ ೭/

೨ **ಪರ್ವತ**=ಶತಶೃಂಗಪರ್ವತ

೩ **ಶಂಕರ:—** (೭೮೮-೮೨೦) ಆದ್ಯಶಂಕರಾಚಾರ್ಯರು. ಅದ್ವೈತಮತ
ಸ್ಥಾಪಕರು. ಇವರು ಕೇರಳರಾಜ್ಯದ ಕಾಲಟಿ ಗ್ರಾಮದಲ್ಲಿ ಹುಟ್ಟಿದರು
ಈ ಗ್ರಾಮವು ಪೆರಿಯಾರ್ ನದಿಯ ತೀರದ ಮೇಲಿದೆ. ಇವರ
ಚಿಕ್ಕಂದಿನಲ್ಲಿಯೆ ಸಂನ್ಯಾಸ ಸ್ವೀಕಾರಮಾಡಿ, ಗೋವಿಂದಯತಿಗಳಲ್ಲಿ
ತತ್ತ್ವಜ್ಞಾನವನ್ನು ಅಭ್ಯಾಸಮಾಡಿದರು. ಪ್ರಸ್ಥಾನತ್ರಯಕ್ಕೆ ಭಾಷ
ಬರೆದು, ವೈದಿಕಧರ್ಮವನ್ನು ಪುನರುಜ್ಜೀವನಗೊಳಿಸಿದರು. ಇವರ
ಮೂಲಪೀಠ ಶೃಂಗೇರಿ. ಇದಲ್ಲದೆ ದ್ವಾರಕಾ, ಕೇದಾರ, ಜಗನ್ನಾಥಪುರಿ
ಗಳಲ್ಲಿ ಮಠಗಳನ್ನು ಸ್ಥಾಪಿಸಿ, ಭಾರತದ ತುಂಬ ವೈದಿಕ ಧರ್ಮಪ್ರಸಾರ
ಮಾಡಿ, ತಮ್ಮ ವಯಸ್ಸಿನ ೩೨ನೆಯ ವರ್ಷದಲ್ಲಿ ಗುಹಾಪ್ರವೇಶ
ಮಾಡಿದರು.

೪ **ಚಾರ್ವಾಕ** = ಬೃಹಸ್ಪತಿಯ ಶಿಷ್ಯ. ನಾಸ್ತಿಕಮತದ ಪ್ರಚಾರಕ
ಪ್ರತ್ಯಕ್ಷ ಪ್ರಮಾಣವೊಂದನ್ನೇ ಇವನು ಪುರಸ್ಕರಿಸಿದ್ದಾನೆ.

## ೧೬೧ನೆಯ ಹಾಡು

೧೬೧-೧೯೯ರ ವರೆಗಿನ ಹಾಡುಗಳಲ್ಲಿ ಶಯನೋತ್ಸವದ ವಿಷಯ
ಬಂದಿದೆ.

**ಸಿರಿ-ಭೂ-ದುರ್ಗಾ:—** ಇವರು ಮೂವರೂ ರಮಾದೇವಿಯರ ಪೂರ್ಣಸ್ವರೂಪರು.

**ಸರ್ವಜ್ಞಮುನಿ**=ಶ್ರೀಮಧ್ವಾಚಾರ್ಯರು

## ೧೬೨ನೆಯ ಹಾಡು

**ಪವಡಿಸು**=ಮಲಗು

**ಸೆಜ್ಜೆ**=(ಶಯ್ಯಾ) ಹಾಸಿಗೆ

**ಠಾಣದೀವಿಗೆ**=(ಸ್ಥಾನದೀಪಿಕಾ) ಸಮೆ

**ತೂಲ**=ಅರಳೆ—ಅರಳೆಯಂತೆ ಮೆತ್ತಗಿನ ತುಪ್ಪಳ.

**ಒರಗು**=ದಿಂಬು; ತಕ್ಕೆ

**ನಿಜಭೋಗ**=ರತಿಸುಖ

**ಗಡಿಯಾರ**=ಘಟಿಕಾಗಾರ;

ಹಿಂದಿನಕಾಲದಲ್ಲಿ ಜೋಯಿಸರು ಊರ ಹೆಬ್ಬಾಗಿಲಮೇಲಿರುವ ಮನೆ ...ಲ್ಲಿ (ಘಟಿಕಾಗಾರ) ಗಳಿಗೆಬಟ್ಟಲಹಾಕಿ, ಪ್ರಹರಕ್ಕೊಮ್ಮೆ ಗಂಟೆಬಾರಿಸು ...ದ್ದರು,

**ತಿದ್ದಿದ**=ಚೆನ್ನಾಗಿ ಊದುವ.

## ೧೬೩ನೆಯ ಹಾಡು

ಮಕ್ಕಳನ್ನು ಮಲಗಿಸುವಾಗ ತಾಯಂದಿರು ಲಾಲಿ, ತ್ರುಪ್ಪಿ ಮತ್ತು ಜೋಗುಳ ಪದ ...ಳನ್ನು ಹಾಡುವ ರೂಢಿ ಇದೆ.

**ಸಂತುಷ್ಟ**=ನಿತ್ಯತೃಪ್ತ

## ೧೬೪ನೆಯ ಹಾಡು

**ಅಖಿಳ........ಲಾಲಿ**=ಮತ್ಸ್ಯಾವತಾರ

**ಗಗನ—ಲಾಲಿ**=ವಾಮನನು ತ್ರಿವಿಕ್ರಮನಾಗಿ ಎರಡು ಪಾದದಿಂದ ಭೂಮಿಯನ್ನಳೆದು ಮೂರನೆಯ ಪಾದದಿಂದ ಗಗನವನ್ನು ಭೇದಿಸಿದನು.

೪ **ಬೊಟ್ಟಲಿ ಬೆಟ್ಟವ....ಲಾಲಿ:**—ಗೋವರ್ಧನೋದ್ಧಾರ

೪ **ಮೆಟ್ಟು**=ಹೆಜ್ಜೆ

**ಜಟ್ಟಿಗರು**=ತುಂಟರು, ಠಕ್ಕರು

## ೧೬೫ನೆಯ ಹಾಡು

೧ **ಕಾವ**=ಕಾಮ

೩ **ಪಾಕಶಾಸನ**=ಇಂದ್ರ

೪ **ಶ್ರುತಿಚೋರ**=ಸೋಮಕ ಅಥವಾ ತಮಸಾಸುರ.

**ಜತನದಿ........ಅಮೃತವಿತ್ತೆ:**— ಸಮುದ್ರಮಥನ ಕಾಲದಲ್ಲಿ ಸುರಾಸುರರಿಗೆ, ಶ್ರೀಹರಿಯು ಮೋಹಿನಿಯಾಗಿ ಅಮೃತವನ್ನು ಹಂಚಿ, ಅಸುರರನ್ನು ವಂಚಿಸಿ ಸುರರಿಗೆ ಮಾತ್ರ ಅಮೃತ ನೀಡಿದನು.

**ಕ್ಷಿತಿಯ ಕದೊಯ್ದವ**=ಹಿರಣ್ಯಾಕ್ಷ

**ಅತಿರಕ್ಷ**=ಚೆನ್ನಾಗಿ ರಕ್ಷಿಸಿದವ

೫ **ಕ್ರತು**=(ವಿಶ್ವಾಮಿತ್ರನ) ಯಜ್ಞ

೬ **ಭೂಪರೊಳ್ಕಾದಿ ಬಳಲಿದನೆ**=ಪರಶುರಾಮಾವತಾರ

೭ ಈ ನುಡಿಯಲ್ಲಿ ಬಾಲಕೃಷ್ಣನ ಲೀಲೆಯ ವರ್ಣನೆ ಇದೆ.

**ಕಣ್ಣದೃಷ್ಟಿಗೆ ಕರಗದ**=ದೃಷ್ಟಿತಾಗದ

೮ **ತಾರಕಸತಿವ್ರತಹಾರಕ**=ಬುದ್ಧ

**ವಾರಣ**=ಸಂಜೋಗಹಾಕಿ ಸಿದ್ಧವಾದ; ಬೆಟ್ಟದಂಥ

**ಸಾರಿದವರು**=ಭಕ್ತರು

## ೧೬೬ನೆಯ ಹಾಡು

೧ **ವರಗಿರಿ**=ಶ್ರೀಗಿರಿ, ತಿರುಪತಿ.

**ಕಾವೇರಿರಂಗಯ್ಯ**=ಶ್ರೀರಂಗಪಟ್ಟಣದ ಶ್ರೀರಂಗ

೩ **ಜಲಧಿಯೊಳ್ ಆಲದ ಎಲೆಯಲ್ಲಿ ಮಲಗಿದ:**—ಮಹಾಪ್ರಳಯಾನಂತರದ ಕಲ್ಪಾದಿಯಲ್ಲಿ ಪರಮಾತ್ಮನು ರಮಾದೇವಿಯನ್ನು ಆಲದೆಲೆಯನ್ನಾಗಿ ಮಾಡಿಕೊಂಡು, ತಾನು ಕೂಸಾಗಿ ಅದರ ಮೇಲೆ ಮಲಗಿ ಮಹಾಸಾಗರದಲ್ಲಿ ತೇಲುತ್ತಿರುತ್ತಾನೆ. (ಭಾಗವತ ೧೨/೪)

೫ **ಉರಗಾದ್ರಿ**=ಶೇಷಾಚಲ; ತಿರುಪತಿ

## ೧೬೭ನೆಯ ಹಾಡು

೩ ಯಶೋದೆ ಕೃಷ್ಣನನ್ನು ತೂಗುವಾಗ, ಅವನು ಶ್ರೀಹರಿಯ ಅವತಾರವೆಂದು ತಿಳಿದು, ಅತನ ಜನನ-ಮರಣರಾಹಿತ್ಯವನ್ನು ಸೂಚಿಸುತ್ತಾಳೆ.

**ನಿಧಾನಿ**=ಸಂಪತ್ತುಳ್ಳವ.

## ೧೬೮ನೆಯ ಹಾಡು

೧ **ಜಕ್ಕುಳಿಸುವ**=ಆಕರ್ಷಕವಾದ, ನಗೆಯಿಂದ ಕೂಡಿದ.

**ಸೊಕ್ಕಿದ—ತಿಲಕ:**— ಹಣೆಗಿಟ್ಟ ಕಸ್ತೂರಿತಿಲಕವು ಮದದಾನೆಯ ಮದೋದಕಧಾರೆಯಂತೆ ಶೋಭಿಸುತ್ತಿದೆ.

**ಈರೇಳು ಭುವನ**=ಹದಿನಾಲ್ಕು ಲೋಕಗಳು.

(೧) ಭೂಲೋಕದಿಂದ ಸತ್ಯಲೋಕದ ವರೆಗೆ ಮೇಲಿರುವ ಏಳು ಲೋಕಗಳು: (ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ)

(೨) ಭೂಮಿಯ ಕೆಳಗಿರುವ ಅತಳಲೋಕದಿಂದ ಪಾತಾಳದವರೆಗಿನ ಏಳು ಲೋಕಗಳು (ಅತಳ, ವಿತಳ, ಸುತಳ, ರಸಾತಳ, ತಳಾತಳ, ಮಹಾತಳ, ಪಾತಾಳ)

## ೧೬೯ನೆಯ ಹಾಡು

೩ ಯಶೋದೆ ಮೊಸರು ಕಡೆಯುವಾಗ ಕೃಷ್ಣನು ನಡೆಯಿಸಿದ ಕಿಡಿಗೇಡಿತನವನ್ನು ನಿವಾರಿಸುವುದಕ್ಕಾಗಿ ಆಡಿದ ಮಾತುಗಳು.

**ಮಂಥನ**=ಕಡೆಯುವಿಕೆ

**ಅಳಿದ**=ಅಳ್ದ=ಒಡೆಯ

೪ **ಅಷ್ಟಮಹಿಷಿ:**— (೧) ರುಕ್ಮಿಣಿ (೨) ಸತ್ಯಭಾಮೆ (೩) ನೀಲಾ ಅಥವಾ ಸತ್ಯಾ (೪) ಭದ್ರಾ (೫) ಮಿತ್ರವಿಂದಾ (೬) ಕಾಳಿಂದಿ (೭) ಲಕ್ಷಣಾ (೮) ಜಾಂಬವತಿ.

**ಸೋಳಸಾಸಿರ**=ಹದಿನಾರುಸಾವಿರ.

೫ **ದೇಹಿ**=ಜೀವ

ದೇಹ ಮತ್ತು ಜೀವಗಳ ಸಂಬಂಧವನ್ನು ಕಲ್ಪಿಸಿದವನು ನೀನು. ದೇಹವೇ ನಾನೆಂಬ ಭ್ರಾಂತಿಗೊಳಗಾದೆ. ಇದರಿಂದ ನಾನಾಡುವುದೆಲ್ಲ (ಅತಾತ್ತ್ವಿಕ) ಹುಸಿಮಾತೆನಿಸಿತು. ನೀನು ದೇವನೇ, ನಾನು ದೇಹಿಯೇ- ಎಂದರೆ ನಾನೂ ನೀನೂ ಎಂದೂ ಒಂದಾಗಲಾರೆವು.

## ೧೭೦ನೆಯ ಹಾಡು

೧೭೦-೧೭೭ ರ ವರೆಗಿನ ಹಾಡುಗಳೆಲ್ಲ ಉದಯರಾಗದ ಹಾಡುಗಳು. ಭಕ್ತ ವೈತಾಳಿಕನಾಗಿ ತಾರತಮ್ಯಾನುಸಾರವಾಗಿ ಬೇರೆಬೇರೆ ದೇವರನ್ನು ಎಚ್ಚರಿಸುವನು.

ಮೊದಲು ಪರಮಾತ್ಮನ ಭಕ್ತರನ್ನು ಎಬ್ಬಿಸುವುದು ಆವಶ್ಯಕ ಆಚಾರವಾದುದರಿಂದ, ಇಲ್ಲಿ ಹನುಮಂತನನ್ನು ಅವನ ತಾಯಿಯಾದ ಅಂಜನೆ ಎಚ್ಚರಿಸಿದಂತೆ ದಾಸರು ಹಾಡಿದ್ದಾರೆ :

**ತಂತ್ರ**=ಕುಟಿಲರಾಜಕಾರಣ

**ತಿದ್ದಿ ಹಾಕು**=ಭಾಷ್ಯಬರೆದು ದ್ವೈತತತ್ತ್ವವನ್ನು ಸಮರ್ಥಿಸು.

## ೧೭೧ನೆಯ ಹಾಡು

೧ **ಜಾವ**=(ಯಾಮ) ಮೂರುತಾಸು.

**ಚೆಲ್ಲಪಿಲ್ಲಿರಾಯ**:— ಇದರ ಮೂಲಶಬ್ದವು ಚೆಲ್ವಪಿಳ್ಳೆ (ತಮಿಳು); ಅದರೆ ಮುದ್ದುಬಾಲಕ. ಮೇಲುಕೋಟೆಯ ಚೆಲುವ ನಾರಾಯಣನನ್ನು ಹಳ್ಳಿಗರು ಇದೇ ಹೆಸರಿನಿಂದ ಕರೆಯುತ್ತಾರೆ.

**ಮೇಲುಕೋಟೆ:**—ಬೆಂಗಳೂರು-ಮೈಸೂರು ರೇಲ್ವೆದಾರಿಯ ಮೇಲಿರುವ ಪಾಂಡವಪುರ ನಿಲ್ದಾಣದಿಂದ ೧೮ ಮೈಲು ದೂರದಲ್ಲಿದೆ. ಶ್ರೀವೈಷ್ಣವರ

ನಾಲ್ಕು ಪ್ರಸಿದ್ಧ ಕ್ಷೇತ್ರಗಳಲ್ಲಿ ಇದೂ ಒಂದು. ಇಲ್ಲಿಯ ಶ್ರೀನಾರಾಯಣ ಮೂರ್ತಿಯನ್ನು ಶ್ರೀರಾಮಾನುಜಾಚಾರ್ಯರು ಸ್ಥಾಪಿಸಿದ್ದಾರೆ.

೩ **ವಿಮಲಕಾಪುರ**=ಇದರ ಮೂಲ ಹೆಸರು ಮಲಕಾಪುರ; ದಾಸರು ಅದನ್ನು ವಿಮಲಕಾಪುರವೆಂದು ಬದಲಿಸಿದ್ದಾರೆ.

## ೧೭೬ನೆಯ ಹಾಡು

**ಡಂಗುರಹೊಯ್ದು**=ಸಾರಿ

೫ **ಅಳಗಾದ್ರೀಶ**=(ಹಾಡು ೫೨. ನುಡಿ ೪)

**ಬಿಂದುಮಾಧವ**= ( ,, ,, ನುಡಿ ೩ )

**ವಿ. ಸೂ.**— ಕೋಳಿ ಜಾವಕ್ಕೊಮ್ಮೆ ಕೂಗುತ್ತದೆಂಬ ಸಾಂಪ್ರದಾಯಿಕ ಕಲ್ಪನೆಗೆ ದಾಸರು ಧಾರ್ಮಿಕಸ್ವರೂಪ ಕೊಟ್ಟಿದ್ದಾರೆ.

## ೧೭೭ನೆಯ ಹಾಡು

೧ **ಉಪ್ಪವಡಿಸು**=ಬೆಳಗಿನಲ್ಲಿ ಏಳು

**ಯೋಗರತಿ**=ಯೋಗಾವಸ್ಥೆಯಲ್ಲಿಯ ರತಿ.

೩ **ರಕ್ಕಸ**=ತುಂಬಿಬೆಳೆದ

ಇವರಲ್ಲಿ ಲಾಕ್ಷಣಿಕವಾಗಿ ಹೇಳಿದ ಸಂಯೋಗನಾಯಿಕೆಯ ರತಿಯ ನಂತರದ ದೈಹಿಕಭಾವ-ಭಂಗಿಗಳನ್ನೆಲ್ಲ ದಾಸರು ವಿವರಿಸಿದ್ದಾರೆ. ಶೃಂಗಾರ ಭಾವದ ಚಿತ್ರಣಕ್ಕೆ ಇದೊಂದು ಉತ್ತಮ ಉದಾಹರಣೆ:—

## ೧೭೮ನೆಯ ಹಾಡು

ಲಕ್ಷ್ಮೀದೇವಿ ತನ್ನ ಪತಿಯಾದ ನಾರಾಯಣನನ್ನು ಎಚ್ಚರಿಸುತ್ತಾಳೆ.

೨ **ಶೌನಕ**=ಶುನಕ ಮತ್ತು ಪ್ರಮದ್ವರೆ ಇವರ ಮಗ. ಈತನು ನೈಮಿಷಾರಣ್ಯದಲ್ಲಿಯ ಕುಲಪತಿ. ಸೂತಪುರಾಣಿಕನಿಂದ ಇತಿಹಾಸ-ಪುರಾಣಗಳನ್ನು ಕೇಳಿದ ಮಹರ್ಷಿಗಳಲ್ಲಿ ಇವನು ಪ್ರಮುಖನು.

(ಭಾರತ, ಆದಿ, ೫)

೩ **ಕಿಂಪುರುಷ**=ದೇವತೆಗಳಲ್ಲಿಯ ಒಂದು ಪಂಗಡ. ಇವರಿಗೆ ಮನುಷ್ಯ
ಮೋರೆ, ಕುದುರೆಯ ದೇಹ ಇರುತ್ತದೆ. (ಭಾರತ. ಆದಿ, ೬೬)

**ಉರಗ**=ನಾಗರು; ಇವರು ಪಾತಾಳಲೋಕದವರು.

**ಅರುಣ**=ಸೂರ್ಯನ ಸಾರಥಿ:— ಇವನು ವಿನತೆಯ ಮಗ. ಗರುಡ
ಅಣ್ಣ. ತನ್ನ ಸವತಿಯು ಮಕ್ಕಳನ್ನು ಹಡೆದರೂ ತನಗೆ ಮಕ್ಕಳಾಗಲಿಲ್ಲವೆಂಬ ಸಿಟ್ಟಿ
ನಿಂದ ವಿನತೆ ತನ್ನ ಬಸಿರನ್ನು ಹಿಚುಕಿಕೊಂಡಳು. ಅದರಿಂದ ಬೆಳೆವಣಿ
ಪೂರ್ಣವಾಗದೆ ಕಾಲುಗಳಿಲ್ಲದ ಮಗ ಹುಟ್ಟಿದ. ಇವನೇ ಅರುಣ. 'ಅನೂರು
ಎಂದೂ ಇವನಿಗೆ ಹೆಸರಿದೆ.

೪ **ಸವಿದು**=ರುಚಿನೋಡಿ, (ನಾಮಸ್ಮರಣೆ ಮಾಡಿ)

**ದಧಿ**=ಮೊಸರು

## ೧೭೪ನೆಯ ಹಾಡು

೧ **ರವಿ-ಶಶಿಸಯನ** = ಸೂರ್ಯ-ಚಂದ್ರರಂತೆ ಕಳೆಯುಳ್ಳ ಕಣ್ಣು
ಗಳುಳ್ಳವ

**ಮುಡಿವಾಳ**=ಬಾಳದ ಬೇರು

**ಬಿಳಿಯೆಲೆ**=ವೀಳ್ಯದೆಲೆ (ಅಂಬಾಡಿ)

೨ **ಪನ್ನೀರು**=ಪರಿಮಳಜಲ

**ದೇವಾಂಗವಸ್ತ್ರ**=ಮಡಿಬಟ್ಟೆ

## ೧೭೫ನೆಯ ಹಾಡು

೧ **ತಳುವು**=ತಡ

**ಸೆಳೆಮಂಚ**=ಸೆಳೆಯಿಂದ ಮಾಡಿದ ತೂಗುವ ಮಂಚ

೨ **ಉರಿಗೈಯ**=ಭಸ್ಮಾಸುರ

ಶಿವನು ಭಸ್ಮಹಚ್ಚಿಕೊಳ್ಳುತ್ತಿರುವಾಗ ಅವರಲ್ಲಿಯ ಹರಳಿನಿಂದ ಹುಟ್ಟಿ
ಅಸುರ. ತಾನು ಇನ್ನೊಬ್ಬರ ತಲೆಯಮೇಲೆ ಕೈಯನ್ನು ಇರಿಸಿದರೆ, ಅವ

ಸ್ಮವಾಗಬೇಕೆಂಬ ವರವನ್ನು ಶಿವನಿಂದ ಪಡೆದು, ಆವನ ಮೇಲೆಯೆ ಪ್ರಯೋಗ ಾಡಹೋದನು. ಆಗ ಶ್ರೀಹರಿ ಮೋಹಿನೀರೂಪ ತಾಳಿ ಅವನ ಕೈಯನ್ನೇ ವನ ತಲೆಯ ಮೇಲಿರಿಸಲು ಹಚ್ಚಿ ಸುಟ್ಟುಬೂದಿ ಮಾಡಿದನು.

(ಇದು ಪರಂಪರೆಯಿಂದ ಬಂದ ಕಥೆ)

**ಕಾಲ** ಆದಿಶೇಷ

**ಮೇನಕೆ** = ಸ್ವರ್ಗಲೋಕದ ಅಪ್ಸರೆಯರಲ್ಲಿ ಒಬ್ಬಳು. ಇವಳು ಊರ್ಣಾಯು ಗಂಧರ್ವನ ಹೆಂಡತಿ. ಭೂಮಿಯ ಮೇಲೆ ನಡೆಯುವ ತಪೋಭಂಗಕ್ಕಾಗಿ ಇಂದ್ರನು ಇವಳನ್ನು ಕಳಿಸಿಕೊಡುವ ಕಥೆಗಳು ಬಹಳ ಇವೆ. ಇವಳು ಶಕುಂತಲೆ ಮತ್ತು ದ್ರುಪದರಾಜನ ತಾಯಿ.

(ಭಾರತ, ಆದಿ, ೯೩–೧೫೦)

**ಶಂಬರಾರಿ** = ಕಾಮ:— ಶಂಬರನು ಒಬ್ಬ ರಾಕ್ಷಸನು. ಕೃಷ್ಣನ ಮಗ ನಾದ ಪ್ರದ್ಯುಮ್ನನಿಂದ ತನಗೆ ಸಾವು ಒದಗುವದೆಂದು ತಿಳಿದು, ಆತನನ್ನು ಕೊಲ್ಲುವುದಕ್ಕೆ ಪ್ರಯತ್ನಿಸಿ, ಕೊನೆಗೆ ತಾನೇ ಅವನಿಂದ ಹತನಾದ.

(ಭಾಗವತ ೧೦/೫೫)

**ತೇಜಿಯಾಟ** = ಸಾರಥಿತನ

## ೧೭೬ನೆಯ ಹಾಡು

**ಊರ್ವಶಿ** = ಸ್ವರ್ಗಲೋಕದ ಅಪ್ಸರೆ. ನಾರಾಯಣ ಋಷಿಯ ತೊಡೆ ಯಿಂದ ಹುಟ್ಟಿದವಳು. ಇವಳು ಅತಿ ಚೆಲುವೆ. ಇವಳು ಋಗ್ವೇದ ಕಾಲದಿಂದಲೂ ಪ್ರಸಿದ್ಧಳಾಗಿದ್ದಾಳೆ. 'ಉರ್ವಶಿ' ಎಂತಲೂ ಇವಳಿಗೆ ಹೆಸರಿದೆ.

## ೧೭೭ನೆಯ ಹಾಡು

**ಧೂಳಿದರ್ಶನ** = ಯಾತ್ರಿಕರು ಕ್ಷೇತ್ರಕ್ಕೆ ಬಂದ ಕೂಡಲೆ ತೆಗೆದು ಕೊಳ್ಳುವ ದೇವರ ದರ್ಶನ.

**ಕಾವಡಿ** = ಕಂಬಿ; ಅಡ್ಡಿ.

## ೧೭೪ನೆಯ ಹಾಡು

ಯಾವುದಾದರೂ ದೇವತಾಕಾರ್ಯ ಮುಗಿಸುವಾಗ, ಈ ಹಾಡನ್ನು ಹಾಡುವ ಪರಂಪರೆಯಿದೆ. ಇದರೊಡನೆ ಸಂಸ್ಕೃತದ "ತದೇವ ಲಗ್ನಂ ಸುದಿನಂ ತದೇವ" ಎಂಬ ಶ್ಲೋಕವನ್ನು ಹೋಲಿಸಿ ನೋಡಿರಿ.

**|| ಓಂ ಶಾಂತಿಃ ಶಾಂತಿಃ ಶಾಂತಿಃ ||**

---

# ಹಾಡುಗಳ ಅಕಾರಾದಿಸೂಚಿ

———

# ಪರಿಶಿಷ್ಟ ೩

## ಸಂಗೀತ ಸಂಬಂಧ

### ಈ ಸಂಕಲನದಲ್ಲಿ ಕಾಣುವ ರಾಗ-ತಾಳಗಳು

ಹೆಚ್ಚಾಗಿ ಹಸ್ತಪ್ರತಿಯಲ್ಲಿದ್ದ ರಾಗ-ತಾಳಗಳನ್ನೇ ಆಯ ಹಾಡುಗಳಮೇಲೆ ಬರೆಯಲಾಗಿದೆ. ಹಸ್ತಪ್ರತಿಯಲ್ಲಿ ರಾಗ-ತಾಳಗಳಿಲ್ಲದ ಹಾಡುಗಳಿಗಾಗಿ, ಪರಂಪರೆಯಾಗಿ ಹಾಡುತ್ತ ಬಂದಿರುವ ಧಾಟಿಗಳನ್ನು ತಿಳಿದುಕೊಂಡು, ಅವುಗಳಿಗೆ ಅನುಗುಣವಾದ ರಾಗ-ತಾಳಗಳನ್ನು ಹೊಂದಿಸಿ ಬರೆಯಲಾಗಿದೆ. ಸಂಗೀತಗಾರರು ಇಲ್ಲಿಯ ಹಾಡುಗಳನ್ನು ಯಾವಯಾವ ರಾಗ-ತಾಳಗಳಿಗೆ ಹೊಂದಿಸಿ ಹಾಡುತ್ತಿದ್ದರೆಂಬುದು, ಪರಂಪರೆಯ ವಿಚ್ಛಿತ್ತಿಯ ಮೂಲಕ—ಸುಲಭವಾಗಿ ಗೊತ್ತಾಗುವಂತಿಲ್ಲ; ಸಾಮಾನ್ಯವಾಗಿ ಭಕ್ತಪರಂಪರೆಯುವರು ಹಾಡುತ್ತ ಬಂದಿರುವ ಧಾಟಿಗಳ ರಾಗಗಳೇ ಮೂಲರಾಗಗಳಾಗಿರಬಹುದೆಂದು ಭಾವಿಸುವಂತಿದೆ. ಅವರ ಧಾಟಿಗಳಲ್ಲಿ ರಾಗಗಳ ವೈವಿಧ್ಯಕಾಣುವುದಾದರೂ, ತಾಳಗಳಲ್ಲಿ—ಸೂಳಾದಿಯ ಸಪ್ತತಾಳಗಳಲ್ಲದೆ ಅದರ ಜಾತಿಗಳಾವುವೂ ಕಂಡುಬರುವುದಿಲ್ಲ. ಸಂಗೀತಗಾರರು ಹಾಡುತ್ತಿದ್ದ ಕೀರ್ತನೆಗಳು ತಾಳಜಾತಿ ವೈವಿಧ್ಯದಿಂದ ಕೂಡಿರಬಹುದು.

### ೧. ರಾಗಗಳ ಅಕಾರಾದಿಸೂಚಿ

| | ರಾಗಗಳು | ಹಾಡಿನ ಕ್ರಮಾಂಕ |
|---|---|---|
| ೧ | ಅಠಾಣ | ೪೬ |
| ೨ | ಆನಂದಭೈರವಿ | ೩೪, ೪೯, ೭೫, ೮೨, ೯೨, ೯೩, ೧೨೧, ೧೨೮, ೧೩೧, ೧೪೬, ೧೬೮ |
| ೩ | ಆರಭಿ | ೮೬, ೯೯. |
| ೪ | ಕಲ್ಯಾಣಿ | ೨೩, ೩೮, ೩೯, ೫೨, ೯೦, ೯೫, ೯೬, ೯೭, ೧೧೧, ೧೧೨, ೧೨೯, ೧೩೫, ೧೩೭. ೧೪೨, ೧೪೭, ೧೫೬, ೧೬೧ |

| | | |
|---|---|---|
| ೨೮ | ಮಧ್ಯಮಾವತಿ | ೩೬, ೫೦, ೫೩, ೫೫, ೬೨, ೭೦, ೮೭, ೮೮, ೧೫೦, ೧೫೭, ೧೬೨, |
| ೨೯ | ಮುಖಾರಿ | ೧೭, ೧೯, ೮೫, ೮೯, ೧೩೦. |
| ೩೦ | ಮೋಹನ | ೨೮, ೪೨, ೪೩, ೬೩, ೯೧, ೧೦೩, ೧೧೩, ೧೧-, ೧೨೨, ೧೭೬. |
| ೩೧ | ರೇಗುಪ್ತಿ | ೭೮, ೧೦೧, ೧೦೯, ೧೧೩. |
| ೩೨ | ವಸಂತ | ೧೮ |
| ೩೩ | ಶಂಕರಾಭರಣ | ೧೨, ೧೪, ೨೯, ೪೦, ೪೫, ೬೦, ೬೧, ೬೪, ೬೮, ೬೯, ೧೦೪, ೧೦೫, ೧೦೭, ೧೦೮, ೧೨೪, ೧೨೫, ೧೪೩, ೧೪೪, ೧೬೬ |
| ೩೪ | ಶಹನ | ೩೦, ೧೧೦. |
| ೩೫ | ಶ್ರೀರಾಗ | ೧೫೮, ೧೬೫, ೧೬೭, ೧೭೧. |
| ೩೬ | ಸಾರಂಗ | ೪೮, ೭೧, ೧೪೧, |
| ೩೭ | ಸಾವೇರಿ | ೨೨, ೩೧, ೬೫, ೭೭, ೮೦, ೧೨೧, ೧೭೫. |
| ೩೮ | ಸುರಟಿ | ೧೦, ೧೫೩. |
| ೩೯ | ಸೌರಾಷ್ಟ್ರ | ೫, ೨೪, ೩೩ |
| *೪೦ | ಹುಸೇನಿ | ೯೮ |

* ಈ ಚಿಹ್ನವಿರುವ ರಾಗಗಳು ಹಿಂದುಸ್ತಾನಿ ಸಂಗೀತದಿಂದ ಬಂದುವುಗಳಾಗಿವೆ.

## ೨. ತಾಳಗಳ ಅಕಾರಾದಿ

| | | | |
|---|---|---|---|
| ೧ | ಅಟತಾಳ | ೫ | ಝಂಪೆ |
| ೨ | ಆದಿತಾಳ | ೬ | ತ್ರಿಪಿಡಿ |
| ೩ | ಏಕತಾಳ | ೭ | ಧ್ರುವತಾಳ |
| ೪ | ಛಾಪುತಾಳ | ೮ | ಮಟ್ಟೆತಾಳ |

೯ ರೂಪಕತಾಳ

ವಿ. ಸೂ.— ಇದರಲ್ಲಿಯ ‘ ಆದಿ ’ ‘ ಛಾಪು ’ ಎರಡನ್ನು ಬಿಟ್ಟರೆ ಮಿಕ್ಕ ಏಳು ಸುಳಾದಿ ತಾಳಗಳೆನಿಸುವುವು.

## ೩. ಸಂಗೀತಕ್ಕೆ ಸಂಬಂಧಿಸಿದ ಶಬ್ದಗಳ ಪರಿವಿಡಿ

# ಪರಿಶಿಷ್ಟ ೪

## ಇಪ್ಪತ್ತುನಾಲ್ಕು ತತ್ತ್ವಗಳು
## ಮತ್ತು
## ಅವುಗಳ ಅಭಿಮಾನಿದೇವತೆಗಳು

| | ತತ್ತ್ವಗಳು | ಅಭಿಮಾನಿದೇವತೆಗಳು |
|---|---|---|
| ೧ | ಅವ್ಯಕ್ತ | ಶ್ರೀದೇವಿ, ಸರಸ್ವತಿ–ಭಾರತಿದೇವಿಯರು |
| ೨ | ಮಹತ್ | ಬ್ರಹ್ಮ–ವಾಯುದೇವರು |
| ೩ | ಅಹಂಕಾರ | ಶೇಷ–ಗರುಡ–ರುದ್ರರು |
| ೪ | ಮನಸ್ | ಇಂದ್ರ—ಕಾಮರು |
| ೫ | ಶ್ರೋತ್ರ | ದಿಗ್ದೇವತೆಗಳು |
| ೬ | ತ್ವಕ್ | ಅಹಂಕಾರಿಕ ಪ್ರಾಣದೇವರು |
| ೭ | ಚಕ್ಷುಸ್ | ಸೂರ್ಯ    ೮   ಜಿಹ್ವಾ   ವರುಣ |
| ೯ | ಘ್ರಾಣ | ಅಶ್ವಿನೀ ದೇವತೆಗಳು   ೧೦   ವಾಕ್   ಅಗ್ನಿ |
| ೧೧ | ಪಾಣಿ | ಶಚಿ, ರತಿ, ಅನಿರುದ್ಧ, ಸ್ವಾಯಂಭುವ ಮನು, ದಕ್ಷ, ಬೃಹಸ್ಪತಿ. |
| ೧೨ | ಪಾದ | ಜಯಂತ   ೧೩   ಪಾಯು   ಮಿತ್ರ |
| ೧೪ | ಉಪಸ್ಥ | ವಸಿಷ್ಠ, ಅತ್ರಿ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ಅಂಗಿರಸ್, ವೈವಸ್ವತ, ವಿಶ್ವಾಮಿತ್ರ. |
| ೧೫ | ಶಬ್ದ | ಬೃಹಸ್ಪತಿ |
| ೧೬ | ಸ್ಪರ್ಶ | ಅಪಾನವಾಯುದೇವರು |
| ೧೭ | ರೂಪ | ವ್ಯಾನವಾಯುದೇವರು |
| ೧೮ | ರಸ | ಉದಾನವಾಯುದೇವರು |
| ೧೯ | ಗಂಧ | ಸಮಾನವಾಯುದೇವರು.   ೨೦   ಆಕಾಶ   ಗಣಪತಿ |
| ೨೧ | ವಾಯು | ಪ್ರವಹ (ಜಡ) ವಾಯು   ೨೨   ತೇಜಸ್   ಅಗ್ನಿ |
| ೨೩ | ಜಲ | ವರುಣ.   ೨೪   ಪೃಥ್ವಿ   ಧರಾದೇವಿ. |

# ದೇವತಾ ತಾರತಮ್ಯಕ್ರಮ

ಕಕ್ಷೆ ದೇವತೆಗಳು (ಕಕ್ಷೆಗಳು–೩೨)

೧ ಶ್ರೀವಿಷ್ಣುಸರ್ವೋತ್ತಮ (ಅವತಾರಗಳು ಸಹ)
೨ ರಮಾದೇವಿ (ಅವತಾರಗಳು). ೩ ಬ್ರಹ್ಮ-ವಾಯು (ಅವತಾರಗಳು)
೪ ಸರಸ್ವತಿ, ಭಾರತಿ. ೫ ಗರುಡ, ಶೇಷ, ರುದ್ರ
೬ ಜಾಂಬವತಿ ಮುಂ ಕೃಷ್ಣನ ಷಣ್ಮಹಿಷಿಯರು
೭ ಸೌಪರ್ಣಿ, ವಾರುಣಿ, ಪಾರ್ವತಿ. ೮ ಇಂದ್ರ, ಕಾಮ
೯ ಅಹಂಕಾರಿಕ ಪ್ರಾಣದೇವರು
೧೦ ಸ್ವಾಯಂಭುವ, ದಕ್ಷ, ಗುರು, ಅನಿರುದ್ಧ, ಶಚಿ, ರತಿ
೧೧ ಪ್ರವಹ ವಾಯುದೇವರು ೧೨ ಸೂರ್ಯ-ಚಂದ್ರ, ಯಮ, ಶತರೂಪಾ
೧೩ ವರುಣ ೧೪ ನಾರದ
೧೫ ಅಗ್ನಿ, ಭೃಗು, ಪ್ರಸೂತಿದೇವಿ
೧೬ ಪ್ರಹ್ಲಾದ, ಸಪ್ತಋಷಿಗಳು, ವೈವಸ್ವತಮನು, ವಿಶ್ವಾಮಿತ್ರ
೧೭ ಮಿತ್ರ, ನಿರ್ಋತಿ, ಪ್ರವಹಿದೇವಿ, ತಾರಾದೇವಿ
೧೮ ವಿಷ್ವಕ್ಸೇನ, ಗಣಪತಿ, ಅಶ್ವಿನಿ ದೇವತೆಗಳು, ಕುಬೇರ, ಶೇಷಶತಸ್ಥರು
೧೯ ಕರ್ಮಜ ದೇವತೆಗಳು
೨೦ ಪರ್ಜನ್ಯ, ಗಂಗಾ, ಸಂಜ್ಞಾ, ರೋಹಿಣಿ, ಮತ್ತು ಉಷಾದೇವಿ
೨೧ ಕೂರ್ಮಾದಿ ಅನಾಖ್ಯಾತ ದೇವತೆಗಳು
೨೨ ಸ್ವಾಹಾ (ಅಗ್ನಿಪತ್ನಿ). ೨೩ ಬುಧ
೨೪ ದೇವಕೀದೇವಿ. ಯಶೋದಾದೇವಿ, ಮತ್ತು ಉಷಾ (ಅಶ್ವಿನಿ–ಪತ್ನಿ)
೨೫ ಶನಿ, ಧರಾದೇವಿ. ೨೬ ಪುಷ್ಕರ (ಕರ್ಮಾಭಿಮಾನಿ)
೨೭ ಅಜಾನಜ ದೇವತೆಗಳು. ೨೮ ಚಿರಪಿತೃಗಳು
೨೯ ದೇವಗಂಧರ್ವರು. ೩೦ ಮನುಷ್ಯಗಂಧರ್ವರು
೩೧ ಕ್ಷಿತಿಪರು ೩೨ ಮನುಷ್ಯೋತ್ತಮರು

## ಈ ಸಂಕಲನದಲ್ಲಿ ಕಾಣುವ ಊರ ಹೆಸರುಗಳು*



* ಊರ ಹೆಸರುಗಳ ಮುಂದೆ ಇರುವ ಅಂಕಿಗಳು ಪುಟಸಂಖ್ಯೆಗಳನ್ನು ಸೂಚಿಸುವುವು.

## ನದಿಗಳು

# ಪರಿಶಿಷ್ಟ ೫

## ಅಂಕಿತನಾಮಗಳು

### ಎ



### ಕ

## ಚ



## ಜ



## ತ

## ದ

### ಫ



### ಬ

## ಮ

## ಲ

## ಶ

ಸ

## ಹ

---

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫ | ೧೬ | ವಿತ್ಠಲ | ವಿಟ್ಠಲ |
| ,, | ೬. ೪ | ಎ. ಊ. ಓ | ಊ. ಎ. ಓ |
| ೮ | ೧೫ | ತ್ರಿವಿಡತಾಳ | ತ್ರಿವಿಡಿತಾಳ |
| ೧೦ | ೧೮ | ಮುಂಹಿಮೆ | ಮಹಿಮೆ |
| ೧೨ | ೧೦ | ಕಾರ | ಠಾರ |
| ,, | ೧೮ | ಅರಂಭಿಸಲು | ಆರಂಭಿಸಲು |
| ೧೪ | ೧೩ | ಊ–ಎ. ಇ | ಇ. ಊ–ಎ. |
| ,, | ೧೫ | ಎ. ಇ ಊ | ಇ–ಊ. ಎ. |
| ೨೦ | ೧ | ಒಂದೆ | ೧ ಒಂದೆ |
| ,, | ೬. | ಸಿಗಲಿಲ್ಲ | ಸಿಕ್ಕಲಿಲ್ಲ |
| ೨೩ | ೧೧ | —— | ಉಗಾಭೋಗ |
| ೨೭ | ೫ | ನಿಟ್ವೊರಸಿ | ನಿಟ್ಟೊರಸಿ |
| ,, | ೭ | ಮೂರ್ಛೆಯು | ಮೂರ್ಚ್ಛೆಯು |
| ,, | ೧೫ | ಛಾಪೆ. | ಛಾಪು |
| ೩೦ | ೧ | ತಾಳ–ಆಟ | ತಾಳ–ಅಟ |
| ,, | ೨೧ | ಯೆನಿಸೀ | ಯೆನಿಸಿ |
| ,, | ೨೩ | ಸುತ್ತ | ಸುತ |
| ,, | ೯ | ತುಂಡಿಸುವಾಗೆ | ತುಂಡಿಸುವಾಗ |
| ೩೩ | ೨೧ | ಮಾಯೀ | ಮಾಯಿ |
| ೩೪ | ೮ | ಪ್ರೆಮಿ | ಪ್ರೇಮಿ |
| ೩೫ | ೨ | ಮಹಿದು | ಮಹಿಮೆ |
| ೪೨ | ೧೬ | ಸಂಕರ | ಶಂಕರ |
| ೪೫ | ೯ | ವಿತ್ಠಲ | ವಿಟ್ಠಲ |
| ೪೬ | ೧೫ | ಶೀಮೆಗೆ | ಸೀಮೆಗೆ |
| ೪೭ | ೧೨ | ವಾರ್ದಿ | ವಾರ್ಧಿ |
| ೪೮ | ೨೦ | ಯಿಗಳ ಮತಗಳ | ಯಿಗಳ |
| ೪೯ | ೭ | ಚೈತನ್ರ | ಚೈತನ್ಯ |
| ೫೧ | ೭ | ಭ್ವೆರವಿ | ಭೈರವಿ |
| ೫೪ | ೩ | ಆಕ್ಕರ | ಅಕ್ಕರ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ,, | ೭ | ಆಕ್ರೂರ | ಅಕ್ರೂರ |
| ,, | ,, | ರಂ | ರ |
| ೫೭ | ,, | ಸಿಗುವುದಿಲ್ಲ | ಸಿಕ್ಕುವುದಿಲ್ಲ |
| ೫೯ | ೪ | ಸಂತೋಪದಿ | ಸಂತೋಷದಿ |
| ೬೧ | ೪ | ವಿತ್ಠಲ | ವಿಟ್ಠಲ |
| ,, | ೮ | ಕೊರಳೂಳು | ಕೊರಳೊಳು |
| ೬೬ | ೫ | ತಾಳ– | ತಾಳ–ಆದಿ |
| ೬೮ | ೪ | ಕೂಳಲ | ಕೊಳಲ |
| ೬೯ | ೫ | ವೀತಾಂಬರ | ಪೀತಾಂಬರ |
| ೭೪ | ೧೬ | ಆಂದು | ಅಂದು |
| ೭೬ | ೫ | ಕಪ್ಪು | ಕಪ್ಪ |
| ೭೮ | ೯ | ಕಾವೇರಿ | ಸಾವೇರಿ |
| ೮೨ | ೧೦ | ಕರಂಣ | ಕರುಣ |
| ,, | ೧೬ | ವೋರೆಯು | ಮೊರೆಯು |
| ೯೫ | ೯ | ಆನುದಿನ | ಅನುದಿನ |
| ,, | ೧೬ | ೯೬ (?) | ೯೬ |
| ೧೦೧ | ೧೭ | ಖವಾಜ್ | ಖವಾಚು |
| ೧೦೭ | ೩ | ಪುರುಷೊತ್ತಮ | ಪುರುಷೋತ್ತ |
| ೧೧೦ | ೯ | ದ್ರುವನಿಗೆ | ಧ್ರುವನಿಗೆ |
| ೧೧೧ | ೧೩ | ನವವೋಜು | ನವರೋಜು |
| ೧೧೫ | ೨ | ಸ್ತ್ರಿಯರಲಿ | ಸ್ತ್ರೀಯರಲಿ |
| ೧೧೮ | ೯ | ಶಂಕರಾಭರಣ | ಶಂಕರಾಭರಣ |
| ೧೨೫ | ೩ | ಬಲನೆ | ಲಲನೆ |
| ,, | ೭ | ಎ | ಏ |
| ೧೩೮ | ೫ | ದೂರ್ವಾಸ | ದುರ್ವಾಸ |
| ೧೫೬ | ೭ | ಪ್ರೋಕ್ಕ | ಪ್ರೊಕ್ಕ |
| ೧೫೮ | ೧ | ಸದ್ಧಡಗಿತು | ಸದ್ದಡಗಿತು |